'ಮೂಲ ಶಿಕ್ಷಣ'ದ ಮೊದಲನೆಯ ಆವೃತ್ತಿಯು ಕನ್ನಡ ಪ್ರಾಥಮಿಕ ಟ್ರೇನಿಂಗ ಕಾಲೇಜುಗಳಲ್ಲಿ ಅಭ್ಯಾಸ ಮಾಡುತ್ತಿರುವ ಶಿಕ್ಷಕ-ಶಿಕ್ಷಕಿಯರಿಗೆ ಪಠ್ಯಪುಸ್ತಕವೆಂದು ವಿದ್ಯಾಖಾತೆಯ ಪಠ್ಯಪುಸ್ತಕ ಸಮಿತಿಯವರಿಂದ ಮಂಜೂರಾಗಿದೆ.

# ಮೂಲ ಶಿಕ್ಷಣ




ಲೇಖಕರು :

**ಮ. ಗು. ಹಂದ್ರಾಳ**, ಬಿ. ಎ. (ಆನರ್ಸ), ಬಿ. ಟಿ., ಡಿ. ಪಿ. ಇಡಿ.

(ಮೂಲ ಶಿಕ್ಷಣ ಪಡೆದುದು ಸೇವಾಗ್ರಾಮ, ವರ್ಧಾ)





೧೯೫೦ : ೩—೦—೦

ಮುದ್ರಕರು:
ಎಸ್. ಜಿ. ವಿರೂಪಾಕ್ಷನ್
ವ್ಯವಸ್ಥಾಪಕರು
ಮೃತ್ಯುಂಜಯ ಮುದ್ರಕರು, ಕೋಟಿ, ಧಾರವಾಡ

ಪ್ರಥಮ ಮುದ್ರಣ
(೧೦೦೦ ಪ್ರತಿಗಳು)



## ಪ್ರಕಾಶಕರ ಅರಿಕೆ

ಮೂಲ ಶಿಕ್ಷಣದ ಎರಡನೆಯ ಆವೃತ್ತಿಯಲ್ಲಿ ಸೂಕ್ತ ಕಂಡ ಅಲ್ಪ ಬದಲಾವಣೆಯನ್ನು ಮಾಡಲಾಗಿದೆ. ಕೇವಲ ಒಂಬತ್ತು ತಿಂಗಳಲ್ಲಿಯೇ ಈ ಗ್ರಂಥದ ಎರಡನೆಯ ಆವೃತ್ತಿಯು ಹೊರಟಿರುವದನ್ನು ಅವಲೋಕಿಸಿದರೆ, ಕರ್ನಾಟಕದ ಶಿಕ್ಷಕರ ಹಾಗು ಶಿಕ್ಷಣ ಪ್ರೇಮಿಗಳ ಆದರಕ್ಕೆ ಈ ಹೊತ್ತಿಗೆಯು ಪಾತ್ರವಾಗಿದೆಯೆಂಬುದು ಸಂತೋಷದ ಸಂಗತಿ. 'ಮೂಲ ಶಿಕ್ಷಣ'ವನ್ನು ಇಷ್ಟೊಂದು ಹಾರ್ದಿಕವಾಗಿ ಸ್ವಾಗತಿಸಿದ ಕನ್ನಡಿಗರಿಗೆ ನಮ್ಮ ಹೃತ್ಪೂರ್ವಕ ಅಭಿವಂದನೆಗಳು. ಅಲ್ಪಾವಧಿಯಲ್ಲಿಯೇ ಅಚ್ಚುಕಟ್ಟಾಗಿ ಮುದ್ರಣ ಮಾಡಿಕೊಟ್ಟ ಮೃತ್ಯುಂಜಯ ಮುದ್ರಕರು, ಧಾರವಾಡ ಇವರಿಗೆ ನಮ್ಮ ಧನ್ಯವಾದಗಳು.

ಪ್ರಕಾಶಕರು ;
ಶಿ. ಬ. ಹರಿಹರ
ಕೋಟಿ, ಧಾರವಾಡ

# ಅರ್ಪಣೆ



ಮಹಾತ್ಮಾಜಿಯವರ ಆಶೀರ್ವಾದ ಪಡೆದು ಮೂಲ ಶಿಕ್ಷಣ ಕ್ಷೇತ್ರದಲ್ಲಿ
ಶ್ರದ್ಧೆಯಿಂದಲೂ ನಿಸ್ವಾರ್ಥ ಬುದ್ಧಿಯಿಂದಲೂ ಆದಿಯಿಂದ
ದುಡಿಯುತ್ತ ಮೂಲ ಶಿಕ್ಷಣ ಕಾರ್ಯಕರ್ತರಿಗೆ
ಮಾರ್ಗದರ್ಶಕರಾಗಿರುವ



ಪೂಜ್ಯ

**ಆರ್ಯನಾಯಕಂ .... .... .... .... ಆಶಾದೇವಿ**

ದಂಪತಿಗಳಿಗೆ.



# FOREWORD

In the New India of to- day people are highly becoming conscious of the need for the Right Type of Education for their children. There is everywhere the dissatisfaction at the kind of education that is now being provided at the elementary stage. The syllabuses are too heavy and the text-books too old fashioned. The examinations of the traditional type control almost entirely the class room method of teaching. It is a Pass–if possible in First Class–in the examination that is looked upon as Education. The development of physique and the formation of character with adequate attention to desirable habits and attitudes are receiving very little attention at present.

If we could only imagine the helplessness, misery, and agony of the millions of children who undergo the kind of mechanical instruction and drilling of unnecessary and uninteresting details, in our Elementary schools, we could then realize the significance of the observation made by Sri RAJAGOPALACHARI, the Governor General of India, a few months ago while at the

Doon School in Delhi, to the following effect. When you go to any school, look at the faces of those young children. If you find joy in them, then only allow that school to run. Otherwise simply close it down.

I am afraid that almost all our Elementary schools as they are today fail to stand this test. It is this state of affairs that compelled MAHATHMA GANDHIJI, the Father of the Nation, to enter into the Domain of Educatien also. The scheme of Basic Education that was placed by him before his countrymen has been now taken up in all seriousness by almost all the States and Provinces.

But it is doubtful, considering the economic condition of the people and the financial condition of the States and Provinces, how far the scheme of basic education would go to the rescue of the millions and millions of children studying in small villages and towns. It is therefore to be clearly realized that if at least the ideals and principles of the basic scheme were to be applied in genral in such of the elementary schools of the country which cannot be converted into the basic type, education would then become worth while and useful.

It is for this reason also that I consider it quite necessary to popularise all the literature connected with the basic scheme.

Sri M. G. HANDRAL, B. A. (HONS.), B. T. Dip. P. Ed. Secretary, Kannada Text-Book Committee, Dharwar, has really done a distinct service to the Kannada speaking world by writing this valuable book on Basic Education. He has had the experience of about twelve years as a teacher in Schools and Training Colleges and has undergone training in Basic Education at Sevagram-Wardha. He is at present working as Craft Organiser in Southern Division, Dharwar. He has published some other books in Kannada. In this valuable book he has treated the problem of basic education exhaustively. The style is simple and good and keeps the reader interested. I am quite confident that the Kannada literature, in matters educational, will be all the richer for it and I trust that it will receive the encouragement and patronage that it richly deserves.

M. SIDDALINGAIYA, M. A., Ph. D.
(Columbia)

PRINCIPAL,
University Teachers' College,
Mysore.

MYSORE

20-3-1949

# ಅರಿಕೆ



ಸ್ವತಂತ್ರ ಭಾರತಕ್ಕೆ ಬೇಕಾದ ಹೊಸ ಶಿಕ್ಷಣ ಯೋಜನೆಯು ಇನ್ನು ಸಾರ್ವತ್ರಿಕವಾಗಿ ಕಾರ್ಯರಂಗಕ್ಕಿಳಿಯಬೇಕೆಂಬುದು ನಿರ್ವಿವಾದ. ಅಂತಹದೊಂದು ಯೋಜನೆಯನ್ನು ಸಿದ್ಧಗೊಳಿಸಲು ಶಿಕ್ಷಣ ತಜ್ಞರು ಈಗ ತಲೆ ತುರಿಸಿಕೊಳ್ಳುವ ಪ್ರಸಂಗವಿಲ್ಲ; ಯಾಕಂದರೆ ನವಭಾರತದ ನಿರ್ಮಾತೃ ಬಾಪೂಜಿಯವರು ಈಗಾಗಲೇ ಆ ಕೆಲಸ ಮಾಡಿರುವರು. ಭಾರತವು ತೀವ್ರ ಸ್ವತಂತ್ರವಾಗುವುದೆಂದು ಅವರ ಅಂತರ್ದೃಷ್ಟಿಗೆ ಗೋಚರವಾಗಿತ್ತೋ ಏನೋ ಅವರು ೧೯೩೭ನೇ ವರ್ಷದಲ್ಲಿಯೇ ನವಭಾರತಕ್ಕೆ ಬೇಕಾದ ನವ ಯೋಜನೆಗೆ ತಳಹದಿಯಾಗಲು ಅರ್ಹವಾದ ತತ್ತ್ವಗಳನ್ನು ಜನತೆಯ ಮುಂದೆ ಇಟ್ಟರು. ಅವರ ವಿಚಾರಗಳನ್ನು ಕಡೆದು ಝುಕೀರ ಸಮಿತಿಯವರು ಕೆನೆ ತೆಗೆದರು. ೧೯೩೮ರಲ್ಲಿ ವರ್ಧಾ ರಾಷ್ಟ್ರೀಯ ಶಿಕ್ಷಣವು ರೂಪುಗೊಂಡಿತು. ಅಲ್ಲಲ್ಲಿ ಪ್ರಯೋಗಗಳು ನಡೆದವು. ಇಂದಿಗೆ ಹತ್ತು ವರುಷಗಳು ಸಂದಿದವು. ಅಡತಡೆಗಳು ಅನೇಕ ಮುಖವಾಗಿ ಎದುರಾದವು. ಆದಾಗ್ಯೂ ಪ್ರಯೋಗಗಳ ಒಟ್ಟು ಪರಿಣಾಮವು ಭಾರತಕ್ಕೆ ಹಿತಕರವಾಗಿದೆ ಎಂಬುದೇ ಶಿಕ್ಷಣ ತಜ್ಞರ ಅಭಿಪ್ರಾಯ.

ಸ್ವತಂತ್ರ ಭಾರತದ ಧ್ಯೇಯ ಧೋರಣೆಗಳಿಗೆ ಅಂಟಿಕೊಂಡ ಸಾಗುವ ಈ ಹೊಸ ಶಿಕ್ಷಣ ಯೋಜನೆಗೆ "ಮೂಲ ಶಿಕ್ಷಣ" ಎಂದೂ ಕರೆಯುವರು. ಬಾಪೂಜಿಯವರು "ಹೊಸ ಶಿಕ್ಷಣ" ಎಂದು ಕರೆದಿರುವರು. ವರ್ಧಾ ಶಿಕ್ಷಣ, ರಾಷ್ಟ್ರೀಯ ಶಿಕ್ಷಣ, ಮೂಲ ಶಿಕ್ಷಣ, ಅಹಿಂಸಾತ್ಮಕ ಶಿಕ್ಷಣ, ರಚನಾತ್ಮಕ ಶಿಕ್ಷಣ, ಜೀವನ ಶಿಕ್ಷಣ, ಭಾರತೀಯರ ಶಿಕ್ಷಣ, ಹೊಸ ಶಿಕ್ಷಣ ಎಂಬ ಹೆಸರುಗಳಿಂದ ಕರೆಯಬಹುದು. ಯಾವ ಹೆಸರಿನಿಂದ ಕರೆದರೂ ತತ್ತ್ವಗಳು ಸಾಮಾನ್ಯವಾಗಿವೆ ಎಂಬುದನ್ನು ಗಮನಿಸಬೇಕು.

ಸುಮಾರು ಹತ್ತು ವರುಷಗಳಿಂದ ಕರ್ನಾಟಕದಲ್ಲಿ ಮೂಲ ಶಿಕ್ಷಣ ಯೋಜನೆಯ ಪ್ರಯೋಗವು ನಡೆದಿದೆ. ಮೂಲ ಶಿಕ್ಷಣದಲ್ಲಿ ಆಸ್ಥೆಯುಳ್ಳವರು ಒಂದೆರಡು ಚಿಕ್ಕ ಹೊತ್ತಿಗೆಗಳನ್ನು ಪ್ರಕಟಿಸಿದ್ದಾರೆ. ಝುಕೀರ ಸಮಿತಿಯವರು ನಿರ್ಮಿಸಿದ ಅಭ್ಯಾಸಪತ್ರಿಕೆಯನ್ನು ಕರ್ನಾಟಕ ಶಿಕ್ಷಣ

ಸಮಿತಿಯವರು ಅನುವಾದಿಸಿದ್ದಾರೆ. ಎರಡನೆಯದಾಗಿ, ೧೯೪೧ರಲ್ಲಿ ಶ್ರೀ ಜೆ. ಪಿ. ನಾಯಿಕ ಅವರು ಮೂಲ ಶಿಕ್ಷಣ ತಜ್ಞರ ಕೆಲ ವಿಚಾರಗಳನ್ನು ಸಂಗ್ರಹಿಸಿ "ಶಿಕ್ಷಕರ ಕೈಪಿಡಿ" ಎಂಬ ಪುಸ್ತಕವನ್ನು ಪ್ರಕಟಿಸಿದ್ದಾರೆ. ಇವರು ಈ ದಿಸೆಯಲ್ಲಿ ಮಹದುಪಕಾರ ಮಾಡಿದ್ದಾರೆ. ೧೯೪೧ರ ನ ತರ ಮೂಲ ಶಿಕ್ಷಣದ ವ್ಯಾಪ್ತಿ ಹೆಚ್ಚಾಗಿದೆ. ಅದರಿಂದ ಹೊಸದೊಂದು ಗ್ರಂಥವು ಅವಶ್ಯವೆನಿಸಿತು. ಮೂಲ ಶಿಕ್ಷಣ ಕ್ಷೇತ್ರದಲ್ಲಿ ಹೊಸದಾಗಿ ಕಾಲಿಟ್ಟ ಶ್ರೀ. ಹ. ಗ. ಜೋಶಿ ಅವರು "ಮೂಲ ಶಿಕ್ಷಣ ಮೀಮಾಂಸೆ" ಎಂಬ ಚಿಕ್ಕ ಹೊತ್ತಿಗೆಯನ್ನು ಹೊರಡಿಸಿದ್ದಾರೆ. ಆದರೆ ಮೂಲ ಶಿಕ್ಷಣದ ಬಗೆಗೆ ಸಮಗ್ರ ವಿಚಾರಗಳನ್ನೊಳಗೊಂಡ ಗ್ರಂಥವು ಈ ವರೆಗೂ ಬೆಳಕಿಗೆ ಬರಲಿಲ್ಲ. ಈ ಕೊರತೆಯು ಹಾಗೆಯೇ ಉಳಿಯಿತು.

ಮೂಲ ಶಿಕ್ಷಣದ ಚರಿತ್ರೆ, ಅದರ ಧ್ಯೇಯ-ಧೋರಣಗಳು, ಅದರ ಆದರ್ಶವನ್ನು ಮುಟ್ಟುವ ಸಾಧನಗಳು, ಶಿಕ್ಷಣದ ವಿವಿಧಾಂಗಗಳಲ್ಲಿ ಅದರ ದೃಷ್ಟಿಕೋನ, ಅನುಬಂಧ ಪದ್ಧತಿಯ ಉತ್ಪತ್ತಿ-ಪ್ರಯೋಗ-ಫಲ, ಶಾಲೆಯ ವ್ಯವಸ್ಥೆ, ಉಪಕರಣಗಳ ಜೋಡಣೆ, ಶಿಸ್ತು-ಸಂಘಟನೆ, ವಿವಿಧ ಚಟುವಟಿಕೆ ಗಳು, ಮಕ್ಕಳ ಪ್ರಗತಿ ಮೊದಲಾದ ಸಂಗತಿಗಳನ್ನು ಸಾಧಾರವಾಗಿ ವಿವೇಚಿಸುವ ಒಂದು ಗ್ರಂಥವು ಬೇಕೆಂದು ಬಯಸಿ ನಾನು ಈ ಹೊತ್ತಿಗೆ ಯನ್ನು ಸಿದ್ಧಗೊಳಿಸುವ ಹೊಣೆ ಹೊತ್ತುಕೊಂಡೆ. ೧೯೪೬ನೆಯ ವರುಷ ನಾನು ಸೇವಾಗ್ರಾಮದಲ್ಲಿದ್ದಾಗ ಮೂಲ ಶಿಕ್ಷಣದ ಬಗೆಗೆ ಹೆಚ್ಚಾಗಿ ಅಭ್ಯಾಸ ಮಾಡಿದೆ; ಮತ್ತು ಅಲ್ಲಿ ನಡೆಯುತ್ತಿರುವ ಆನಂದ ನಿಕೇತನ ಎಂಬ ಮೂಲ ಶಿಕ್ಷಣ ಸಾಲೆಯ ಕೆಲಸವನ್ನೂ ನಿರೀಕ್ಷಣೆ ಮಾಡಿದೆ. ಆಗ ಮೂಲ ಶಿಕ್ಷಣದ ಬಗೆಗೆ ಆಸ್ಥೆ ಹುಟ್ಟಿ, ಅದರ ಪ್ರಚಾರ ಕಾರ್ಯಕರ್ತರಲ್ಲಿ ನಾನೊಬ್ಬನಾದೆ. ಮೂಲ ಶಿಕ್ಷಣದ ಸೆಲೆಯಂತಿರುವ ಸೇವಾಗ್ರಾಮದಲ್ಲಿ ನಿಸ್ವಾರ್ಥ ಬುದ್ಧಿ ಯಿಂದ ದುಡಿಯುತ್ತಿರುವ ಪೂಜ್ಯ ಆರ್ಯನಾಯಕ–ಆಶಾದೇವಿ ಅವರ ಮಾರ್ಗದರ್ಶನದಲ್ಲಿ ಅಭ್ಯಸಿಸುವಾಗಲೇ ಕನ್ನಡದಲ್ಲಿ ಮೂಲ ಶಿಕ್ಷಣ ಸಾಹಿತ್ಯವನ್ನು ನಿರ್ಮಿಸಬೇಕೆಂಬ ಹಂಬಲ ಹುಟ್ಟಿತು. ಅಲ್ಲಿಂದ ಇಲ್ಲಿಯ ವರೆಗೆ ನನಗುಂಟಾದ ಅನುಭವಗಳನ್ನು ಸೇರಿಸಿ ಈ ಹೊತ್ತಿಗೆಯನ್ನು ತಯಾರಿಸಿದ್ದೇನೆ.

ಗಾಂಧೀಜಿಯವರ ಶಿಷ್ಯರೆಂದು ಹೇಳಿಸಿಕೊಳ್ಳುವವರಿಗೂ ಕೂಡ ಅವರ ವಿಚಾರಗಳನ್ನು ಅರ್ಥ ಮಾಡಿಕೊಳ್ಳುವದಕ್ಕೂ, ಅರಗಿಸಿಕೊಳ್ಳುವ ದಕ್ಕೂ ಕಠಿಣವಾಗುವದೆಂದು ನನ್ನ ಮತ. ಅವರ ವಿಚಾರಗಳನ್ನು ನಾನು ತಿಳಿದುಕೊಂಡಂತೆ ಇಲ್ಲಿ ವಿವರಿಸಿದ್ದೇನೆ. ಅನುಭವಿಕರು ಸೂಕ್ತ ಸಲಹೆಗಳನ್ನು ಕೊಟ್ಟಲ್ಲಿ, ಅವುಗಳನ್ನು ಮುಂದಿನ ಆವೃತ್ತಿಯಲ್ಲಿ ಸೇರಿಸುವ ಯತ್ನ ಮಾಡುವೆ. ಹಾಗೆ ಮಾಡಬೇಕೆಂದು ಹಿರಿಯ ಶಿಕ್ಷಣ ತಜ್ಞರಿಗೆ ನನ್ನ ಬಿನ್ನಹ.

ಮೂಲ ಶಿಕ್ಷಣದ ಬಗೆಗೆ ಸಾಕಷ್ಟು ಸಾಹಿತ್ಯ ನಿರ್ಮಾಣವಾಗುವದು ಇನ್ನೂ ಅಗತ್ಯವಿದೆ. ಪ್ರಾಯೋಗಿಕ ದೃಷ್ಟಿಯಿಂದ ಅನೇಕ ವಿಚಾರಗಳು ಆಗಾಗ ಬೆಳಕಿಗೆ ಬರಬೇಕು. ಮೂಲ ಶಿಕ್ಷಣದಲ್ಲಿ ಆಸ್ಥೆಯುಳ್ಳವರಿಗೆ ಹಾಗು ಪ್ರಾಥಮಿಕ ಶಿಕ್ಷಕ-ಶಿಕ್ಷಕಿಯರಿಗೆ ಈ ಪುಸ್ತಕವು ಉಪಯೋಗವಾಗು ವಂತೆ ರಚಿಸಲಾಗಿದೆ. ಶಿಕ್ಷಕರ ಶಿಕ್ಷಣಾಲಯದಲ್ಲಿ ಅಭ್ಯಸಿಸುತ್ತಿರುವ ಶಿಕ್ಷಕ-ಶಿಕ್ಷಕಿಯರಿಗಂತೂ ತುಂಬಾ ಸಹಾಯಕವಾಗಿದೆ. ಓದುಗರ ಪ್ರೋತ್ಸಾಹ ದೊರೆತಲ್ಲಿ, ಈ ದಿಸೆಯಲ್ಲಿ ಇನ್ನೂ ಹೆಚ್ಚು ಸೇವೆ ಮಾಡಬಯಸುವೆ.

ಈ ಪುಸ್ತಕ ರಚನಾಕಾರ್ಯದಲ್ಲಿ ನೆರವಾದ ಗ್ರಂಥಗಳ ಪಟ್ಟಿಯೊಂ ದನ್ನು ಸೇರಿಸಿದ್ದೇನೆ. ಆ ಗ್ರಂಥಗಳ ಲೇಖಕರಿಗೆ ನಾನು ತುಂಬಾ ಋಣಿ ಯಾಗಿದ್ದೇನೆ. ಈ ಪುಸ್ತಕಕ್ಕೆ ಮುನ್ನುಡಿ ಬರೆದುಕೊಟ್ಟ **ಡಾ. ಎಂ. ಸಿದ್ಧ ಲಿಂಗಯ್ಯ,** ಪ್ರಿನ್ಸಿಪಾಲ, ಟೀಚರ್ಸ ಕಾಲೇಜ, ವೈಸೂರು ಇವರಿಗೂ, ಈ ಪುಸ್ತಕವನ್ನು ಓದಿ, ತಮ್ಮ ಅಭಿಪ್ರಾಯಗಳನ್ನು ಕೊಟ್ಟ ಮಹನೀಯರಿಗೂ ನಾನು ಉಪಕೃತನಾಗಿದ್ದೇನೆ. ಪಾಠಗಳನ್ನು ಕಲಿಸಿ ಅನುಭವ ಪಡೆದ ಪಾಠಗಳ ಟಿಪ್ಪಣೆಗಳನ್ನು ಪ್ರಸಿದ್ಧಿಸಲು ಅನುಮತಿ ಕೊಟ್ಟ ನನ್ನ ಗೆಳೆಯ ರಿಗೂ ಕೃತಜ್ಞನು. ಈ ಪುಸ್ತಕವನ್ನು ಪ್ರಕಟಿಸುವ ಹೊಣೆಯನ್ನು ಸ್ವೀಕರಿಸಿದ ಶ್ರೀಮಾನ್ ಎಸ್. ಬಿ. ಹರಿಹರ ಅವರಿಗೂ, ಅಲ್ಪಾವಧಿಯಲ್ಲಿಯೇ ಅಂದ ವಾಗಿ ಅಚ್ಚು ಹಾಕಿಕೊಟ್ಟ ಗೌರೀಶ ಮುದ್ರಣಾಲಯದ ವ್ಯವಸ್ಥಾಪಕರಿಗೂ ನಾನು ತುಂಬಾ ಋಣಿಯಾಗಿದ್ದೇನೆ.

**ಬಸವ ಜಯಂತಿ**

ತಾ || ೧-೫-೧೯೪೯ **ಮ. ಗು. ಹಂದ್ರಾಳ**

# ಅಭಿಪ್ರಾಯಗಳು

—: ೦ :—

ಮೂಲ ಶಿಕ್ಷಣವು ಸಾರ್ವತ್ರಿಕವಾಗಿ ಅಮಲಿನಲ್ಲಿ ಬರುವ ಈ ಸಂಕ್ರಾಂತಿ ಸಮಯದಲ್ಲಿ ಶ್ರೀ ಹಂದ್ರಾಳರವರು 'ಮೂಲ ಶಿಕ್ಷಣ' ಎಂಬ ಅಪೂರ್ವ ಗ್ರಂಥವನ್ನು ಬರೆದು ಕನ್ನಡಿಗರಿಗೆ ನೆರವು ನೀಡಿದ್ದಾರೆ. ಮೂಲ ಶಿಕ್ಷಣದ ಕಡೆಗೆ ಸಾಶಂಕ ದೃಷ್ಟಿಯಿಂದ ನೋಡುತ್ತಿರುವ ಶಿಕ್ಷಕರಿಗೆ ಇದು ಕೈಗನ್ನಡಿಯಾಗಿದೆ. ಮೂಲ ಶಿಕ್ಷಣ ಕಾರ್ಯಕರ್ತರಿಗೆ ಹಸ್ತಕ ಹೊತ್ತಿಗೆಯಾಗಿದೆ. ಶಿಕ್ಷಕರ ಶಿಕ್ಷಣಾಲಯಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿ—ವಿದ್ಯಾರ್ಥಿನಿಯರಿಗಂತೂ ಕೈದೀವಿಗೆಯಾಗಿದೆ. ಮೂಲ ಶಿಕ್ಷಣದ ತತ್ತ್ವಗಳು, ಅನುಬಂಧ ಪದ್ಧತಿ ಹಾಗು ಮೂಲ ಶಿಕ್ಷಣ ಶಾಲೆಗಳ ವ್ಯವಸ್ಥೆ ಮೊದಲಾದ ವಿಷಯಗಳನ್ನು ವಿವೇಚಿಸುವಲ್ಲಿ ಮೂಲ ಶಿಕ್ಷಣ ಕೇಂದ್ರಗಳಲ್ಲಿ ತರಬೇತು ಹೊಂದುತ್ತಿರುವ ಶಿಕ್ಷಕ—ವಿದ್ಯಾರ್ಥಿಗಳ ಶಿಕ್ಷಣ ವಿಷಯದ ಅಭ್ಯಾಸಪತ್ರಿಕೆಯನ್ನೂ ಅನುಸರಿಸಲಾಗಿದೆ. ಶೈಕ್ಷಣಿಕ ಮನಶ್ಶಾಸ್ತ್ರವನ್ನೂ ಸೂಕ್ತವಾಗಿ ಸೇರಿಸಲಾಗಿದೆ. ಸಮವಾಯ ಪದ್ಧತಿಯ ಪಾಠಗಳನ್ನು ಕೊನೆಗೆ ಸೇರಿಸಿದ್ದರಿಂದ ಶಿಕ್ಷಕರಿಗೆ ಪಾಠ ಕೊಡಲಿಕ್ಕೂ ಅನುಕೂಲವಾಗಿದೆ. ಶಿಕ್ಷಣದಲ್ಲಿ ಆಸ್ಥೆಯುಳ್ಳವರೂ, ಶಿಕ್ಷಕ—ಶಿಕ್ಷಕಿಯರೂ ಈ ಗ್ರಂಥವನ್ನು ಓದಿ, ನವಭಾರತವನ್ನು ನಿರ್ಮಿಸುವ ಮಹಾ ಕಾರ್ಯದಲ್ಲಿ ಸದ್ಬುದ್ಧಿಯಿಂದ ತೊಡಗುವರೆಂದು ಆಶಿಸುವೆ.

ಕ. ಟ್ರೇ. ಕಾ. ಹುಬ್ಬಳ್ಳಿ — ಬಿ. ಎಸ್. ಹಂಚಿನಾಳ

೧—೫—೧೯೪೯ — ಪ್ರಿನ್ಸಿಪಾಲ

———

ಮೂಲ ಶಿಕ್ಷಣದ ಬಗೆಗೆ ಸಂಪೂರ್ಣ ಪರಿಚಯ ಮಾಡಿಕೊಡುವ ಪ್ರಯತ್ನವನ್ನು ಶ್ರೀ. ಹಂದ್ರಾಳರವರು ಈ ಹೊತ್ತಿಗೆಯಲ್ಲಿ ಮಾಡಿದ್ದಾರೆ. ಶಿಕ್ಷಣಕ್ಷೇತ್ರದಲ್ಲಿ ದುಡಿಯುತ್ತಿರುವವರಿಗೂ, ಟ್ರೇನಿಂಗ ಕಾಲೇಜುಗಳಲ್ಲಿ ಅಭ್ಯಸಿಸುತ್ತಿರುವ ಶಿಕ್ಷಕ—ಶಿಕ್ಷಕಿಯರಿಗೂ ಇದು ಅತ್ಯಂತ ಉಪಯುಕ್ತವಾಗಿದೆ. ಕನ್ನಡದಲ್ಲಿ ಮೂಲ ಶಿಕ್ಷಣ ಸಾಹಿತ್ಯದ ಕೊರತೆಯಿದೆ. ಇದನ್ನು ತುಂಬಿಕೊಡಲು ಯಶಸ್ವಿಯಾಗಿ ಪ್ರಯತ್ನ ಮಾಡಲಾಗಿದೆ.

ಬಿ. ಎಂ. ಶಿಂತ್ರಿ

೧—೫—೧೯೪೯ — ಅ. ಎ. ಇ. ದಕ್ಷಿಣಭಾಗ, ಧಾರವಾಡ

I am very glad to find that my friend Mr. M. G. HANDRAL has been able to spare time to write such a suitable and useful book on the subject of "Nai Talim" the popularising of which is the cherished mission of our life as we believe this system of education to be the most natural and so most inspiring and life giving. On account of the simplicity of material employed and the human way of dealing with the actual affairs of every day life this system of education is fully in accord with the genius of this our ancient land.

I understand that there are not a number of books on this subject in Kannada and I am sure that Mr. Handral's book has met a real demand. In this book, as was expected of Mr. Handral, there are all signs of an intelligent and imaginative way of treatment of the various aspects of this new and interesting way of imparting education to our teeming millions so expectant in this deep darkness of receiving a helping hand and a kindly light from their old well-tried servants. I have no doubt that Mr. Handral's book will be a great success.

DHARWAR

2-5-1949

S. M. HADI,
Principal,
Govt. Urdu Training College.
Dharwar.

# ಅಭಿಪ್ರಾಯಗಳು

—]O[—

ನಮ್ಮ ಪ್ರಾಂತದಲ್ಲೆಲ್ಲ 'ಮೂಲ ಶಿಕ್ಷಣ'ದ ಪ್ರಯೋಗವು ಭರದಿಂದ ಸಾಗಿರುವುದಲ್ಲದೆ, ಪ್ರಾಥಮಿಕ ಶಿಕ್ಷಣದ ಮಟ್ಟದಲ್ಲಿ ಇದನ್ನೆ ಅನುಸರಿಸ ಬೇಕೆಂದು ಸರಕಾರದವರು ಆಜ್ಞೆ ಹೊರಡಿಸಿರುವರು. ಅಂಥ ಈ ಸಂಧಿ ಯಲ್ಲಿ ಶಿಕ್ಷಣಕ್ಷೇತ್ರದಲ್ಲಿ ಆಸ್ಥೆಯಿಂದ ದುಡಿದು, ಮೂಲ ಶಿಕ್ಷಣವನ್ನು ಆಳವಾಗಿ ಅಭ್ಯಸಿಸಿದ ಶ್ರೀಮಾನ್ ಹಂಪ್ರಾಳರಂಥ ಅನುಭವಿಕರು ಈ ಹೊಸ ಶಿಕ್ಷಣದ ರೂಪರೇಷೆಗಳನ್ನು ವಿವರವಾಗಿ ಓದುಗರ ಮುಂದೆ ಇಡಲು ಈ ಹೊತ್ತಿಗೆಯಲ್ಲಿ ಹವಣಿಸಿದ್ದಾರೆ. ವಿಷಯದಲ್ಲಿ ಮೂಲ ಶಿಕ್ಷಣ ತತ್ವದರ್ಶನ, ಪದ್ಧತಿಪರಿಚಯ ಮತ್ತು ಶಾಲಾ ಸಂವಿಧಾನವೆಂದು ಮೂರು ಭಾಗಗಳನ್ನಾಗಿ ಮಾಡಲಾಗಿದೆ. ಇದಲ್ಲದೆ, ಸಮವಾಯಪಾಠ ಮತ್ತು ಪಾಠದ ಟಿಪ್ಪಣಿಗಳಿಂದ ಕೂಡಿದ ಪರಿಶಿಷ್ಟವೊಂದನ್ನು ಹೊತ್ತಿಗೆಯ ಕೊನೆಯ ಭಾಗ ದಲ್ಲಿ ಕೊಡಲಾಗಿದೆ.

ಹೊತ್ತಿಗೆಯಲ್ಲಿಯ ವಿಷಯವಿವೇಚನೆಯು ಒಟ್ಟಾರೆ ಸಾಕಷ್ಟು ವಿವರಯುಕ್ತವಾಗಿದೆ. ಲೇಖಕರು ತಮ್ಮ ವಿಚಾರಗಳನ್ನು ಅಂದವಾದ ಶಬ್ದಗಳಲ್ಲಿ, ರಸವತ್ತಾಗಿ ಹಾಗು ಓದುಗರ ಮನಮುಟ್ಟುವಂತೆ ಮೂಡಿಸಿ ದ್ದಾರೆ. ತಮ್ಮ ಎಲ್ಲ ಮಾತುಗಳಿಗೂ ಅನೇಕ ಶಿಕ್ಷಣ ತಜ್ಞರ ಬೆಂಬಲ ವಿರುವದೆಂಬುದನ್ನು ಸೂಚಿಸಲು, ಬಾರಿಬಾರಿಗೆ ಅಂಥ ಮಹನೀಯರನೇಕರ ಹೇಳಿಕೆಗಳನ್ನು ಉದಾಹರಿಸಿದ್ದಾರೆ. ಸಮವಾಯ ಪಾಠದ ರಚನೆ, ಅದರ ಶಾಸ್ತ್ರೀಕ ಹಿನ್ನೆಲೆ ಮುಂತಾದ ಕೆಲವೊಂದು ವಿಷಯಗಳನ್ನು ಮಾತ್ರ ಇನ್ನು ತುಸು ಹೆಚ್ಚಾಗಿ ವಿವರಿಸಬೇಕಾಗಿತ್ತು. ಮಾದರಿಪಾಠ-ಟಿಪ್ಪಣಿಗಳು ಹೆಚ್ಚು ಪ್ರಮಾಣದಿಂದ ಇದ್ದಂತೆ, ಪುಸ್ತಕದ ಉಪಯುಕ್ತತೆಯು ಹೆಚ್ಚೆನಿಸುವದರಲ್ಲಿ ಸಂದೇಹವಿಲ್ಲ. ಮೂಲ ಶಿಕ್ಷಣದ ಎಲ್ಲ ವಿಷಯಗಳನ್ನು ಓದುಗರ ಮುಂದೆ ಇಡುವ ಪ್ರಯತ್ನ ಮಾಡಿದ್ದಾರೆ. ಮೂಲ ಶಿಕ್ಷಣ ಕೇಂದ್ರದ ಪರೀಕ್ಷೆಗಾಗಿ ಗೊತ್ತುಪಡಿಸಿದ ಶಿಕ್ಷಣ ವಿಷಯದ ಅಭ್ಯಾಸಪತ್ರಿಕೆಯ ಬೇಡಿಕೆಗಳನ್ನೂ ಪೂರೈಸಿದ್ದಾರೆ.

ಒಟ್ಟಾರೆ, ಸಾಮಾನ್ಯವಾಗಿ ಮೂಲ ಶಿಕ್ಷಣದಲ್ಲಿ ಅಭಿರುಚಿಯುಳ್ಳ ಎಲ್ಲ ಓದುಗರಿಗೆ ಈ ಹೊತ್ತಿಗೆಯು ಮೂಲ ರಾಷ್ಟ್ರೀಯ ಶಿಕ್ಷಣದ ಮುಖ್ಯಾಂಶಗಳ ತಿಳುವಳಿಕೆಯನ್ನುಂಟುಮಾಡಿಕೊಡುವದೆಂದು ನಿಸ್ಸಂದೇಹವಾಗಿ ಹೇಳಬಹುದು.

ಸರಕಾರಿ ಕನ್ನಡ ಪ್ರಾ. ಶಿ. ಟ್ರೇ. ಕಾ. ರಂ. ಕೃ. ಲಕ್ಕುಂಡಿ
ಧಾರವಾಡ ತಾ||೫—೪—೧೯೪೯ ಪ್ರಿನ್ಸಿಪಾಲರು

---

ಈ ಸಮಯದಲ್ಲಿ ನವೀನ ನಾಗರಿಕರನ್ನು ತರಬೇತುಗೊಳಿಸಲು ಟೊಂಕ ಕಟ್ಟಿನಿಂತ 'ಮೂಲ ಶಿಕ್ಷಣ'ದ ಬಗ್ಗೆ ಶ್ರೀ ಹಂದ್ರಾಳರವರು ಕೈಕೊಂಡ ಯೋಜನೆಯು ಸ್ತುತ್ಯವಾಗಿದೆ. ಅವರ "ಮೂಲ ಶಿಕ್ಷಣ" ಈ ಹೊಸ ಪದ್ಧತಿಯ ಶಿಕ್ಷಣದ ಒಳ-ಹೊರಗುಗಳನ್ನು ನಿಚ್ಚಳವಾಗಿ ಪರಿಶೋಧಿಸಿ, ಅದರ ಮೇಲ್ಮೆಯನ್ನು ಧೈರ್ಯವಾಗಿ ಸ್ಫುಟಗೊಳಿಸಿದೆ. ಶ್ರೀ ಹಂದ್ರಾಳರವರ ಹರಿತವಾದ ಶೈಲಿ, ಮನಂಬುಗುವ ನಿರೂಪಣೆ, ವಿಶಿಷ್ಟ ವಿಮರ್ಶಾದೃಷ್ಟಿ ಇವು ಮೂರೂ ಮುಪ್ಪುರಿಗೊಂಡು ಶಿಕ್ಷಣತಜ್ಞನು ಕೂಡ ಹಿರಿಯ ಸಾಹಿತಿಯಾಗಬಲ್ಲನೆಂಬುದನ್ನು ಸಾರಿ ಹೇಳುತ್ತದೆ ಅವರ "ಮೂಲ ಶಿಕ್ಷಣ". ಹುಲುಸಾಗಿ ಬೆಳೆಯುತ್ತಿರುವ ಶಿಕ್ಷಣ—ಸಾಹಿತ್ಯದ ಅಭಾವವು ಕನ್ನಡದಲ್ಲಿ ಕಂಡುಬರುತ್ತಿರುವದು ಶೋಚನೀಯ. ಶ್ರೀ ಹಂದ್ರಾಳರವರು ಕರ್ನಾಟಕ ಶಿಕ್ಷಣ-ಸಾಹಿತ್ಯಕ್ಕೆ ತಮ್ಮ ಕಾಣಿಕೆಯನ್ನು ಸಲ್ಲಿಸಿ ಶಿಕ್ಷಣಶಾಸ್ತ್ರದ ಅಭ್ಯಾಸುಗಳಿಗೆ ಉಪಕಾರ ಮಾಡಿದ್ದಾರೆ. 'ಮೂಲ ಶಿಕ್ಷಣ,ವು ಟ್ರೇನಿಂಗ ಕಾಲೇಜದ ಅಭ್ಯಾಸಪತ್ರಿಕೆಯನ್ನು ಸಂಪೂರ್ಣವಾಗಿ ಅನುಸರಿಸಿ ಬರೆದಿದ್ದುದರಿಂದ ಅದು ಶಿಕ್ಷಣ-ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಹೊತ್ತಿಗೆಯಾಗಿದೆ. ಶ್ರೀ ಹಂದ್ರಾಳರವರ ಈ ಪ್ರಥಮ ಪ್ರಯತ್ನವು ಅವರ ಮುಂದಿನ ಹಿರಿ ಸಾಧನೆಯ ಸೋಪಾನವಾಗಲಿ.

ಕಾರವಾರ ಎಸ್. ಆರ್. ಜೋಶಿ
ತಾ|| ೧೧—೪—೧೯೪೯ ಪ್ರಿನ್ಸಿಪಾಲ, ಸರಕಾರಿ ಟ್ರೇನಿಂಗ ಕಾಲೇಜ

---

'ಮೂಲ ಶಿಕ್ಷಣ'ವೆಂಬ ಗ್ರಂಥವನ್ನು ಬರೆದು ಶ್ರೀಯುತ ಹಂದ್ರಾಳ ರವರು ಶಿಕ್ಷಣ ಕ್ಷೇತ್ರದಲ್ಲಿ ದುಡಿಯುವವರಿಗೆ ಬಲು ದೊಡ್ಡ ಉಪಕಾರ ವನ್ನು ಮಾಡಿದ್ದಾರೆ. ಶಿಕ್ಷಣದಲ್ಲಿ ಕ್ರಾಂತಿಮಯ ಬದಲಾವಣೆಯಾಗು ತ್ತಿರುವ ಈ ಸಮಯಕ್ಕೆ ಅವರ ಈ ಹೊತ್ತಿಗೆಯು ಶಿಕ್ಷಕರಿಗೆ ಅದರಲ್ಲಿಯೂ ಟ್ರೇನಿಂಗ ಸಂಸ್ಥೆಯ ಶಿಕ್ಷಕ-ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವದೆಂಬುದ ರಲ್ಲಿ ಯಾವ ಸಂಶಯವಿಲ್ಲ. ಬರೆಹವು ಸರಳವಾಗಿದ್ದು ವಿಚಾರಗಳು ಸ್ಪಷ್ಟ ವಾಗಿವೆ. ಅನೇಕ ಆಧುನಿಕ ಶಿಕ್ಷಣತಜ್ಞರ ಅಭಿಪ್ರಾಯಗಳನ್ನು ಅಲ್ಲಲ್ಲಿ ಸೇರಿಸಿ ತಮ್ಮ ವಿಚಾರ ಪ್ರವಾಹವನ್ನು ಪುಷ್ಟೀಕರಿಸಲು ಪ್ರಯತ್ನಿಸಿದ್ದಾರೆ.

ತೀರಗಾಂಕರ ಕೃಷ್ಣರಾಯ

೧೫—೪—೯೪೯ ಪ್ರಿನ್ಸಿಪಾಲ, ಪದವೀಧರರ ಜೀವನ ಶಿಕ್ಷಣ

ಧಾರವಾಡ ಕೇಂದ್ರ, ಧಾರವಾಡ

---

ಕನ್ನಡದಲ್ಲಿ ಶಿಕ್ಷಣಶಾಸ್ತ್ರದಲ್ಲಿ ಸ್ವತಂತ್ರ ಪುಸ್ತಕಗಳು ತೀರ ವಿರಳ. ಮೂಲಶಿಕ್ಷಣವು ಹೊಸದಾದ ವಿಷಯವಿರುವದರಿಂದ ಇದರ ಜ್ಞಾನವು ಎಲ್ಲ ಶಿಕ್ಷಕರಿಗೂ ಅವಶ್ಯವಾದದ್ದು. ಶ್ರೀಯುತ ಹಂದ್ರಾಳರವರು ಮೂಲಶಿಕ್ಷಣದ ಮೇಲೆ ಗ್ರಂಥವನ್ನು ಬರೆದು ಈ ಕೊರತೆಯನ್ನು ಹೋಗಲಾಡಿಸಿದ್ದಾರೆ.

ಪುಸ್ತಕದಲ್ಲಿ ಮೂರು ವಿಭಾಗಗಳಿವೆ. ಮೊದಲಿನ ಭಾಗದಲ್ಲಿ ಮೂಲ ಶಿಕ್ಷಣದ ತಳಹದಿಯನ್ನೂ ತತ್ವಗಳನ್ನೂ ಗ್ರಂಥಕರ್ತರು ಸವಿಸ್ತಾರವಾಗಿ ವಿವರಿಸಿರುವರು. ಎರಡನೇ ವಿಭಾಗದಲ್ಲಿ ಮೂಲ ಶಿಕ್ಷಣದ ಜೀವಾಳವಾದ ಸಂಬಂಧೀಕರಣ ಪದ್ಧತಿಯನ್ನು ಸೋಪಪತ್ತಿಕವಾಗಿ ತಿಳಿಸಿ ಹೇಳಿರುವರು. ಮೂರನೇ ವಿಭಾಗವು ಶಾಲಾ ಸಂವಿಧಾನದ ಬಗ್ಗೆ ಇದೆ. ಇದಲ್ಲದೆ ಪರಿಶಿಷ್ಟದಲ್ಲಿ ಸಮವಾಯ ಪದ್ಧತಿಯಿಂದ ಕಲಿಸತಕ್ಕ ಪಾಠಗಳ ಟಿಪ್ಪಣಿಗಳನ್ನು ಲೇಖಕರು ಕೊಟ್ಟಿರುವರು.

ಮೂಲ ಶಿಕ್ಷಣದ ಸಾರ್ವತ್ರಿಕ ಪ್ರಸಾರಕ್ಕೆ ಪುಸ್ತಕವು ಬಲು ಉಪ ಯುಕ್ತವಾಗಿದೆ. ಗ್ರಂಥಕರ್ತರ ಲೇಖನ ಶೈಲಿಯು ಸುಲಭವಾಗಿಯೂ ಸರಸವಾಗಿಯೂ ಇದೆ. ಅಲ್ಲಲ್ಲಿ ಆಧಾರ ಗ್ರಂಥಗಳೊಳಗಿನ ಪ್ರಮಾಣ ಭೂತ ಅವತರಣಿಕೆಗಳನ್ನು ಕೊಟ್ಟಿರುವರು.

ಒಟ್ಟಿನಲ್ಲಿ ಶಿಕ್ಷಣಕ್ಷೇತ್ರದಲ್ಲಿ ಈ ನೂತನ ಕೃತಿಯು ಸ್ವಾಗತಾರ್ಹವಿದ್ದು ಪ್ರತಿಯೊಬ್ಬ ಶಿಕ್ಷಕನೂ ಓದತಕ್ಕದ್ದಿರುತ್ತದೆ.

ಧಾರವಾಡ — ಡಿ. ವ್ಹಿ. ಚಿಕರಮನೆ
೨೨—೪—೧೯೪೯ — ಅ. ಎ. ಇ. ದಕ್ಷಿಣಭಾಗ, ಧಾರವಾಡ

---

ಮಹಾತ್ಮಾ ಗಾಂಧಿಯವರ ಅಮರ ಅನುಭವದಿಂದ ಜನ್ಯವಾದ ಮೂಲ ಶಿಕ್ಷಣದ ಬಗೆಗೆ ಕನ್ನಡದಲ್ಲಿ ಗ್ರಂಥಗಳ ಅಭಾವ ಇದ್ದ ಕಾಲದಲ್ಲಿ ಈ ವಿಷಯವಾಗಿ ಗ್ರಂಥಗಳು ಬೆಳಕಿಗೆ ಬರುತ್ತಿರುವದು ಒಂದು ಶುಭಚಿಹ್ನ. ಮೂಲ ಶಿಕ್ಷಣದ ಸಂಬಂಧವಾಗಿ ಈ ವರೆಗೆ ಹೊರಟ ಗ್ರಂಥಗಳಲ್ಲಿ ಶ್ರೀ ಮ. ಗು. ಹುಂದ್ರಾಳ ಅವರು ತಮ್ಮ ಆಳವಾದ ಅಧ್ಯಯನ, ಅನುಭವಗಳೊಂದಿಗೆ ಬರೆದ ಈ ಪುಸ್ತಕವು ಸ್ವಾಗತಾರ್ಹವೂ ಪ್ರೋತ್ಸಾಹನೀಯವೂ ಆಗಿದೆ. ಶಿಕ್ಷಣ ಕ್ಷೇತ್ರದಲ್ಲಿ ದುಡಿಯುವವರಿಗೆ ಸದ್ಯದಲ್ಲಿ ಇದು ಕೈದೀಪವಾಗಿದೆಯೆಂದು ಹೇಳಿದಲ್ಲಿ ಅತಿಶಯೋಕ್ತಿಯಾಗಲಾರದು.

ಮೂಲ ಶಿಕ್ಷಣ ತತ್ವದರ್ಶನ, ಪದ್ಧತಿಯ ಪರಿಚಯ, ಶಾಲಾ ಸಂವಿಧಾನ ಎಂಬ ಮೂರು ಭಾಗಗಳಲ್ಲಿ ಕೂಲಂಕಷವಾಗಿ ಮೂಲ ಶಿಕ್ಷಣದ ವಿಷಯಗಳನ್ನು ಪ್ರತಿಪಾದಿಸುವಾಗ ನಾಡಿನ ಮಹನೀಯರ ಆಳವಾದ ವಿಚಾರಗಳನ್ನು ಉದಾಹರಿಸಿ ವಿಷಯವನ್ನು ಪರಿಪುಷ್ಟಗೊಳಿಸಲಾಗಿದೆ ಈ ಪುಸ್ತಕದಲ್ಲಿ. ಇದರಿಂದಾಗಿ ಪುಸ್ತಕಕ್ಕೆ ಕಳೆ ಬಂದಿದೆ.

ಪರಿಶಿಷ್ಟದಲ್ಲಿ ಸಮವಾಯ ಪಾಠದ ಬಗೆಗೆ ನಿಯಮಗಳನ್ನು ಹೇಳಲಾಗಿದೆ. ಇವಕ್ಕೆ ಅನುಗುಣವಾಗಿ ಮಾದರಿಯ ಪಾಠದ ಟಿಪ್ಪಣಿಗಳನ್ನು ಹೆಟ್ಟು ಕೊಟ್ಟಿದ್ದರೆ ಬಂಗಾರಕ್ಕೆ ಕುಂದಣವಿಟ್ಟಂತಾಗುತ್ತಿತ್ತು.

ಈ ಸುಂದರ ಹೊತ್ತಿಗೆಯನ್ನು ಸಕಾಲದಲ್ಲಿ ಹೊರಡಿಸಿದ ಶ್ರೀ ಹುಂದ್ರಾಳ ಅವರ ಪರಿಶ್ರಮವು ಸಾರ್ಥಕವಾಗಲೆಂದೂ ಇವರಿಂದ ಇನ್ನೂ ಶಿಕ್ಷಣ ವಿಷಯಕ ಗ್ರಂಥಗಳು ಹೊರಬೀಳಲೆಂದೂ ಹಾರೈಸುವೆ.

ವಿರೋಧಿ ಸಂವತ್ಸರ ವೈಶಾಖ ಶುದ್ಧ — ರಾ. ವಿ. ದೇಸಾಯಿ
ಅಕ್ಷಯ್ಯ ತೃತೀಯ — ಮುಖ್ಯಾಧ್ಯಾಪಕ
೧—೫—೧೯೪೯ — ವ. ರಾ. ಅ. ಕೇಂದ್ರ, ಧಾರವಾಡ

---

# ಪರಿವಿಡಿ *CONTENTS*

## ಭಾಗ ೧. ಮೂಲ ಶಿಕ್ಷಣ ತತ್ವ ದರ್ಶನ

## SECTION I PRINCIPLES OF BASIC EDUCATION

## ಭಾಗ ೨. ಪದ್ಧತಿ ಪರಿಚಯ
## SECTION II METHODOLOGY



## ಭಾಗ ೩. ಶಾಲಾ ಸಂವಿಧಾನ
## SECTION III SCHOOL MANAGEMENT



## ಪರಿಶಿಷ್ಟ APPENDIX

# ಮೂಲ ಶಿಕ್ಷಣ

## ಭಾಗ: ೧. ಮೂಲ ಶಿಕ್ಷಣದ ತತ್ತ್ವದರ್ಶನ

### ೧. ಮಹಾತ್ಮರ ಅಮರವಾಣಿ

೧೯೩೭ನೆಯ ಅಕ್ಟೋಬರದಲ್ಲಿ ವರ್ಧಾ ಶಿಕ್ಷಣ ಸಮ್ಮೇಲನವು ಕೂಡುವ ಮುಂಚೆ ಮಹಾತ್ಮಾಜಿಯವರು ಹರಿಜನ ಪತ್ರಿಕೆಯಲ್ಲಿ ಶಿಕ್ಷಣ ವಿಷಯದಲ್ಲಿ ತಮ್ಮ ವಿಚಾರಗಳನ್ನು ಪ್ರಕಟಿಸುತ್ತಿದ್ದರು. ಅವರ ವಿಚಾರಗಳನ್ನು ಅನೇಕ ಶಿಕ್ಷಣ ತಜ್ಞರು ಪರಿಶೀಲಿಸಿರುವರು. ಅವರ ಪ್ರಾಸ್ತಾವಿಕ ಭಾಷಣವು ಶಿಕ್ಷಣ ಜಗತ್ತಿನಲ್ಲಿ ಹೆದ್ದಾರಿಯನ್ನು ತೋರಿಸಿದೆ. ಶಿಕ್ಷಣದ ಭವಿತವ್ಯವನ್ನು ಸೂಚಿಸಿದೆ. ಶ್ರೀ. ಬಾಬುಲಾಲ ಗುಪ್ತ ಅವರು ಮಹಾತ್ಮಾಜಿಯವರ ಪ್ರಾಸ್ತಾವಿಕ ಭಾಷಣಕ್ಕೆ "ಮಾಗ್ನಾ ಕಾರ್ಟಾ" ಎಂದು ಕರೆದಿರುವರು. ಅವರ ಅಮರವಾಣಿಯ ಅನುವಾದವು ಕೆಳಗಿದೆ.

ಸಹೋದರ–ಸಹೋದರಿಯರೇ,

ಈ ಸಮ್ಮೇಲನಕ್ಕೆ ಆಗಮಿಸಲು ತೊಂದರೆ ತೆಗೆದುಕೊಂಡದ್ದಕ್ಕಾಗಿ ನಾನು ನಿಮಗೆ ಉಪಕೃತನಾಗಿದ್ದೇನೆ. ಈ ಸಮ್ಮೇಲನದ ಅಧ್ಯಕ್ಷತೆಯನ್ನು ನನಗೆ ವಹಿಸಿರುವರು. ಆದರೆ ಎಲ್ಲ ಕೆಲಸವನ್ನು ನಾನೊಬ್ಬನೇ ನಿರ್ವಹಿಸುವೆನೆಂದು ಅರ್ಥವಲ್ಲ; ಈ ಸಮ್ಮೇಲನವನ್ನು ರೂಪುಗೊಳಿಸಲು ನನ್ನ ಹೊಣೆ ಅಲ್ಪವೇ ಆಗಿತ್ತು. ಮಾರವಾರಿ ಎಜ್ಯುಕೇಶನ್ ಸೊಸಾಯಿಟಿಯ ಕಾರ್ಯದರ್ಶಿಗಳಾದ ಶ್ರೀಯುತ ಶ್ರೀಮನ್ನಾರಾಯಣಜಿ ಅವರು ಈ ಸಭೆಯನ್ನು ಕರೆಯಲು ಬಹಳ ಶ್ರಮ ವಹಿಸಿರುವರು. ತಮ್ಮ ಶಿಕ್ಷಣ ಸಂಘದ ರಜತ ಮಹೋತ್ಸವ ಸಮಯದಲ್ಲಿ ನನ್ನ ಶೈಕ್ಷಣಿಕ ಯೋಜನೆಯನ್ನು ವಿವೇಚಿಸುವದಕ್ಕಾಗಿ ಸಣ್ಣ ಸಮ್ಮೇಲನವನ್ನು ಜರುಗಿಸಬೇಕೆಂದು ಮೊಟ್ಟ ಮೊದಲು ಸೂಚಿಸಿದವರು ಅವರೇ. ಅವರ ಕಲ್ಪನೆಯನ್ನು ಮೆಚ್ಚಿದೆ.

ಆದರಿಂದ ಹರಿಜನ ಪತ್ರಿಕೆಯಲ್ಲಿ ನಾನು ಸೂಚಿಸಿದ ರಾಷ್ಟ್ರೀಯ ಶಿಕ್ಷಣದ ಬಗೆಗೆ ನನ್ನ ವಿಚಾರಗಳನ್ನು ನಿಮ್ಮೆದುರು ಸರಳವಾಗಿ ಇಡಲು ಇಲ್ಲಿರುವೆ. ಸ್ವತಂತ್ರ ಹಾಗೂ ಸರಳ ವಿಮರ್ಶೆ ಮಾಡಬೇಕು; ಎಂದರೆ ನನ್ನ ಯೋಜನೆಯ ಬಗ್ಗೆ ಉಂಟಾಗಬಲ್ಲ ತಪ್ಪು ಕಲ್ಪನೆಗಳನ್ನು ನಿವಾರಿಸಬಲ್ಲೆ. ಸಭಾ ಕಾರ್ಯವೆಲ್ಲ ಮುಖ್ಯವಾಗಿ ಹಿಂದುಸ್ತಾನಿ ಭಾಷೆಯಲ್ಲಿ ಸಾಗುವದು. ಕಾರ್ಯಕ್ರಮವನ್ನು ವಿವರಣಾತ್ಮಕವಾಗಿ ಅನುಸರಿಸಲು ನಿಮ್ಮಲ್ಲಿ ಕೆಲವರಿಗೆ ಸ್ವಲ್ಪ ಅಸಾನುಕೂಲವಾಗಬಹುದು. ಆದಾಗ್ಯೂ ಈ ಕ್ರಮವು ಸಂಪೂರ್ಣ ಸ್ವಾಭಾವಿಕವಾದುದೆಂದು ನಾನು ತಿಳಿಯುತ್ತೇನೆ.

ನನ್ನ ಮಟ್ಟಿಗೆ ಮಾತ್ರ ಇಂದು ನಿಮ್ಮೆದುರು ಇಡಬಯಸುವ ನನ್ನ ವಿಚಾರಗಳು ನಿರೂಪಣೆಯ ದೃಷ್ಟಿಯಿಂದ ಹೊಸವು. ಆದಾಗ್ಯೂ ಆ ವಿಚಾರಗಳಿಗೆ ಹಿನ್ನೆಲೆಯಾದ ನನ್ನ ಅನುಭವವು ಬಹಳ ಹಳೆಯದು. ನಾನು ಮುಂಡಿಸುವ ಸೂಚನೆಗಳು ಪ್ರಾಥಮಿಕ ಹಾಗೂ ಉಚ್ಚ ಶಿಕ್ಷಣಗಳೆರಡಕ್ಕೂ ಅನ್ವಯಿಸುವವು. ಆದರೆ ಪ್ರಾಥಮಿಕ ಶಿಕ್ಷಣದ ಬಗೆಗೆ ನಾವು ವಿಶೇಷ ಆಲೋಚನೆ ಮಾಡಬೇಕಾಗುವದು. ಮಾಧ್ಯಮಿಕ ಶಿಕ್ಷಣವನ್ನು ಪ್ರಾಥಮಿಕ ಶಿಕ್ಷಣದಲ್ಲಿ ನಾನು ಸಮಾವೇಶ ಮಾಡಿದ್ದೇನೆ. ಯಾಕಂದರೆ ೧೯೧೫ರಿಂದ ನಾನು ನನ್ನ ಪ್ರವಾಸದಲ್ಲಿ ನೋಡಿದ ಹಳ್ಳಿಯಲ್ಲಿಯ ಕೆಲ ಜನರಿಗೆ ದೊರೆಯುತ್ತಿರುವ ಶಿಕ್ಷಣವೆಂದರೆ ಪ್ರಾಥಮಿಕ ಶಿಕ್ಷಣವು. ಹಿಂದುಸ್ತಾನದ ಹಳ್ಳಿಗಳ ಸ್ಥಿತಿಗಳನ್ನು ಬಹುಶಃ ಇನ್ನೊಬ್ಬರಿಗಿಂತ ಹೆಚ್ಚಾಗಿ ನಾನು ಕಂಡಿದ್ದೇನೆ. ದಕ್ಷಿಣ ಆಫ್ರಿಕೆಯ ಗ್ರಾಮ್ಯ ಜೀವನದ ಅನುಭವವನ್ನು ಚೆನ್ನಾಗಿ ಪಡೆದಿದ್ದೇನೆ. ಹಿಂದುಸ್ತಾನದ ಹಳ್ಳಿಗಳಲ್ಲಿ ಕೊಡಲ್ಪಡುವ ಶಿಕ್ಷಣ ಕ್ರಮವನ್ನು ಚೆನ್ನಾಗಿ ಬಲ್ಲೆ. ಈಗ ಸೇಗಾಂವದಲ್ಲಿ ನಾನು ನೆಲೆಸಿದ್ದರಿಂದ ರಾಷ್ಟ್ರೀಯ ಶಿಕ್ಷಣದ ಸಂಪೂರ್ಣ ಸಮಸ್ಯೆಯನ್ನು ಸಮೀಪದ ಸ್ಥಳಗಳಿಂದ ಅಭ್ಯಾಸ ಮಾಡಬಲ್ಲೆ. ನಾವು ಹಳ್ಳಿಗಳ ಸ್ಥಿತಿ–ಗತಿಗಳನ್ನು ಸುಧಾರಿಸಲು ಹಂಬಲಿಸಿದರೆ, ಮಾಧ್ಯಮಿಕ ಹಾಗು ಪ್ರಾಥಮಿಕ ಶಿಕ್ಷಣ ಕ್ರಮಗಳನ್ನು ಸಮಾವೇಶ ಮಾಡಲೇಬೇಕೆಂದು ನಾನು ಮನಗಂಡಿದ್ದೇನೆ. ಆದುದರಿಂದ ದೇಶದ ಮುಂದೆ ಇಡಬಯಸುವ ಶೈಕ್ಷಣಿಕ ಯೋಜನೆಯು ಮುಖ್ಯವಾಗಿ ಹಳ್ಳಿಗಳಿಗಾಗಿ ಇರಬೇಕು. ಉಚ್ಚ ಶಿಕ್ಷಣದ ಅನುಭವವು ನನಗಿಲ್ಲ.

ಆದಾಗ್ಯ ಉಚ್ಚ ಶಿಕ್ಷಣ ಪಡೆಯುತ್ತಿರುವ ನೂರಾರು ಹುಡುಗರ ಸಂಬಂಧ ಬೆಳೆಸಿದ್ದೇನೆ. ಅವರೊಡನೆ ಪತ್ರವ್ಯವಹಾರ ಮಾಡಿದ್ದೇನೆ. ಅವರ ಬೇಡಿಕೆಗಳನ್ನು, ತಪ್ಪು—ತಡೆಗಳನ್ನು ಮತ್ತು ಅವರು ಅನುಭವಿಸುತ್ತಿರುವ ರೋಗಗಳನ್ನು ಬಲ್ಲೆ. ಆದರೆ ಪ್ರಾಥಮಿಕ ಶಿಕ್ಷಣದ ಸಮಸ್ಯೆಯನ್ನು ಬಗೆ ಹರಿಸಿದಾಗಲೆ, ಉಚ್ಚ ಶಿಕ್ಷಣ ಸಮಸ್ಯೆಯು ತೀವ್ರವಾಗಿ ಬಗೆಹರಿಸಲ್ಪಡಲೂ ಸಾಧ್ಯವಾಗುವದು.

ಸದ್ಯದ ಪ್ರಾಥಮಿಕ ಶಿಕ್ಷಣ ಕ್ರಮವು ದುಂದಿನದು; ಅಷ್ಟೇ ಅಲ್ಲ, ನಿಶ್ಚಯವಾಗಿ ಅಪಾಯಕರವಾದದ್ದೂ ಅದೆ—ಎಂದು ನನ್ನ ಮನವರಿಕೆ. ಎಷ್ಟೋ ಹುಡುಗರು ತಮ್ಮ ತಂದೆ-ತಾಯಿಗಳಿಗೂ, ಅವರು ಮಾಡುತ್ತಿರುವ ಉದ್ಯೋಗಗಳಿಗೂ ಎರವಾಗಿದ್ದಾರೆ. ಅವರು ದುಶ್ಚಟಗಳಿಗೆ ಒಳಗಾಗು ತ್ತಾರೆ. ನಗರದ ರೀತಿಗಳಿಗೆ ಆಸಕ್ತರಾಗುತ್ತಾರೆ. ಗುಣಗುದಲು ಸ್ವಲ್ಪ ಕಲಿಯುವರು. ಅದಾದರೂ ಶಿಕ್ಷಣವನ್ನು ಬಿಟ್ಟು ಮತ್ತೇನಾದರೂ ಆಗಬ ಹುದು. ಎಂದ ಮೇಲೆ, ಪ್ರಾಥಮಿಕ ಶಿಕ್ಷಣದ ಸ್ವರೂಪವು ಎಂತಹದು ಇರಬೇಕು? ಔದ್ಯೋಗಿಕ ಅಥವಾ ದೈಹಿಕ ಶಿಕ್ಷಣದ ಮೂಲಕ ಶಿಕ್ಷಣ ಕೊಡುವದೇ ಉಪಾಯವೆಂದು ನಾನು ತಿಳಿಯುತ್ತೇನೆ. ದಕ್ಷಿಣ ಆಫ್ರಿಕೆಯಲ್ಲಿ ಟಾಲ್‌ಸ್ಟಾಯ್ ಫಾರ್ಮಿನಲ್ಲಿ ನನ್ನ ಹಾಗೂ ಇತರರ ಮಕ್ಕಳನ್ನು ದೈಹಿಕ ಶ್ರಮದ ಮುಖಾಂತರ ತರಬೇತು ಮಾಡಿ, ನನಗೆ ಅಲ್ಪ ಅನುಭವವಿದೆ. ಬಡಿಗ ತನ, ಕಾಲ್ಮರಿ ಮಾಡುವ ಕೆಲಸ ಇವುಗಳಲ್ಲಿ ತರಬೇತು ಹೊಂದಿದ ಕಲೆನ್ ಬಾಕ ಇವರಿಂದ ನಾನು ಕಲಿತಿದ್ದೇನೆ. ನನ್ನ ಹಾಗು ಇತರರ ಮಕ್ಕಳಿಗೆ ನನಗಾ ಗಲಿ, ಅವರಿಗಾಗಲಿ ಸಮಾಧಾನವಾಗುವಷ್ಟು ಶಿಕ್ಷಣ ಕೊಡುವದು ನನ್ನಿಂದ ಸಾಧ್ಯವಾಗಲಿಲ್ಲ; ಯಾಕಂದರೆ ಸಮಯವು ಸಾಕಷ್ಟಿರಲಿಲ್ಲ; ಮತ್ತು ಮೊದಲೇ ನಿರ್ಧರಿಸಿದ ಕೆಲಸಗಳು ಅನೇಕವಿದ್ದವು; ಅದಾಗ್ಯೂ ಆ ಮಕ್ಕಳು ಹಾನಿಗೀಡಾಗಲಿಲ್ಲವೆಂದು ನನ್ನ ನಂಬಿಗೆಯಿದೆ.

ಆದರೆ ಇಂದು ನಾನು ನಿಮ್ಮೆದುರು ಇಡಬಯಸುವ ಯೋಜನೆಯು ಸಾಮಾನ್ಯ ಶಿಕ್ಷಣದ ಜೊತೆಗೆ ಕೆಲವು ಕೈಗಾರಿಕೆಗಳನ್ನು ಕಲಿಸುವದು ಅಲ್ಲ. ಯಾವುದೊಂದು ಕೈಗಾರಿಕೆ ಇಲ್ಲವೆ ಉದ್ಯೋಗದ ಮೂಲಕ ಇಡಿಯ ಶಿಕ್ಷ ಣವು ಕೊಡಲ್ಪಡಬೇಕೆಂದು ನಾನು ಬಯಸುತ್ತೇನೆ. ಮಧ್ಯಯುಗದಲ್ಲಿ

ಕೆಲಕಾಲ ಕೈಗಾರಿಕೆಗಳು ವಿದ್ಯಾರ್ಥಿಗಳಿಗೆ ಕಲಿಸಲ್ಪಡುತ್ತಿದ್ದವೆಂದು ಆಕ್ಷೇಪಿಸಬಹುದು; ಆದರೆ ಆಗಿನ ಔದ್ಯೋಗಿಕ ತರಬೇತು ಶೈಕ್ಷಣಿಕ ಉದ್ದೇಶದಿಂದ ದೂರ ಸಿಡಿದಿತ್ತು; ಕೈಗಾರಿಕೆಗಳು ಕೇವಲ ಕೈಗಾರಿಕೆಗಳಿಗಾಗಿ ಕಲಿಸಲ್ಪಡುತ್ತಿದ್ದವು; ಅವುಗಳ ಜೊತೆಗೆ ಬುದ್ಧಿಪ್ರಚೋದನೆಗೆ ಎಡೆ ಇರಲಿಲ್ಲ. ಈಗ ಕೆಲವೊಂದು ವೃತ್ತಿಗಳಿಗೆ ಅಂಟಿಕೊಂಡವರು ಅವುಗಳನ್ನು ಮರೆತಿರುವರು. ಕಾರಕೂನಿ ವೃತ್ತಿಗಳಿಗೆ ಸ್ಪರ್ಧೆಯಾಗಿರುವರು. ಹಳ್ಳಿಗಳಿಗೆ ನಿರುಪಯುಕ್ತ ವ್ಯಕ್ತಿಗಳಾಗಿರುವರು. ತತ್ಪರಿಣಾಮವಾಗಿ ಈಗ ಒಂದು ಸಾಮಾನ್ಯ ಹಳ್ಳಿಯಲ್ಲಿ ಒಬ್ಬ ಕುಶಲ ಬಡಿಗನನ್ನಾಗಲಿ, ಕಮ್ಮಾರನನ್ನಾಗಲಿ ದೊರಕಿಸುವದು ಕಠಿಣವಾಗಿದೆ. ಕೈಗಾರಿಕೆಗಳು ಕುಗ್ಗಿದವು; ದುರ್ಲಕ್ಷಿಸಲ್ಪಟ್ಟ ಚರಖಾ ಲ್ಯಾಂಕೆಶ್ಯಾಯರವನ್ನು ಸೇರಿತು. ಅಲ್ಲಿ ಘನತೆಗೇರಿತು. ಆಂಗ್ಲ ಜನರ ಬುದ್ಧಿಮತ್ತೆಗೆ ನನ್ನ ಧನ್ಯವಾದಗಳು—ಔದ್ಯೋಗೀಕರಣದ ಬಗೆಗೆ ನನ್ನ ವಿಚಾರಗಳನ್ನು ಅನ್ಯೋನ್ಯ ಸಂಬಂಧವಿಡದೆ ನಾನು ಇದನ್ನು ಹೇಳುತ್ತೇನೆ....

ಯಾವುದೊಂದು ಉದ್ಯೋಗದ ಶಾಸ್ತ್ರ ಹಾಗು ಕಲೆ ಇವುಗಳನ್ನು ಪ್ರತ್ಯಕ್ಷ ಅನುಭವದ ಮೂಲಕ ಕಲಿಸಬೇಕು; ಅಂಥ ಉದ್ಯೋಗದ ಮೂಲಕ ಇಡಿಯ ಶಿಕ್ಷಣವು ದೊರೆಯಬೇಕು. ಇದೇ ತಕ್ಕ ಚಿಕಿತ್ಸೆ. ಉದಾಹರಣೆಗಾಗಿ, ತಕಲಿಯಿಂದ ನೂಲುವದನ್ನು ಕಲಿಸುವದಾದರೆ ಹತ್ತಿಯ ವಿವಿಧ ಪ್ರಕಾರಗಳು, ಹಿಂದುಸ್ತಾನದ ಬೇರೆ ಬೇರೆ ಪ್ರಾಂತಗಳಲ್ಲಿ ಭೂಮಿಯ ಪ್ರಕಾರಗಳು, ಕೈಗಾರಿಕೆಗಳು ಕುಗ್ಗಿದ ಚರಿತ್ರೆ, ಅದರ ರಾಜಕೀಯ ಕಾರಣಗಳ ಜೊತೆಗೆ ಹಿಂದುಸ್ತಾನದಲ್ಲಿ ಆಂಗ್ಲರ ಆಳಿಕೆಯ ಇತಿಹಾಸ, ಗಣಿತ ಜ್ಞಾನ ಇತ್ಯಾದಿ ವಿಷಯುಗಳ ಬಗ್ಗೆ ಪರಿಚಯ ಮಾಡಿಕೊಡಬೇಕಾಗುವದು. ನನ್ನ ಚಿಕ್ಕ ಮೊಮ್ಮಗನ ಮೇಲೆ ಇದೇ ಪ್ರಯೋಗವನ್ನು ಮಾಡುತ್ತಿದ್ದೇನೆ. ಅವನು ಕಲಿಸಲ್ಪಡುತ್ತಿರುವನೆಂಬ ಅರಿವು ಅವನಿಗಿಲ್ಲ; ಯಾಕಂದರೆ ಅವನು ಯಾವಾಗಲೂ ಆಡುತ್ತಾನೆ, ನಗುತ್ತಾನೆ, ಹಾಡುತ್ತಾನೆ. ನಾನು ತಕಲಿಗೆ ವಿಶೇಷ ಸ್ಥಾನವನ್ನು ಕೊಡುತ್ತೇನೆ. ಅದರ ಪ್ರಯೋಜನವನ್ನು ಒತ್ತಿ ಹೇಳುತ್ತೇನೆ; ಯಾಕಂದರೆ ಅದರ ಅದ್ಭುತ ಶಕ್ತಿಯನ್ನು ನಾನು ಅರಿತಿದ್ದೇನೆ. ಇದಲ್ಲದೆ ದೇಶದ ತುಂಬ ಕಲಿಸಬೇಕಾದ

ಉದ್ಯೋಗವೆಂದರೆ ವಸ್ತ್ರ ಕೈಗಾರಿಕೆಯೇ ಮತ್ತು ತಕಲಿಯು ಬಹಳ ಅಗ್ಗದ ವಸ್ತು. ನೀವು ಬೇರೆ ಯಾವುದಾದರೊಂದು ಉದ್ಯೋಗವನ್ನು ಸೂಚಿಸುವದಾದರೆ ದಯವಿಟ್ಟು ಹೇಳಿರಿ. ಯಾಕಂದರೆ ಅದರ ಬಗ್ಗೆ ಈಗ ಆಲೋಚನೆ ಮಾಡಬಹುದು. ಆದರೆ ದೇಶದ ಆರ್ಥಿಕ ದುಃಸ್ಥಿತಿಯನ್ನು ವಿಚಾರಿಸಿದಲ್ಲಿ ತಕಲಿಯೇ ನಮ್ಮ ಸಮಸ್ಯೆಯ ವ್ಯಾವಹಾರಿಕ ಪರಿಹಾರ ವೆಂದು ನಾನು ಮನಗಂಡಿದ್ದೇನೆ. ೧೯೨೦ರಿಂದ ಆರಂಭವಾದ ಖಾದಿ ವಿಧಾ ಯಕ ಕಾರ್ಯಕ್ರಮವು ಏಳು ಪ್ರಾಂತಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಳ ಗಳನ್ನು ರಚಿಸಲು ಕಾರಣವಾಗಿದೆ. ಈ ವಿಧಾಯಕ ಕಾರ್ಯಕ್ರಮವನ್ನು ನಾವು ಎಷ್ಟುಮಟ್ಟಿಗೆ ಮುಂದುವರಿಸುವೆವೋ, ಅದರ ಮೇಲೆ ಅದರ ಯಶಸ್ಸು ಅವಲಂಬಿಸಿದೆ.

ನಾನು ಮಂತ್ರಿಗಳ ಮುಂದೆ ಈ ಯೋಜನೆಯನ್ನು ಇಟ್ಟಿದ್ದೇನೆ. ಅದನ್ನು ಸ್ವೀಕರಿಸುವದು ಇಲ್ಲವೆ ತ್ಯಜಿಸುವದು ಅವರಿಗೇ ಬಿಟ್ಟಿದ್ದೇನೆ. ಆದರೆ ತಕಲಿಯು ಮಧ್ಯಗಾಮಿಯಾಗಿ ಪ್ರಾಥಮಿಕ ಶಿಕ್ಷಣವು ಸಾಗಬೇ ಕೆಂಬುದು ನನ್ನ ಸಲಹೆ. ಮೊದಲನೆಯ ವರುಷ ಪ್ರತಿಯೊಂದನ್ನು ತಕಲಿಯ ದ್ವಾರಾ ಕಲಿಸಬೇಕು. ೨ ನೆಯ ವರ್ಷ ನೂಲುವದರ ಜೊತೆಗೆ ಬೇರೆ ಬೇರೆ ವಿಧಾನಗಳನ್ನು ಕಲಿಸಬೇಕು. ತಕಲಿಯ ಮುಖಾಂತರ ಹಣ ಗಳಿಸು ವದೂ ಸಾಧ್ಯವಾಗುವದು; ಯಾಕಂದರೆ ಮಕ್ಕಳು ತಯಾರಿಸಿದ ಅರಿವೆಗೆ ಸಾಕಷ್ಟು ಬೇಡಿಕೆ ದೊರೆಯುತ್ತದೆ. ಪಾಲಕರು ತಮ್ಮ ಮಕ್ಕಳ ವಸ್ತು ಗಳನ್ನು ಉಪಯೋಗಿಸಿದರೆ ಸಾಕು. ನಾನು ಏಳು ವರ್ಷಗಳ ಅಭ್ಯಾಸ ಪತ್ರಿಕೆಯನ್ನೂ ಯೋಚಿಸಿದ್ದೇನೆ. ತಕಲಿಯಿಂದ ಸುರುವಾಗಿ ನೇಯುವದು, ಬಣ್ಣ ಕೊಡುವದು, ನಕ್ಷೆ ತೆಗೆಯುವದು ಇತ್ಯಾದಿ ಚಟುವಟಿಕೆಗಳಿಗೆ ಮುಕ್ತಾಯವಾಗುವದು.

ವಿದ್ಯಾರ್ಥಿಗಳ ದೈಹಿಕ ಶ್ರಮದ ಉತ್ಪಾದನೆಯಿಂದ ಶಿಕ್ಷಕರ ವೆಚ್ಚ ಗಳನ್ನು ತೆಗೆಯಬೇಕೆಂದು ನಾನು ಉತ್ಸುಕನಾಗಿದ್ದೇನೆ; ಯಾಕಂದರೆ ಕೋಟಿ ಗಟ್ಟಲೆ ಮಕ್ಕಳಿಗೆ ಶಿಕ್ಷಣವನ್ನು ಒದಗಿಸಲು ಅನ್ಯಮಾರ್ಗವಿಲ್ಲವೆಂದು ನಾನು ಮನಗಂಡಿದ್ದೇನೆ. ಸಾಕಷ್ಟು ಹಣ ದೊರೆಯುವವರೆಗೆ ಮತ್ತು ವ್ಹಾಯಿಸ ರಾಯರು ಸೈನ್ಯದ ವೆಚ್ಚವನ್ನು ಕಡಿಮೆ ಮಾಡುವವರೆಗೆ ನಾವು ತಡೆಯು

ವಂತಿಲ್ಲ. ಪ್ರಾಥಮಿಕ ಶಿಕ್ಷಣವು ಸ್ವಚ್ಛತಾ, ಆರೋಗ್ಯ, ಪೌಷ್ಟಿಕ ಆಹಾರ ಸ್ವಾವಲಂಬನ, ಮನೆಯಲ್ಲಿ ಪಾಲಕರಿಗೆ ನೆರವು ಇತ್ಯಾದಿ ವಿಷಯಗಳನ್ನು ಒಳಗೊಂಡಿರಬೇಕೆಂದು ನೀವು ಲಕ್ಷವಲ್ಲಿಡಬೇಕು. ಸದ್ಯದ ಪೀಳಿಗೆಯ ಹುಡುಗರಿಗೆ ಸ್ವಚ್ಛತೆ, ಸ್ವಾವಲಂಬನಗಳು ಗೊತ್ತಿಲ್ಲ; ಅಶಕ್ತರಾಗಿದ್ದಾರೆ. ಆದುದರಿಂದ ಸಂಗೀತ ಕವಾಯತ ಮುಖಾಂತರ ಶಾರೀರಿಕ ಶಿಕ್ಷಣವನ್ನು ಕಡ್ಡಾಯವಾಗಿ ಕೊಡಬಯಸುತ್ತೇನೆ.

ವಿದ್ಯಾ ವಿಷಯಕ ತರಬೇತಿಗೆ (Literary Training) ವಿರೋಧಿಯಾಗಿದ್ದೇನೆಂದು ನನ್ನನ್ನು ಆಕ್ಷೇಪಿಸುತ್ತಾರೆ. ತದ್ವಿರುದ್ಧವಾಗಿ, ಅದನ್ನು ಹೇಗೆ ಮಾಡಬೇಕೆಂಬುದನ್ನೇ ತೋರಬಯಸುತ್ತೇನೆ. ಸ್ವಾವಲಂಬನ (Self Supporting) ದೃಷ್ಟಿಗೂ ಆಕ್ಷೇಪಣವಿದೆ. ಪ್ರಾಥಮಿಕ ಶಿಕ್ಷಣಕ್ಕೆ ಲಕ್ಷಗಟ್ಟಲೆ ಖರ್ಚುಮಾಡುವದರ ಬದಲು ಮಕ್ಕಳನ್ನು ಸುಲಿಯುತ್ತೇವೆಂದೂ ಅನ್ನುತ್ತಾರೆ. ಬಹಳ ಅಪವ್ಯಯವಾಗುವದೆಂದೂ ಅಂಜಿಕೆಯಿದೆ.

ಈ ಅಂಜಿಕೆಯನ್ನು ಅನುಭವದಿಂದ ದೂರ ಮಾಡಲಾಗಿದೆ. ಮಗುವನ್ನು ಅನಿಷ್ಟಪಾತದಿಂದ ಉಳಿಸುವದು ಅವನಿಗೆ ಭಾರ ಹೊರಿಸಿದಂತೆಯೇ? ಅವನನ್ನು ಸುಲಿದಂತೆಯೇ? ಎಂದು ಕೇಳುವೆ. ತಕಲಿಯು ಉತ್ತಮ ಆಟಿಗೆಯು. ಆಟಿಗೆಯು ಮಾತ್ರವಲ್ಲ; ಉತ್ಪಾದನೆಯ ಸಾಧನವು. ಇಂದಿಗೂ ಮಕ್ಕಳು ತಮ್ಮ ತಂದೆ-ತಾಯಿಗಳಿಗೆ ಕೆಲಮಟ್ಟಿಗೆ ನೆರವಾಗುತ್ತಾರೆ. ತಮ್ಮ ಪಾಲಕರೊಡನೆ ಹೊಲದಲ್ಲಿ ಕೆಲಸ ಮಾಡಿದ ಸೇಗಾಂವ ಗ್ರಾಮದ ಬಾಲಕರು ಕೃಷಿವಿಧಾನಗಳನ್ನು ನನಗಿಂತಲೂ ಹೆಚ್ಚು ಚೆನ್ನಾಗಿ ಬಲ್ಲವರಿದ್ದಾರೆ. ನೂಲುವ ಮತ್ತು ಕೃಷಿಕರ್ಮಗಳಲ್ಲಿ ತಮ್ಮ ತಂದೆ-ತಾಯಿಗಳಿಗೆ ನೆರವಾಗಲು ಮಗುವಿಗೆ ಪ್ರೋತ್ಸಾಹ ಕೊಟ್ಟಾಗ, ಅವನಿಗೆ ತನ್ನ ಪಾಲಕರಿಗೆ ಮಾತ್ರ ಸಂಬಂಧಿಸಿದವನೆಂದು ಅನಿಸದೆ, ಹಳ್ಳಿಗೆ, ದೇಶಕ್ಕೆ ಸಹ ಸಂಬಂಧಿಸಿದವನೆಂದು ಅನಿಸುವಂತೆ ಮಾಡಬಹುದು; ಮತ್ತು ಅವನಿಗೆ ಏನಾದರೂ ತಾನು ಪ್ರತಿಯಾಗಿ ಕೊಡಬೇಕೆಂದು ಅನಿಸುವದು. ಅದೊಂದೇ ಮಾರ್ಗವು. ಮಕ್ಕಳಿಗೆ ವಿಷಯ ವಿದ್ಯೆಯನ್ನು ತುರುಕುವದರಿಂದ ಅವರನ್ನು ನಿರುಪಯುಕ್ತರನ್ನಾಗಿ ಮಾಡುವರೆಂದು ಮಂತ್ರಿಗಳಿಗೆ ಹೇಳುತ್ತೇನೆ. ತಮ್ಮ ಶ್ರಮದಿಂದ ತಮ್ಮ ವಿದ್ಯಾಭ್ಯಾಸದ ವೆಚ್ಚಕ್ಕಾಗಿ ಕೊಡುವಂತೆ ತಮ್ಮ

ಮಕ್ಕಳಿಗೆ ಮಾಡುವದರಿಂದ ಅವರು (ಮಂತ್ರಿಗಳು) ಮಕ್ಕಳನ್ನು ಆತ್ಮ ವಿಶ್ವಾಸಿಕರನ್ನಾಗಿಯೂ, ಧೀರರನ್ನಾಗಿಯೂ ಮಾಡುವರು. ಹಿಂದು, ಮುಸಲ್ಮಾನ, ಪಾರ್ಸಿ, ಕ್ರಿಶ್ಚಿಯನ್ ಎಲ್ಲರಿಗೂ ಈ ಕ್ರಮವು ಅನ್ವಯಿಸ ಬೇಕು. ಧಾರ್ಮಿಕ ಶಿಕ್ಷಣದ ಬಗ್ಗೆ ನಾನು ಯಾಕೆ ಒತ್ತಿ ಹೇಳುವದಿಲ್ಲ ವೆಂದು ಜನರು ಕೇಳುತ್ತಾರೆ. ಅಹುದು. ನಾನು ಅವರಿಗೆ ವ್ಯಾವಹಾರಿಕ ಧರ್ಮ, ಸ್ವಾವಲಂಬನ ಧರ್ಮವನ್ನು ಕಲಿಸುತ್ತೇನೆ.

ಈ ಪ್ರಕಾರ ತರಬೇತು ಹೊಂದಿದ ವಿದ್ಯಾರ್ಥಿಗಳಿಗೆ, ಅವಶ್ಯ ಕಂಡಲ್ಲಿ, ಸರಕಾರವು ಕೆಲಸವನ್ನು ಒದಗಿಸಿಕೊಡಬೇಕು. ಶಿಕ್ಷಕರ ಬಗ್ಗೆ ನಿರ್ಬಂಧದಿಂದ ರಾಷ್ಟ್ರಸೇವಾ ವೃತ್ತಿಯಲ್ಲಿ ಸೇರಿಸುವ ಕ್ರಮವನ್ನು ಪ್ರೊ. ಶಹಾ ಅವರು ಸೂಚಿಸಿದ್ದಾರೆ. ಇಟಲಿ ಹಾಗೂ ಇತರ ದೇಶಗಳ ಉದಾ ಹರಣೆಗಳನ್ನು ಕೊಟ್ಟು ಅದರ ಮಹತ್ವವನ್ನು ತಿಳಿಹೇಳಿದ್ದಾರೆ.

ಮುಸೋಲಿನಿಯು ತನ್ನ ದೇಶದ ಸೇವೆಗಾಗಿ ಇಟಲಿಯ ತರುಣರನ್ನು ಹೃದ್ಗತ ಪಡಿಸಿದರೆ; ನಾವೇಕೆ ಮಾಡಬಾರದು ? ತಮ್ಮ ಜೀವನೋದ್ಯೋಗ ವನ್ನು ಆರಂಭಿಸುವ ಪೂರ್ವದಲ್ಲಿ ಒಂದು ವರುಷ ಇಲ್ಲವೆ ಹೆಚ್ಚು ಅವಧಿಯ ವರೆಗೆ ದೇಶಸೇವೆಗಾಗಿ ನಮ್ಮ ತರುಣರನ್ನು ಕಡ್ಡಾಯವಾಗಿ ಸೇರಿಸಿದರೆ, ಅದಕ್ಕೆ ಗುಲಾಮಗಿರಿಯೆಂದು ಹೆಸರಿಡುವದು ಯೋಗ್ಯವಾದೀತೇ ? ಕಳೆದ ಹದಿನೇಳು ವರುಷಗಳಿಂದ ತರುಣರು ಸ್ವಾತಂತ್ರ್ಯ ಚಳವಳಿಯ ಯಶಸ್ಸಿಗೆ ಬಹುಮಟ್ಟಿಗೆ ಭಾಗಿಗಳಾಗಿದ್ದಾರೆ. ರಾಷ್ಟ್ರಸೇವೆಗಾಗಿ ತಮ್ಮ ಜೀವನವನ್ನು ಒಂದು ವರ್ಷ ಮೀಸಲಿಡಬೇಕಾಗಿ ನಾನು ಕೇಳುತ್ತೇನೆ. ಈ ವಿಷಯದಲ್ಲಿ ಕಾನೂನು ಅವಶ್ಯವೆನಿಸಿದಲ್ಲಿ, ಅದನ್ನು ಒತ್ತಾಯ ಮಾಡಲಾಗುವುದಿಲ್ಲ; ಯಾಕಂದರೆ ನಮ್ಮ ಪ್ರತಿನಿಧಿಗಳ ಬಹುಮತ ದೊರೆತ ಹೊರತು ಅದು ಮಂಜೂರಾಗುವದಿಲ್ಲ.

ದೈಹಿಕ ಶ್ರಮದ ಮೂಲಕ ದೊರೆಯುವ ಶಿಕ್ಷಣವು ನಿಮ್ಮ ಮನ ತಟ್ಟಿದೆಯೋ ? ಇಲ್ಲವೊ ? ತಿಳಿಸಿರಿ, ಎಂದು ನಾನು ಕೇಳುತ್ತೇನೆ. ನನ್ನ ಮಟ್ಟಿಗೆ ಆ ಶಿಕ್ಷಣವನ್ನು ಸ್ವಾವಲಂಬಿಯಾಗಿ ಮಾಡುವದೇ ಅದರ ಯೋಗ್ಯತೆಯ ಒರೆಗಲ್ಲು. ಏಳು ವರ್ಷಗಳ ಕೊನೆಗೆ ಮಕ್ಕಳು ತಮ್ಮ ಶಿಕ್ಷಣದ ವೆಚ್ಚವನ್ನು ಕೊಡಲು ಸಮರ್ಥರಾಗತಕ್ಕದ್ದು ಮತ್ತು

ಗಳಿಸುವ ಘಟಕಗಳಾಗಬೇಕು, ಕಾಲೇಜ ಶಿಕ್ಷಣವು ಬಹಳವಾಗಿ ನಗರದ ಸಮಸ್ಯೆಯು. ಪ್ರಾಥಮಿಕ ಶಿಕ್ಷಣದಂತೆ ಅದು ಬಲು ಕರಿಸಾಲು ಬಿದ್ದಿದೆಂದು ನಾನು ಹೇಳುವದಿಲ್ಲ; ಆದರೆ ಅದರ ಪರಿಣಾಮಗಳು ಬಹು ನಿರುತ್ಸಾಹ ಜನಕವಾಗಿವೆ. ಯಾವನೊಬ್ಬ ಪದವೀಧರನು ಕೆಲಸವಿಲ್ಲದೆ ಏಕೆ ಕೂಡ್ರಬೇಕು ?

ತಕಲಿಯು ಶಿಕ್ಷಣದ ನಿಶ್ಚಿತ ಸಾಧನವೆಂದು ನಾನು ಪ್ರಸ್ತಾಪಿಸಿದ್ದೇನೆ; ಯಾಕಂದರೆ ವಿನೋಬಾ ಅವರು ಅಧಿಕವಾಗಿ ಪ್ರತ್ಯಕ್ಷ ಅನುಭವ ಪಡೆದಿದ್ದಾರೆ ಮತ್ತು ನಮ್ಮ ಆಕ್ಷೇಪಣೆಗೆ ಉತ್ತರ ಕೊಡಲು ಅವರು ಇಲ್ಲಿಯೇ ಇದ್ದಾರೆ. ಕಾಕಾಸಾಹೇಬ ಸಹ ನಿಮಗೆ ಸ್ವಲ್ಪ ಮಟ್ಟಿಗೆ ಹೇಳಬಲ್ಲರು; ಆದಾಗ್ಯೂ ಅವರ ಅನುಭವವು ವ್ಯವಹಾರಿಕಕ್ಕಿಂತ ಸಿದ್ಧಾಂತ ರೂಪದಲ್ಲಿಯೇ ಹೆಚ್ಚಿದೆ. ಅವರು ವಿಶೇಷವಾಗಿ ಆರ್ಮಸ್ಟ್ರಾಂಗರ ಜೀವನಕ್ಕಾಗಿ ಶಿಕ್ಷಣ (Education for Life) ಸಿದ್ಧಾಂತದ ಕಡೆಗೆ ನನ್ನ ಲಕ್ಷವನ್ನು ಎಳೆದಿರುವರು; ಅದರಲ್ಲೂ 'ಕೈ ಶಿಕ್ಷಣ'ದ ಅಧ್ಯಾಯವನ್ನು ತೋರಿಸಿದ್ದಾರೆ. ದಿವಂಗತ ಮಧುಸೂದನದಾಸ ಅವರು ವಕೀಲರಿದ್ದರು. "ನಮ್ಮ ಕೈ ಕಾಲುಗಳನ್ನು ಉಪಯೋಗಿಸದಿದ್ದರೆ, ನಮ್ಮ ಮಿದುಳಿಗೆ ಕ್ಷಯರೋಗ ಹತ್ತುವದು; ಮತ್ತು ಒಂದು ವೇಳೆ ಅದು ಕೆಲಸ ಮಾಡಿದರೂ ಅದು ಸೈತಾನನ ನಿವಾಸವಾಗುವದು" ಎಂದು ಅವರು ಮನಗಂಡಿದ್ದರು. ಟಾಲ್‌ಸ್ಟಾಯ್ ಅವರು ತಮ್ಮ ಅನೇಕ ಕಥೆಗಳ ಮೂಲಕ ಅದೇ ಪಾಠವನ್ನು ಕಲಿಸಿದರು.

ನಮ್ಮೊಳಗೆ ಜಾತೀಯ ಜಗಳಗಳು ಅವೆ; ಅವು ನಮ್ಮಲ್ಲಿ ಮಾತ್ರ ಅವೆ ಎಂದಲ್ಲ! ಇಂಗ್ಲಂಡದಲ್ಲಿ ಸಹ ಗುಲಾಬಿ ಹೂಗಳ ಯುದ್ಧಗಳು ಜರುಗಿದವು; ಮತ್ತು ಇಂದು ಬ್ರಿಟಿಶರ ಸಾಮ್ರಾಜ್ಯವಾದವು ಜಗತ್ತಿನ ವೈರಿಯಾಗಿದೆ. ಜಾತೀಯ ಜಗಳಗಳನ್ನೂ ಅಂತರ ರಾಷ್ಟ್ರೀಯ ಕಲಹಗಳನ್ನೂ ಕಿತ್ತೊಗೆಯುವುದಾದರೆ, ನಮ್ಮ ತರುಣ ಪೀಳಿಗೆಯು ನಾನು ನಿವೇದಿಸಿದ ಶಿಕ್ಷಣದ ಮಾರ್ಗವಾಗಿ ಶುದ್ಧ ಹಾಗೂ ಭದ್ರವಾದ ತಳಗಲ್ಲುಗಳನ್ನು ಇಟ್ಟು ಸಾಗಲೇಬೇಕು.

ಆ ಯೋಜನೆಯು 'ಅಹಿಂಸಾ' ನೆಲೆಯಿಂದ ಮಟಿಯುತ್ತದೆ. ಸೆರೆಸಿಂದಿಯ ನಿರ್ಬಂಧದ ಬಗ್ಗೆ ರಾಷ್ಟ್ರದ ನಿರ್ಣಯದ ಜೊತೆಗೆ ನಾನು

ಇದನ್ನು ಸೂಚನೆ ಮಾಡಿದ್ದೇನೆ. ಆದರೆ ಕಂದಾಯದ ಉತ್ಪನ್ನವು ಕಡಿಮೆಯಾಗದಿದ್ದರೂ, ನಮ್ಮ ತಿಜೋರಿಯು ತುಂಬಿದ್ದರೂ, ನಮ್ಮ ಮಕ್ಕಳನ್ನು ನಗರ ವಾಸನೆಗಳಿಂದ ದೂರಿಡಬೇಕಾದರೆ ಈ ಶಿಕ್ಷಣವು ಅತ್ಯವಶ್ಯವೆಂದು ನಾನು ಹೇಳುತ್ತೇನೆ. (ನಮ್ಮ ಸಂಸ್ಕೃತಿ, ಪ್ರಗತಿ, ನಮ್ಮ ರಾಷ್ಟ್ರದ ನಿಜವಾದ ಬುದ್ಧಿ, ವೈಭವ ಇವುಗಳ ಪ್ರತೀಕಗಳಾಗುವಂತೆ ನಾವು ಅವರನ್ನು ತಯಾರಿಸಬೇಕು. ಸ್ವಾವಲಂಬಿ ಪ್ರಾಥಮಿಕ ಶಿಕ್ಷಣವನ್ನು ಅವರಿಗೆ ಕೊಡುವ ಮಾರ್ಗದ ಹೊರತು ಇನ್ನೊಂದಿಲ್ಲ.) ಯುರೋಪ ನಮಗೆ ಉದಾಹರಣೆಯಲ್ಲ. ಅದು ಹಿಂಸಾವೃತ್ತಿಗಳಿಂದ ತನ್ನ ಕಾರ್ಯಕ್ರಮವನ್ನು ನಿರ್ದಿಷ್ಟಗೊಳಿಸುವದು; ಯಾಕಂದರೆ ಅದಕ್ಕೆ ಹಿಂಸೆಯಲ್ಲಿ ನಂಬಿಗೆಯಿದೆ. ರಶಿಯಾದ ಉತ್ತೀರ್ಣತೆಯನ್ನು ಕಡೆಗಣಿಸುವ ಇಚ್ಛೆ ನನಗಿಲ್ಲ. ಆದರೆ, ಶಕ್ತಿ—ಹಿಂಸೆಗಳ ಮೇಲೆ ತನ್ನ ಮಂದಿರವನ್ನು ರಚಿಸಿದೆ, ಹಿಂದುಸ್ಥಾನವು ಹಿಂಸೆಯನ್ನು ಕಿತ್ತೊಗೆಯಲು ನಿರ್ಣಯಿಸಿದರೆ, ಈ ತರದ ಶಿಕ್ಷಣ ಕ್ರಮವು ಮುಂಬರುವ ಶಿಸ್ತಿನ ಮುಖ್ಯಾಂಗವಾಗುತ್ತದೆ. ಇಂಗ್ಲಂಡ ಅಮೇರಿಕಾ ದೇಶಗಳು ಶಿಕ್ಷಣಕ್ಕಾಗಿ ಲಕ್ಷಗಟ್ಟಲೆ ಹಣ ಖರ್ಚುಮಾಡುತ್ತವೆಂದು ನಾವು ಕೇಳುತ್ತೇವೆ; ಆದರೆ ಅದೆಲ್ಲ ಸುಲಿಗೆಯಿಂದ ಬಂದ ಹಣವೆಂದು ಮರೆಯುತ್ತೇವೆ. ಅವರು ಸುಲಿಗೆಯ ಕಲೆಯನ್ನು ಶಾಸ್ತ್ರದ ಮಟ್ಟಕ್ಕೆ ಇಳಿಸಿದ್ದಾರೆ; ಅವರು ಹೆಚ್ಚು ವೆಚ್ಚದ ಶಿಕ್ಷಣವನ್ನು ಕೊಡಬಲ್ಲರು. ಸುಲಿಗೆಯ ದೃಷ್ಟಿಯಿಂದ ನಾವು ವಿಚಾರಿಸಲಾರೆವು; ವಿಚಾರಿಸುವದಿಲ್ಲ. ಅಹಿಂಸೆಯ ತಳಗಲ್ಲಿನ ಮೇಲೆ ನಿಲ್ಲಿಸಿದ ಶಿಕ್ಷಣ ಯೋಜನೆಯ ಹೊರತು ನಮಗೆ ಇನ್ನೊಂದು ಮಾರ್ಗವಿಲ್ಲ.

# ೨. ವರ್ಧಾ ಶಿಕ್ಷಣದ ಹುಟ್ಟು ಹಾಗು ಅದರ ಪ್ರಗತಿ

ಮೂಲ ಶಿಕ್ಷಣ ಯೋಜನೆಯ ಹಿನ್ನೆಲೆಯನ್ನು ಇಲ್ಲಿ ವಿವರಿಸುವ. ಯಾವುದೊಂದು ಹೊಸ ಯೋಜನೆಗೆ ಅದರ ಜನಕನ ಹೆಸರಿನಿಂದಾಗಲಿ, ಅದರ ಹುಟ್ಟು ಸ್ಥಾನದಿಂದಾಗಲಿ ಹೆಸರು ಕೊಡುವ ರೂಢಿಯದೆ. ಈ ಯೋಜನೆಯು ಮಧ್ಯಪ್ರಾಂತದ ವರ್ದಾ ನಗರದಲ್ಲಿ ರೂಪುಗೊಂಡಿತು. ಅದರ ಮೂಲಪುರುಷರು ಯುಗಪ್ರವರ್ತಕ ಗಾಂಧಿಜಿಯುವರು.

**ಉಪಕ್ರಮ:—**

ಮೊಟ್ಟಮೊದಲು ೧೯೩೭ನೇ ಜುಲೈ ತಿಂಗಳಲ್ಲಿ ಗಾಂಧಿಜಿಯುವರು ಹರಿಜನ ಪತ್ರಿಕೆಯಲ್ಲಿ ತಮ್ಮ ವಿಚಾರಗಳನ್ನು ಪ್ರಸಿದ್ಧಿಸಿದರು. “ಶಿಕ್ಷಣದಿಂದ ಮಗುವಿನ ಸಮನ್ವಿತ ವಿಕಾಸವಾಗಬೇಕು. ಸಾಕ್ಷರತೆಯು ಶಿಕ್ಷಣವಲ್ಲ. ಕೈಗಾರಿಕೆಯ ಮುಖಾಂತರ ಮಗುವಿನ ಶಿಕ್ಷಣ ಆರಂಭವಾಗಬೇಕು. ಮಕ್ಕಳ ಕೆಲಸದಿಂದುಂಟಾದ ಸಾಮಾನುಗಳನ್ನು ಸರಕಾರವು ಕೊಂಡಲ್ಲಿ, ಶಿಕ್ಷಣವು ಸ್ವಾವಲಂಬಿಯಾಗಬಲ್ಲದು. ಇಂಥ ಶಿಕ್ಷಣ ಯೋಜನೆಯನ್ವಯ ಮಗುವಿನ ಮನಸ್ಸು ಹಾಗು ಆತ್ಮ ಪೂರ್ತಿವಿಕಾಸ ಹೊಂದುವವು. ಕೈಗಾರಿಕೆಯನ್ನು ಯಾಂತ್ರಿಕವಾಗಿ ಕಲಿಸದೆ, ಶಾಸ್ತ್ರಬದ್ಧವಾಗಿ ಕಲಿಸಬೇಕು. ಪ್ರತಿಯೊಂದು ವಿಧಾನದ ಕಾರ್ಯಕಾರಣ ತಿಳಿಯಬೇಕು. ಆತ್ಮ ವಿಶ್ವಾಸವಿಲ್ಲದೆ ಹೀಗೆ ನಾನು ಬರೆದಿಲ್ಲ; ಅನುಭವದ ಹಿನ್ನೆಲೆಯಿದೆ.”

ಹರಿಜನ, ತಾರೀಖು. ೩೧–೭–೧೯೩೭. ಗಾಂಧೀಜಿ.

**ಪ್ರತಿಕ್ರಿಯೆ:**

ಈ ರೀತಿ ಮಹಾತ್ಮಾಜಿಯವರು ತಮ್ಮ ವಿಚಾರಗಳನ್ನು ಸೂತ್ರರೂಪವಾಗಿ ಪ್ರಕಟಿಸಿದರು. ತಮ್ಮ ಯೋಜನೆಯ ಬಗೆಗೆ ಅವರು ಉದ್ಗ್ರಂಥ ಬರೆಯಲಿಲ್ಲ. ಬೋಧನ ಕ್ರಮವನ್ನು ಬಹುಕಾಲ ಪ್ರಯೋಗಿಸಲಿಲ್ಲ. ಅಂತೆಯೇ ಶಿಕ್ಷಣ ತಜ್ಞರಿಗೆ ಆಶ್ಚರ್ಯವೆನಿಸಿತು. ಅದೇಕೆ? ಸಿಡಿಲು ಬಡಿದಂತಾಯಿತು ಕೆಲವರಿಗೆ. ಹೊಸತಲ್ಲವೆಂದರು ಕೆಲವರು. ಹುರುಳಿಲ್ಲವೆಂದರು

ಮತ್ತೆ ಕೆಲವರು. ಗಾಂಧೀಜಿಯವರಿಗೆ ಶಿಕ್ಷಣದಲ್ಲಿ ಅನುಭವ ವೆಲ್ಲಿದೆ ? ಎಂದು ಉಸಿರೆಳೆದರು ಮತ್ತೆ ಕೆಲವರು. ಅಷ್ಟೇ ಅಲ್ಲ ! ಅವರ ಮುದಿಹುಚ್ಚಿನ ಪ್ರತೀಕವೆಂದರು ಬೇರೆ ಕೆಲವರು. ಈ ತರದ ಉದ್ಗಾರ ಗಳು ಬೈಲಿಗೆ ಬಂದರೆ ಆಶ್ಚರ್ಯವಲ್ಲ. ಯಾಕಂದರೆ ಮಹಾತ್ಮಾಜಿಯ ಶೈಕ್ಷಣಿಕ ಯೋಜನೆಯು ಅವರ ಜೀವನದ ದರ್ಶನ. ಅಂಥವರ ಅಂತಃ ಸ್ಫೂರ್ತಿಯಿಂದ ಹೊರಬಿದ್ದ ವಿಚಾರಗಳು ಸಾಮಾನ್ಯ ಜನತೆಯ ಮಟ್ಟಕ್ಕೆ ತಟ್ಟನೆ ಮುಟ್ಟುವದಿಲ್ಲ. ಕೆಲ ಕಾಲ ಗತಿಸಬೇಕು. ಕೆಲ ಪುರೋಹಿತರು ಸೂತ್ರದಲ್ಲಿದ್ದ ಮೂಲ ವಿಚಾರಗಳನ್ನು ವಿಕಸಿಸಬೇಕು. ಜನಸಾಮಾನ್ಯ ರಿಗೆ ತಿಳಿಯುವಂತೆ ಪ್ರಚಲಿತ ಶಿಕ್ಷಣ ತಜ್ಞರ ವಿಚಾರಗಳಿಗೆ ಸರಿಹಚ್ಚಿ ಸಾಮ್ಯ ವೈಷಮ್ಯಗಳನ್ನು ವಿಸ್ತರಿಸಿ, ಹೊಸ ಹೊಳಪನ್ನು ಪ್ರತ್ಯೇಕಿಸಿ, ದರ್ಶನದ ಸ್ವರೂಪವನ್ನು ಚಿತ್ರಿಸಬೇಕು. ಆಗ ದರ್ಶನದ ವಾಸ್ತವತೆ, ಸಹಜತೆ, ಸತ್ಯತೆ ಹೊರಬಿದ್ದು ಅದು ಜನರನ್ನು ಆಕರ್ಷಿಸುವದು. ರಾಜ ಕೀಯ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳನ್ನು ಆವರಿಸಿದ ಪ್ರಗತಿಪರ ಕ್ರಾಂತಿಗೆ ಕೂಡಲೆ ಸ್ವಾಗತ ದೊರೆಯುವದು ಸಾಧ್ಯವಿಲ್ಲ. ಅಂತಹ ಸಂಧಿ ಕಾಲದಲ್ಲಿ ವಿರೋಧವೇ ಮೊದಲು ಮೀಸಲು. ಜಗತ್ತಿನ ಇತಿಹಾಸವು ಇದನ್ನೇ ಸಾರುವದು. ಗಾಂಧೀಜಿಯವರು ಕೋಪಿಸಲಿಲ್ಲ. ತಮ್ಮ ಸೌಜನ್ಯ ಕ್ಕನುಗುಣವಾಗುವಂತೆ ಶಿಕ್ಷಣ ತಜ್ಞರ ವಿಮರ್ಶೆಗೆ ಉತ್ತರ ರೂಪವಾಗಿ ಹರಿಜನದಲ್ಲಿ ಮತ್ತೆ ಲೇಖ ಬರೆಯಲಾರಂಭಿಸಿದರು. ಹಳ್ಳಿಯ ಕೈಗಾರಿಕೆ ಗಳ ಮುಖಾಂತರ ಮಗುವಿನ ವ್ಯಕ್ತಿತ್ವ ವಿಕಾಸವಾಗಬೇಕೆಂದು ಅವರು ಒತ್ತಿ ಹೇಳಿದರು.

**ಗಾಂಧೀಜಿಯವರ ಉತ್ತರಗಳು:**

“ನನ್ನ ಸೂಚನೆಯು ಶಿಕ್ಷಣ ತಜ್ಞರಿಗೆ ಸಿಡಿಲು ಬಡಿದಂತಾಗಿದೆ. ಯಾಕಂದರೆ ಅವರಿಗೆ ಇನ್ನೊಂದು ಪದ್ಧತಿಯು ಪರಿಚಯವಿಲ್ಲ. ಶಿಕ್ಷಣವು ಸ್ವಾವಲಂಬಿಯಾಗಬೇಕೆಂಬ ವಿಚಾರವಂತೂ ಶಿಕ್ಷಣದ ಮೂಲ್ಯವನ್ನೇ ಕಿತ್ತೊಗೆದಂತಾಗಿದೆಂದು ಅನ್ನುವರು. ದೈಹಿಕ ಶ್ರಮದಿಂದ ಮಕ್ಕಳು ಶ್ರಮ ಗೌರವ ತತ್ವ ತಿಳಿಯುವರು. ಅವರ ಬುದ್ಧಿಯೂ ವಿಕಾಸವಾಗು ವದು. ಅವರಿಗೆ ಶಿಕ್ಷಣಕೊಡುವ ಶಿಕ್ಷಕರೂ ತಮ್ಮ ಶ್ರಮದ ಪಾಲಿನಲ್ಲಿ ಭಾಗಿಗಳಾದರೆ, ಅವರಲ್ಲಿ ಹೆಮ್ಮೆ ಹಿರಿಮೆಗಳುಂಟಾಗುವವು”

ಹರಿಜನ, ತಾರೀಖು. ೧೧–೯–೧೯೩೭

" ರಾಷ್ಟ್ರೀಯ ಶಿಕ್ಷಣದಲ್ಲಿ ಬೌದ್ಧಿಕ ಶಿಕ್ಷಣದ ಸಂಗಾತಿಯಾಗಿ ಕೈಗಾರಿಕೆ ಕಲಿಸಬೇಕೆಂಬುದು ನನ್ನ ಸೂಚನೆಯಲ್ಲ. ಕೈಗಾರಿಕೆಯು ಬುದ್ಧಿಯನ್ನು ವಿಕಸಿಸುವ ಸಾಧನವಾಗಬೇಕು. ಈ ನಿರ್ಣಯಕ್ಕೆ ನಾನು ಬಂದಿದ್ದೇನೆ; ಯಾಕೆಂದರೆ ನಮ್ಮ ಬಾಲಕರ ಬುದ್ಧಿಯು ಅಪವ್ಯಯವಾಗುತ್ತಿದೆ. ಶಾಲೆ ಬಿಟ್ಟನಂತರ ಅವರಿಗೆ ಏನುಮಾಡಬೇಕೆಂಬುದು ಗೊತ್ತಿಲ್ಲ."

ಹರಿಜನ, ತಾರೀಖು. ೧೧-೯-೧೯೩೭.

" ಹಿಂದುಸ್ತಾನದಲ್ಲಿ ಪ್ರಾಥಮಿಕ ಶಿಕ್ಷಣವು ಪುಕ್ಕಟೆಯಾಗಿಯೂ, ಕಡ್ಡಾಯವಾಗಿಯೂ ದೊರೆಯಬೇಕೆಂದು ನನಗೆ ಪೂರ್ಣ ನಂಬಿಗೆಯಿದೆ. ನಮ್ಮಲ್ಲಿ ಉಪಯುಕ್ತ ಉದ್ಯಮವನ್ನು ಕಲಿಸುವದರಿಂದ ಮಾತ್ರ ಇದು ಸಾಧ್ಯವಿದೆಯೆಂದು ನನ್ನ ಮತ. ಆದರಿಂದ ಉದ್ಯಮವು ಮಕ್ಕಳ ದೈಹಿಕ, ಬೌದ್ಧಿಕ, ನೈತಿಕ ಶಕ್ತಿಗಳನ್ನು ಸ್ಫೂರ್ತಿಗೊಳಿಸುವ ಸಾಧನವಾಗಬೇಕು."

ಹರಿಜನ, ತಾರೀಖು. ೯-೧೦-೧೯೩೭.

**ಸಮ್ಮೇಲನ:**

ಈ ರೀತಿ ಗಾಂಧೀಜಿಯವರು ತಮ್ಮ ವಿಚಾರಗಳ ತಿಳಿಹೊಳೆ ಹರಿಸಿದರು. ಅಷ್ಟರಲ್ಲಿ ಅವರ ವಿಚಾರಗಳನ್ನು ಕೂಲಂಕಷವಾಗಿ ಪರಿಶೀಲಿಸಲು ಶಿಕ್ಷಣ ತಜ್ಞರ ಒಂದು ಸಮ್ಮೇಲನವನ್ನು ಕರೆಯಬೇಕೆಂಬ ಕೂಗು ಕೇಳತೊಡಗಿತು. ವರ್ಧಾದಲ್ಲಿಯ ಮಾರವಾಡಿ ಶಿಕ್ಷಣ ಸಂಸ್ಥೆಯ ಸಂಚಾಲಕರು ಇವರ ಬಗೆಗೆ ಗಾಂಧೀಜಿಯವರನ್ನು ಕೇಳಿಕೊಂಡು, ಅದಕ್ಕೆ ಅವರ ಒಪ್ಪಿಗೆ ಪಡೆದರು. ೧೯೩೭ನೇ ಅಕ್ಟೋಬರ ತಿಂಗಳಲ್ಲಿ ವರ್ಧಾದಲ್ಲಿ ಒಂದು ಸಮ್ಮೇಲನವನ್ನು ಕರೆಯಲಾಯಿತು. ಈಗಾಗಲೇ ಹಿಂದುಸ್ತಾನದ ಏಳು ಪ್ರಾಂತಗಳಲ್ಲಿ ಕಾಂಗ್ರೆಸ್ ಸರಕಾರ ಸ್ಥಾಪನೆಯಾಗಿತ್ತು. ಆ ಪ್ರಾಂತಗಳ ಶಿಕ್ಷಣ ಮಂತ್ರಿಗಳೂ, ಶಿಕ್ಷಣದಲ್ಲಿ ಆಸ್ಥೆಯುಳ್ಳ ರಾಷ್ಟ್ರೀಯ ಮುಂದಾಳುಗಳೂ, ಕೆಲವು ಸಂಸ್ಥಾನಗಳ ಶಿಕ್ಷಣ ತಜ್ಞರೂ, ಅರ್ಥಶಾಸ್ತ್ರಜ್ಞರೂ ಆಮಂತ್ರಿತರಾಗಿದ್ದರು. ಮಹಾತ್ಮಾಜಿಯವರೇ ಈ ಸಮ್ಮೇಲನದ ಅಧ್ಯಕ್ಷರಾಗಿದ್ದರು. ಅವರ ಪ್ರಾಸ್ತಾವಿಕ ಭಾಷಣವೇ ಅವರ ಶೈಕ್ಷಣಿಕ ವಿಚಾರಗಳ ಸಾರವು. ಡಾ। ಝಾಕೀರ ಹುಸೇನ, ಶ್ರೀ ಆರ್ಯನಾಯಕಂ, ಶ್ರೀಮತಿ ಆಶಾದೇವಿ, ಆಚಾರ್ಯ ವಿನೋಬಾ, ಆಚಾರ್ಯ ಕಾಲೇಲಕರ, ಆಚಾರ್ಯ

ಕೃಪಾಲಾನಿ, ಶ್ರೀ ಜಾಜು, ಪ್ರೊ. ಕೆ. ಜಿ. ಸೈಯ್ಯದೈನ, ಪ್ರೊ. ಕೆ. ಟಿ. ಶಹ ಹಾಗೂ ಕಾಂಗ್ರೆಸ ಪ್ರಾಂತಗಳ ಶಿಕ್ಷಣ ತಜ್ಞರೂ ಇತ್ಯಾದಿ ಮಹನೀಯರು ಮಹಾತ್ಮಾಜಿಯವರ ಹೊಸ ವಿಚಾರಗಳನ್ನು ವಿಮರ್ಶೆ ಮಾಡಿದರು. ಕೆಲವು ಆಕ್ಷೇಪಣೆಗಳನ್ನು ಎತ್ತಿದರು. ಗಾಂಧೀಜಿಯವರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಅವುಗಳಿಗೆ ಉತ್ತರಿಸಿದರು.

ಈ ಚರ್ಚೆಯ ಪರಿಣಾಮವಾಗಿ ಕೆಳಗಿನ ಗೊತ್ತುವಳಿಗಳನ್ನು ಸ್ವೀಕರಿಸಲಾಯಿತು.

(೧) ಏಳು ವರುಷಗಳ ಅವಧಿಯ ಪ್ರಾಥಮಿಕ ಶಿಕ್ಷಣವು ಪುಕ್ಕಟೆಯಾಗಿಯೂ, ಕಡ್ಡಾಯವಾಗಿಯೂ, ಸಾರ್ವತ್ರಿಕವಾಗಿಯೂ ಕೊಡಲ್ಪಡಬೇಕು.

(೨) ಮಾತೃ ಭಾಷೆಯು ಶಿಕ್ಷಣದ ಮಾಧ್ಯಮವಾಗಬೇಕು.

(೩) ಶಿಕ್ಷಣವು ಉತ್ಪಾದಕ ಉದ್ಯಮವನ್ನು ಕೇಂದ್ರವಾಗಿಟ್ಟು ಕೊಂಡು ಸಾಗಬೇಕು. ಆರಿಸಿದ ಕೈಗಾರಿಕೆಯ ಮುಖಾಂತರವೇ ಮಗುವನ್ನು ಇಡಿಯಾಗಿ ತರಬೇತುಗೊಳಿಸಬೇಕು. ಈ ಕ್ರಿಯೆಯಲ್ಲಿ ಅವನ ವಾತಾವರಣವನ್ನೂ ಅನುಲಕ್ಷಿಸಬೇಕು.

(೪) ಈ ಶಿಕ್ಷಣ ಪದ್ಧತಿಯಿಂದ ಶಿಕ್ಷಕರ ಸಂಬಳದಷ್ಟು ಉತ್ಪತ್ತಿಯು ಕ್ರಮೇಣ ಹೊರಡಬಹುದು.

**ಸಮಿತಿ:**

ನಂತರ ಒಂದು ಸಮಿತಿಯು ನಿರ್ಮಾಣವಾಯಿತು. ಡಾ| ಝಾಕೀರ ಹುಸೇನರು ಅದರ ಅಧ್ಯಕ್ಷರಾಗಿದ್ದರು. ಆದರಿಂದ ಅದು ಝಾಕೀರ ಹುಸೇನ ಸಮಿತಿಯೆಂದು ಹೆಸರಾಯಿತು. ಮೇಲಿನ ಗೊತ್ತುವಳಿಗಳಿಗೆ ಅನುಗುಣವಾಗುವಂತೆ ಅಭ್ಯಾಸ ಪತ್ರಿಕೆಯನ್ನು ನಿರ್ಮಿಸುವದೇ ಈ ಸಮಿತಿಯ ಮುಖ್ಯ ಕಾರ್ಯವಾಗಿತ್ತು. ಕೆಳಗೆ ಕಾಣಿಸಿದ ಮಹನೀಯರು ಈ ಸಮಿತಿಯ ಸದಸ್ಯರಾಗಿ ಕೆಲಸ ಮಾಡಿದರು:—

ಡಾ| ಝಾಕೀರ ಹುಸೇನ (ಚೇರಮನ್)
ಪ್ರೊ. ಕೆ. ಟಿ. ಶಹಾ
ಜನಾಬ. ಕೆ. ಜಿ. ಸೈಯ್ಯದೈನ

ಆಚಾರ್ಯ ಕಾಕಾ ಕಾಲೇಲಕರ
ಶ್ರೀ ಕಿಶೋರಲಾಲ ಮಶ್ರುವಾಲಾ
ಶ್ರೀ ಜೆ. ಸಿ. ಕುಮಾರಪ್ಪಾ
ಶ್ರೀ ಕೃಷ್ಣದಾಸ ಜಾಜು
ಆಚಾರ್ಯ ವಿನೋಬಾ
ಶ್ರೀಮತಿ ಆಶಾದೇವಿ
ಶ್ರೀ ಆರ್ಯನಾಯಕಂ ( ಸಂಯೋಜಕ.)

೧೯೩೭ನೇ ಅಕ್ಟೋಬರ ೨೩ನೇ ತಾರೀಖಿನ ದಿನ ಈ ಸಮಿತಿಯು ಸ್ಥಾಪಿತವಾಯಿತು. ಅದರ ಮರುದಿನ ಸದಸ್ಯರು ಸೇರಿ ಗಾಂಧೀಜಿಯುವರೊಡನೆ ಚರ್ಚೆ ನಡೆಸಿದರು. ನಂತರ ವರ್ಧಾವಲ್ಲಿ ನವ್ಹೆಂಬರ ಎರಡನೇ ಮೂರನೇ ತಾರೀಖುಗಳಲ್ಲಿ ಪುನಃ ಸದಸ್ಯರು ಸೇರಿ, ವಿಚಾರವಿನಿಮಯ ಮಾಡಿದರು. ಕೊನೆಗೆ ಅದೇ ತಿಂಗಳ ೨೨-೨೩-೨೪ ಈ ತಾರೀಖುಗಳಲ್ಲಿ ಮತ್ತೆ ಕರಡು ವರದಿಯನ್ನು ತಯಾರಿಸಿದರು. ಈ ವರದಿಯನ್ನು ೨-೧೨-೧೯೩೭ನೇ ದಿನ ಮಹಾತ್ಮಾ ಗಾಂಧಿಯವರಿಗೆ ಒಪ್ಪಿಸಲಾಯಿತು. ಅದನ್ನು ತಯಾರಿಸುವಾಗ ಸದಸ್ಯರು ತಮ್ಮೆದುರು ಯಾವ ಉದ್ದೇಶಗಳನ್ನು ಇಟ್ಟುಕೊಂಡಿದ್ದಾರೆಂಬುದನ್ನೂ, ಯಾವ ಯಾವ ವಿಷಯಗಳಿಗೆ ಪ್ರಾಶಸ್ತ್ಯ ಕೊಡಲಾಗಿದೆಂಬುದನ್ನೂ ವರದಿಯಲ್ಲಿ ಸ್ಪಷ್ಟ ಮಾಡಲಾಗಿದೆ. ಅಲ್ಲದೆ, ಈಗ ತಯಾರಾದ ಅಭ್ಯಾಸ ಪತ್ರಿಕೆಯ ಪ್ರಯೋಗವಾಗಿ, ಅನುಭವಕ್ಕೆ ಹೊಳೆದ ಸೂಚನೆಗಳನ್ನು ಅದರಲ್ಲಿ ಸೇರಿಸಿಕೊಳ್ಳಲು ಆಗಾಗ ಅದರ ಪುನರ್ವಿಮರ್ಶೆಯಾಗಬೇಕೆಂದೂ ಕೋರಲಾಗಿದೆ.

**ಕಾಂಗ್ರೆಸಿನ ಮುದ್ರೆ:**

೧೯೩೮ನೇ ಫೆಬ್ರುವರಿ ತಿಂಗಳಲ್ಲಿ ಈ ಸಮಿತಿಯುವರು ತಮ್ಮ ವರದಿಯನ್ನು ಗಾಂಧೀಜಿಯವರಿಗೆ ಒಪ್ಪಿಸಿದರು. ಅದಕ್ಕೆ ಅವರು ಒಪ್ಪಿಗೆ ಕೊಟ್ಟು, ಅದನ್ನು ಕಾಂಗ್ರೆಸ್ಸಿನ ಕಾರ್ಯಕಾರೀ ಮಂಡಲದ ಮುಂದೆ ಇರಿಸಿದರು. ೧೯೩೮ ನೇ ಮಾರ್ಚ ತಿಂಗಳಲ್ಲಿ ಸೇರಿದ ಹರಿಪುರ ಅಧಿವೇಶನದಲ್ಲಿ ವರ್ಧಾ ಶಿಕ್ಷಣದ ಯೋಜನೆಯು ರಾಷ್ಟ್ರೀಯ ಶಿಕ್ಷಣದ ಕಾರ್ಯಕ್ರಮವೆಂದು ಕಾಂಗ್ರೆಸ್ಸು ಮುದ್ರೆ ಹಾಕಿತು. ವರ್ಧಾ ಸಮ್ಮೇಲನದಲ್ಲಿ ಸಾಸಾದ

ಮೊದಲಿನ ಮೂರು ಗೊತ್ತುವಳಿಗಳನ್ನು ಕಾಂಗ್ರೆಸ್ಸು ಅಪ್ಪಿಕೊಂಡಿತು. ಅಲ್ಲದೆ, ಮೂಲ ಶಿಕ್ಷಣ ಸಂಘಟನೆಗಾಗಿ ಅಖಿಲ ಭಾರತ ಶಿಕ್ಷಣ ಸಂಸ್ಥೆಯೊಂದನ್ನು ನಿರ್ಮಿಸಲು ಕಾಂಗ್ರೆಸ್ಸು ಅಭಿಪ್ರಾಯ ಕೊಟ್ಟಿತು. ಡಾ|| ಝುಕೀರ ಹುಸೇನ, ಶ್ರೀ ಆರ್ಯನಾಯಕಂ ಇವರು ಗಾಂಧಿಜಿಯವರ ಸಲಹೆ ಕೋರಿ ಅಂತಹ ಸಂಸ್ಥೆಯನ್ನು ರಚಿಸಲು ಕೂಡಲೇ ಕಾರ್ಯ ಕೈಕೊಳ್ಳಬೇಕೆಂದೂ ಕಾಂಗ್ರೆಸ್ಸು ಅಪ್ಪಣೆ ಕೊಟ್ಟಿತು.

## ಹಿಂದುಸ್ತಾನಿ ತಾಲೀಮಿ ಸಂಘ:

ಕಾಂಗ್ರೆಸ್ಸಿನ ನಿರ್ಣಯದ ಮೇರೆಗೆ ಅಖಿಲ ಭಾರತ ಶಿಕ್ಷಣ ಸಂಸ್ಥೆಯನ್ನು ೧೯೩೮ ನೇ ಎಪ್ರೀಲ ತಿಂಗಳಲ್ಲಿ ಸ್ಥಾಪಿಸಲಾಯಿತು. ಅದಕ್ಕೆ ಹಿಂದುಸ್ತಾನಿ ತಾಲೀಮಿ ಸಂಘ ಎಂದು ಹೆಸರು ಕೊಡಲಾಯಿತು. ಅದರ ಮುಖ್ಯ ಕಚೇರಿಯು ಸೇವಾಗ್ರಾಮದಲ್ಲಿ ಇರಬೇಕೆಂದು ಗೊತ್ತಾಯಿತು. ಶ್ರೀ ಆರ್ಯನಾಯಕಂ ಇವರು ಆ ಸಂಸ್ಥೆಯ ಮುಖ್ಯ ಕಾರ್ಯದರ್ಶಿಗಳು. ಶ್ರೀಮತಿ ಆಶಾದೇವಿ ಹಾಗೂ ಶ್ರೀರಾಮಚಂದ್ರನ್ ಅವರು ಉಪಕಾರ್ಯದರ್ಶಿಗಳು ಆಗಿ ಈಗಲೂ ಕಾರ್ಯ ಮಾಡುತ್ತಿದ್ದಾರೆ. ಮೂಲ ಶಿಕ್ಷಣ ಯೋಜನೆಯನ್ನು ಸಾರ್ವತ್ರಿಕವಾಗಿ ಅಮಲಿನಲ್ಲಿ ತರುವದು ಮೂಲ ಉದ್ದಿಶ್ಯವಾಗಿದ್ದರೂ, ಏಳು ಲಕ್ಷ ಹಳ್ಳಿಗಳಲ್ಲಿ ಒಮ್ಮೆಲೆ ಈ ಯೋಜನೆಯನ್ನು ಅಮಲಿನಲ್ಲಿ ತರುವದು ಸಾಧ್ಯವೂ, ಸೂಕ್ತವೂ ಅಲ್ಲವೆಂದು ಬಗೆದು ಕೆಲವು ಪ್ರಾಯೋಗಿಕ ಕ್ಷೇತ್ರಗಳನ್ನು ಆರಿಸಲಾಯಿತು. ಕೆಲವು ಪ್ರಾಂತಗಳ ವಿದ್ಯಾಖಾತೆಯವರೂ, ಖಾಸಗಿ ಸಂಸ್ಥೆಯವರೂ, ಪ್ರಯೋಗ ಮಾಡಲು ಉಪಕ್ರಮಿಸಿದರು. ಕಾಂಗ್ರೆಸ ಪ್ರಾಂತಗಳ ಶಿಕ್ಷಣ ಮಂತ್ರಿಗಳು ವರ್ಧಾ ಶಿಕ್ಷಣ ಸಮ್ಮೇಲನದಲ್ಲಿ ಭಾಗವಹಿಸಿದ್ದರು; ಅಲ್ಲದೆ, ಅಲ್ಲಿಯ ಗೊತ್ತುವಳಿಗಳನ್ನು ಸ್ವೀಕರಿಸಲು ಅವರೂ ಕಾರಣರಾಗಿದ್ದರು. ಆದ್ದರಿಂದ ಹಿಂದುಸ್ತಾನಿ ತಾಲೀಮಿ ಸಂಘದವರು ಮೊದಲು ಅವರಿಗೆ ಕೇಳಿಕೊಂಡರು. ಮೊದಲನೆಯ ವರುಷ ಕೆಲಸವು ಭರದಿಂದ ಸಾಗಿತು. ಈ ಯೋಜನೆಯನ್ನು ಪ್ರಯೋಗ ಮಾಡಲು ಕೆಲಸಗಾರರನ್ನು ತರಬೇತುಗೊಳಿಸಲು ಅಗತ್ಯವೆನಿಸಿತು.

**ಕೆಲಸಗಾರರ ತರಬೇತು:**

೧೯೩೮ ನೇ ಎಪ್ರಿಲ ತಿಂಗಳಲ್ಲಿ ಶಿಕ್ಷಕರನ್ನು ತರಬೇತುಗೊಳಿಸುವ ದಕ್ಕಾಗಿ ವರ್ಧಾದಲ್ಲಿ ವಿದ್ಯಾಮಂಧಿರ ಟ್ರೇನಿಂಗ ಸ್ಕೂಲ ತೆರೆಯಲಾಯಿತು. ಮೂರು ವಾರಗಳ ವರೆಗೆ ಹಿಂದುಸ್ತಾನದ ಬೇರೆ ಬೇರೆ ಭಾಗಗಳಿಂದ ಬಂದ ಶಿಕ್ಷಕರನ್ನು ತರಬೇತುಗೊಳಿಸಲಾಯಿತು. ಮಧ್ಯಪ್ರಾಂತ, ಸಂಯುಕ್ತ ಪ್ರಾಂತ, ಬಿಹಾರ, ಮುಂಬಯಿ ಪ್ರಾಂತಗಳಲ್ಲಿಯೂ ಕಾಶ್ಮೀರ ಸಂಸ್ಥಾನ ದಲ್ಲಿಯೂ ಪ್ರಯೋಗ ಆರಂಭವಾಯಿತು. ವಿಶೇಷ ಅಧಿಕಾರಿಗಳೂ ನೇಮಿ ಸಲ್ಪಟ್ಟರು. ಪ್ರಾಂತಗಳಲ್ಲಿ ಮೂಲ ಶಿಕ್ಷಣ ಸಮಿತಿಗಳೂ ಸ್ಥಾಪಿತವಾ ದುವು. ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳೂ ಈ ಕಾರ್ಯಕ್ಕೈಕೊಂಡವು. ದಿಲ್ಲಿಯ ಜಾಮಿಯಾ ಮಿಲಿಯಾ ಇಸ್ಲಾಮಿಯಾ, ಮಚ್ಛಲೀ ಪಟ್ಟಣದಲ್ಲಿ ಆಂಧ್ರ ಜಾತೀಯ ಕಲಾ ಶಾಲಾ, ಪುಣೆಯಲ್ಲಿ ಟಿಳಕ ಮಹಾರಾಷ್ಟ್ರ ವಿದ್ಯಾಪೀಠ, ಅಹಮ್ಮದಾಬಾದದಲ್ಲಿ ಗುಜರಾಥ ವಿದ್ಯಾಪೀಠ ಮುಂತಾದ ಸಂಸ್ಥೆಗಳು ಮೂಲ ಶಿಕ್ಷಣ ಪ್ರಯೋಗ ನಡೆಸಿದವು. ಓಡಿಸಾ ಪ್ರಾಂತದವರು ರಾಮ ಚಂದ್ರಪುರದಲ್ಲಿಯೂ, ಮದ್ರಾಸ ಪ್ರಾಂತದವರು ಕೋಯಿಮತ್ತೂರ ದಲ್ಲಿಯೂ ಟ್ರೇನಿಂಗ ಸ್ಕೂಲುಗಳನ್ನು ತೆರೆದರು. ಮುಂಬಯಿ ಪ್ರಾಂತ ದಲ್ಲಿ ಮಹಾರಾಷ್ಟ್ರದಲ್ಲಿ ಲೋಣಿ, ಗುಜರಾಥದಲ್ಲಿ ಕಾತರಗಾಂವ, ಕರ್ನಾ ಟಕದಲ್ಲಿ ಧಾರವಾಡ ಮತ್ತು ಖಾನದೇಶದಲ್ಲಿ ಜಲಗಾಂವ (ಉರ್ದು) ಈ ಸ್ಥಳಗಳಲ್ಲಿ ಟ್ರೇನಿಂಗ ಸ್ಕೂಲುಗಳು ಸುರುವಾದವು. ಈ ಟ್ರೇನಿಂಗ ಸಂಸ್ಥೆ ಗಳಲ್ಲಿ ತಯಾರಾದ ಶಿಕ್ಷಕರ ಕೆಲಸಗಳು ಸುರುವಾದವು. ಈ ಟ್ರೇನಿಂಗ ಸಂಸ್ಥೆ ಗಳಲ್ಲಿ ತಯಾರಾದ ಶಿಕ್ಷಕರು ಕೆಲಸ ಮಾಡಲು ಪ್ರಾಯೋಗಿಕ ಕ್ಷೇತ್ರ ಗಳನ್ನು ಆರಿಸಲಾಯಿತು. ಅಲ್ಲಿಯ ಶಾಲೆಗಳು ಮೂಲ ಶಿಕ್ಷಣ ಶಾಲೆಗ ಳೆಂದು ಬದಲಾದವು. ಸಂಯುಕ್ತ ಪ್ರಾಂತದವರು ಅಲ್ಪಾವಧಿ ತರಬೇತಿ ವರ್ಗಗಳನ್ನು ತೆರೆದು ಅನೇಕ ಶಿಕ್ಷಕರನ್ನು ತಯಾರ ಮಾಡತೊಡಗಿದರು. ಕೇಂದ್ರ ಶಿಕ್ಷಣ ಸಲಹೆ ಸಂಸ್ಥೆಯು (Central Advisory Board of Education) ಮುಂಬಯಿ ಪ್ರಾಂತದ ಮುಖ್ಯ ಮಂತ್ರಿಗಳೂ ಶಿಕ್ಷಣ ಮಂತ್ರಿಗಳೂ ಆದ ಮಾನ್ಯ ಖೇರ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ಯನ್ನು ನೇಮಿಸಿತು. ವೃತ್ತಿ ಶಿಕ್ಷಣದ ಬಗೆಗೆ ತಯಾರಿಸಿದ ಆಬಟ್‌ವುಡ್ ವರದಿಯನ್ನೂ, ವರ್ಧಾ ಶಿಕ್ಷಣ ಯೋಜನೆಯನ್ನೂ ಪರಿಶೀಲಿಸಿ ಶೈಕ್ಷಣಿಕ

ಪುನರ್ರಚನಾ ಕಾರ್ಯಕ್ಕೆ ಸೂಕ್ತ ಸಲಹೆಗಳನ್ನು ಕೊಡುವವೇ ಈ ಸಮಿತಿಯ ಮುಖ್ಯ ಉದ್ದೇಶವಾಗಿತ್ತು. ಬೇರೆ ಬೇರೆ ಪ್ರಾಂತಗಳಲ್ಲಿಯೂ ಶಿಕ್ಷಣ ಪುನರ್ರಚನಾ ಸಮಿತಿಗಳು ಏರ್ಪಟ್ಟು, ಅವುಗಳ ವರದಿಗಳೂ ಹೊರಬಿದ್ದವು. ಸ್ಥಾನಿಕ ಪರಿಸ್ಥಿತಿಗೆ ಹೊಂದಿಕೆಯಾಗುವಂತೆ ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡು, ವರ್ಧಾ ರಾಷ್ಟ್ರೀಯ ಶಿಕ್ಷಣ ಯೋಜನೆಯ ಮೂಲ ತತ್ತ್ವಗಳನ್ನು ಒಪ್ಪಿದ್ದು ಸ್ಪಷ್ಟವಾಯಿತು.

**ಪೂನಾ ಸಮ್ಮೇಲನ:**

ಇಷ್ಟರಲ್ಲಿ ಮೂಲ ಶಿಕ್ಷಣ ಕಾರ್ಯಕ್ಷೇತ್ರದಲ್ಲಿ ದುಡಿಯುತ್ತಿದ್ದವ ರೆಲ್ಲರು ಒಂದೆಡೆ ಸೇರಿ, ತಮ್ಮ ಅನುಭವಗಳನ್ನು ತೂಗಿ, ಹೊಸ ದಾರಿಯಿಂದ ಸಾಗುವದು ಅಗತ್ಯವೆನಿಸಿತು. ಅದರಿಂದ ಮುಂಬಯಿ ಸರಕಾರವು ೧೯೩೯ನೇ ಅಕ್ಟೋಬರ ತಿಂಗಳಲ್ಲಿ ಪುಣೆಯಲ್ಲಿ ಸಮ್ಮೇಲನ ಕರೆಯುವ ಕಾರ್ಯವನ್ನು ಕೈಕೊಂಡಿತು. ಕಾಶ್ಮೀರ ಸಂಸ್ಥಾನದಲ್ಲಿ ಶಿಕ್ಷಣದ ಡಾಯರೆಕ್ಟರರಾಗಿದ್ದ ಜನಾಬ ಕೆ. ಜಿ. ಸೈಯುದೈನ ಅವರು ಈ ಸಮ್ಮೇಲನದ ಅಧ್ಯಕ್ಷರಾಗಿದ್ದರು. ಅಖಂಡ ಹಿಂದುಸ್ತಾನದ ಶಿಕ್ಷಣ-ತಜ್ಞರು ಅಲ್ಲಿ ಸೇರಿದ್ದರು. ಮೂಲ ಶಿಕ್ಷಣದ ಪ್ರಯೋಗಗಳ ಬಗೆಗೆ ಮೂರು ದಿನಗಳ ವರೆಗೆ ಚರ್ಚೆ ನಡೆದು ಕೆಳಗಿನ ತೀರ್ಮಾನುಗಳನ್ನು ಅಂಗೀಕರಿಸಲಾಯಿತು.

೧. ಏಳು ವರುಷಗಳ ಪ್ರಾಥಮಿಕ ಶಿಕಕ್ಷಣವು ಮಾತೃಭಾಷೆಯ ಮುಖಾಂತರವೇ ಸಾಗಬೇಕು. ಈ ಅವಧಿಯಲ್ಲಿ ಆಂಗ್ಲ ಭಾಷೆಗೆ ಏನೂ ಸ್ಥಾನವಿರಕೂಡದು.

೨. ದೇಶದ ಸದ್ಯದ ಶಿಕ್ಷಣದಲ್ಲಿ ಕ್ರಾಂತಿಯುಂಟಾಗುವದೆಂದು ಮೂಲ ಶಿಕ್ಷಣ ಪ್ರಯೋಗಗಳು ತೋರಿಸಿವೆ.

೩. ಏಳು ವರುಷಗಳ ವರೆಗೆ ಮೂಲ ಶಿಕ್ಷಣವನ್ನು ಪುಕ್ಕಟೆಯಾಗಿಯೂ, ಸಾರ್ವತ್ರಿಕವಾಗಿಯೂ, ಕಡ್ಡಾಯವಾಗಿಯೂ ಕೊಡುವಾಗ, ಇದು ರಾಷ್ಟ್ರೀಯ ಪುನರ್ರಚನೆಯ ಮಹತ್ವದ ಚಟವಟಿಕೆಯೆಂದು ತಿಳಿದು, ಕೇಂದ್ರ ಸರಕಾರವು ತನ್ನ ಪಾಲಿನ ಖರ್ಚನ್ನು ಕೊಡಬೇಕು.

೪. ಟ್ರೇನಿಂಗ ಸಂಸ್ಥೆಗಳಲ್ಲಿ ಶಿಕ್ಷಕರ ತರಬೇತಿ ವರ್ಗವು ಕನಿಷ್ಠ ಒಂದು ವರುಷ ಇರಬೇಕು.

೫. ಹಳ್ಳಿಯ ಜೀವನದ ಸಮಸ್ಯೆಗಳನ್ನು ಸಹಾನುಭೂತಿಪರವಾಗಿ ತಿಳಿದು, ಯೋಗ್ಯ ಪರಿಹಾರ ಕೈಕೊಳ್ಳುವಂತೆ ಶಿಕ್ಷಕರ ಮನಸ್ಸು ತರಬೇತು ಗೊಳಿಸಬೇಕು.

೬. ಕೆಲವು ಪ್ರಾಯೋಗಿಕ ಶಾಲೆಗಳನ್ನು ನಿರ್ದಿಷ್ಟಗೊಳಿಸಿ, ಮೂಲ ಶಿಕ್ಷಣ ಸಾಗಿಸಬೇಕು. ಅಲ್ಲಿಯ ಪ್ರಯೋಗದ ಲಾಭವು ಉಳಿದ ಸಾಲೆ ಗಳಿಗೆ ದೊರೆಯುವಂತಾಗಬೇಕು.

೭. ಹಳ್ಳಿ ಹಾಗು ನಗರಗಳ ಶಿಕ್ಷಕರು ಒಂದೇ ತರದ ಟ್ರೇನಿಂಗ ಸಂಸ್ಥೆಗಳಲ್ಲಿ ತರಬೇತು ಹೊಂದಬೇಕು; ಎಂದರೆ ಎಲ್ಲರಲ್ಲಿಯೂ ರಾಷ್ಟ್ರೀಯ ಮನೋವೃತ್ತಿಯು ಬೆಳೆಯಬೇಕು.

೮. ಮೂಲ ಉದ್ಯೋಗಕ್ಕೆ ಸಹಾಯಕವಾಗುವಂತೆ ಚಿತ್ರಕಲೆಗೆ ತಕ್ಕ ಸ್ಥಾನ ಕೊಡಬೇಕು.

೯. ಶಿಕ್ಷಕರನ್ನು ತರಬೇತುಗೊಳಿಸುವ ಪದ್ಧತಿಯು ಅನುಭವದ ಫಲ ವಾಗಿ ಹೊರಬೀಳಬೇಕು.

೧೦. ಈಗಿನ ಎರಡು ವರುಷಗಳ ಅನುಭವದಿಂದ ಅನುಬಂಧ ಪದ್ಧತಿಯು ಉಪಯುಕ್ತವೂ, ಶೈಕ್ಷಣಿಕ ದೃಷ್ಟಿಯಿಂದ ಸೂಕ್ತವೂ ಆಗಿದೆ ಎಂದು ಕಂಡುಬಂದಿದೆ.

೧೧. ಅನುಬಂಧವು ಸ್ವಾಭಾವಿಕವಾಗಿರಬೇಕು. ಮೂಲ ಉದ್ಯೋಗ, ಮಗುವಿನ ನೈಸರ್ಗಿಕ ಹಾಗು ಸಾಮಾಜಿಕ ವಾತಾವರಣಗಳಿಗೆ ಮಗುವಿನ ಮೂಲ ಜ್ಞಾನವು ಸಂಬಂಧಿತವಾಗಿರಬೇಕು.

೧೨. ಸ್ಥಾನಿಕ ಪರಿಸ್ಥಿತಿಗಳನ್ನು ಅನುಸರಿಸಿ ಮೂಲ ಉದ್ಯೋಗ ವನ್ನು ನಿರ್ದಿಷ್ಟಗೊಳಿಸಬೇಕು.

೧೩. ಮಕ್ಕಳ ಕೈಗಾರಿಕೆಯ ಉತ್ಪತ್ತಿಯನ್ನು ಸಾಲೆಯ ಹಾಗು ಸ್ಥಾನಿಕ ಬೇಡಿಕೆಗಳನ್ನು ನೋಡಿ ಸರಕಾರವು ಹಂಚುವ ವ್ಯವಸ್ಥೆ ಮಾಡ ಬೇಕು.

೧೪. ಮೂಲ ಶಿಕ್ಷಣ ಸಾಲೆಗಳಿಗಾಗಿ ಒಬ್ಬ ಮೇಲ್ವಿಚಾರಕ ಇರಬೇಕು. ಅವರು ಟ್ರೇನಿಂಗ ಸಂಸ್ಥೆಗೆ ಸಂಬಂಧವಿಟ್ಟುಕೊಳ್ಳಬೇಕು. ಟ್ರೇನಿಂಗ ಸಂಸ್ಥೆಯು ಸಂಶೋಧನೆಯ ಕೇಂದ್ರವಾಗಬೇಕು.

ಯುದ್ಧದ ಕಾರ್ಮೋಡಗಳು ಕವಿದಾಗ ಈ ಸಮ್ಮೇಲನವನ್ನು ಪುಣೆಯಲ್ಲಿ ಕರೆಯಲಾಗಿತ್ತು. ಜಗತ್ತು ವಿನಾಶದತ್ತ ಸಾಗಿದಾಗ ಹಿಂದುಸ್ತಾನವು ಎಳೆಯ ಮಕ್ಕಳ ಶಿಕ್ಷಣದಂಥ ಸಣ್ಣ ಸಮಸ್ಯೆಯಲ್ಲಿ ತೊಡಗಿತ್ತೆಂಬುದು ವಿಚಿತ್ರವೆನಿಸಬಹುದು. ಆದರೆ ಈ ಧೋರಣವು ಮೂಲ್ಯಗಳ ವಿಪರ್ಯಾಸವನ್ನು ಚಿತ್ರಿಸುವದೆಂದು ಸಭಾಪತಿಗಳು ನೆನಪಿಗೆ ತಂದುಕೊಟ್ಟು, ಹೊಸ ಶಿಕ್ಷಣದ ಸಂದೇಶವನ್ನು ಸ್ವಾರಸ್ಯವಾಗಿ ತಿಳಿಹೇಳಿದರು. ಕಾಂಗ್ರೆಸ್ಸು ಅಧಿಕಾರ ಕಳೆದುಕೊಂಡಲ್ಲಿ ಈ ಯೋಜನೆಯ ಗತಿಯೇನು ಎಂದು ಕೇಳಲಾಗಿ, ತನ್ನ ಆಂತರಿಕ ಪ್ರತಿಭೆಯ ಮೂಲಕ ಅದು ಅರಳುವದೆಂದು ಅವರು ಉತ್ತರಿಸಿದರು.

೧೯೩೯–೪೦ನೇ ಸಾಲಿನಲ್ಲಿ ಕಾಂಗ್ರೆಸ ಮಂತ್ರಿಗಳು ರಾಜೀನಾಮೆ ಕೊಟ್ಟರು. ಆದಾಗ್ಯೂ ಮೂಲ ಶಿಕ್ಷಣ ಪ್ರಯೋಗವು ಎಲ್ಲೆಡೆಗೆ ನಿಲ್ಲಲಿಲ್ಲ. ಮದ್ರಾಸ ಪ್ರಾಂತದಲ್ಲಿ ಮಾತ್ರ ಪ್ರಯೋಗವು ಬಂದಾಯಿತು. ೧೯೪೦–೪೧ನೇ ಸಾಲು ಮೂಲ ಶಿಕ್ಷಣದ ಮೂರನೆಯ ವರುಷ. ಯೋಜನೆಗೆ ಪೋಷಣೆ ದೊರೆಯಲಿಲ್ಲ. ೧೯೪೧ನೇ ಎಪ್ರಿಲ ತಿಂಗಳಲ್ಲಿ ವರ್ಧಾದಲ್ಲಿಯ ವಿದ್ಯಾಮಂದಿರ ಟ್ರೇನಿಂಗ ಸಂಸ್ಥೆಯು ಮುಚ್ಚಲಾಯಿತು. ಮಧ್ಯಪ್ರಾಂತದಲ್ಲಿ ಎಲ್ಲ ನಾರ್ಮಲ್ ಸ್ಕೂಲುಗಳನ್ನು ಬೇಸಿಕ್ ಟ್ರೇನಿಂಗ ಸಂಸ್ಥೆಗಳೆಂದು ಪರಿವರ್ತಿಸುವ ಯೋಜನೆಯು ಅಲ್ಲಿಯೇ ನಿಂತಿತು. ಎರಡು ಪ್ರಾಯೋಗಿಕ ಕ್ಷೇತ್ರಗಳಲ್ಲಿ ಕಾರ್ಯ ಸಾಗಿತು. ಮುಂಬಯಿ ಪ್ರಾಂತದಲ್ಲಿ ಮೂರು ಟ್ರೇನಿಂಗ ಸಂಸ್ಥೆಗಳೂ, ೫೮ ಶಾಲೆಗಳೂ ಕಾರ್ಯ ಮುಂದುವರಿಸಿದವು. ಬಿಹಾರ ಪ್ರಾಂತದಲ್ಲಿ ಒಂದು ಟ್ರೇನಿಂಗ ಸ್ಕೂಲು (ಪಾಟಣಾದಲ್ಲಿ) ಮತ್ತು ಚಂಪಾರಣ್ಯ ಜಿಲ್ಹೆಯ ಪ್ರಾಯೋಗಿಕ ಕ್ಷೇತ್ರದಲ್ಲಿ ೨೭ ಶಾಲೆಗಳೂ ಕೆಲಸ ನಡೆಸಿದವು. ಓಡಿಸಾ ಪ್ರಾಂತದಲ್ಲಿ ಖಾಸಗಿ ಸಂಸ್ಥೆಯೂ ಪ್ರಯೋಗ ರಂಗಕ್ಕಿಳಿಯಿತು. ಆದರೆ ೧೯೪೧ನೇ ಮಾರ್ಚ ತಿಂಗಳಲ್ಲಿ ಸರಕಾರದ ಟ್ರೇನಿಂಗ ಸ್ಕೂಲು ಮತ್ತು ಮೂಲ ಶಿಕ್ಷಣ ಶಾಲೆಗಳೂ ಮುಚ್ಚಲ್ಪಟ್ಟವು. ಉತ್ಕಲ ಮೌಲಿಕ ಶಿಕ್ಷಾ ಪರಿಷದ್ ಎಂಬ ಖಾಸಗಿ ಸಂಸ್ಥೆಯು ಹುಟ್ಟಿತು.

ಸರಕಾರದ ಕೆಲ ನೌಕರರು ರಾಜೀನಾಮೆ ಕೊಟ್ಟು, ರಾಷ್ಟ್ರೀಯ ಮೂಲ ಶಿಕ್ಷಣ ಪ್ರಯೋಗ ನಡೆಸಿದರು. ಏಳು ಶಾಲೆಗಳಲ್ಲಿ ಕೆಲಸ ಸಾಗಿತು.

**ಜಾಮಿಯಾ ನಗರ ಸಮ್ಮೇಲನ:**

೧೯೪೧ನೇ ಎಪ್ರಿಲ ತಿಂಗಳಲ್ಲಿ ದಿಲ್ಲಿಯ ಜಾಮಿಯಾ ಮಿಲಿಯಾ ಇಸ್ಲಾಮಿಯಾ ಸಂಸ್ಥೆಯವರು ಜಾಮಿಯಾ ನಗರದಲ್ಲಿ ಮೂಲ ಶಿಕ್ಷಣದ ೨ ನೇ ಸಮ್ಮೇಲನವನ್ನು ಕರೆದರು. ಮುಂಬಯಿ ಬಿಹಾರ, ಸಂಯುಕ್ತ ಪ್ರಾಂತಗಳ ಹಾಗೂ ಕಾಶ್ಮೀರ ಸಂಸ್ಥಾನದ ಪ್ರತಿನಿಧಿಗಳು, ಮೂಲ ಶಿಕ್ಷಣ ಕೆಲಸವನ್ನು ಖಾಸಗಿ ಸಂಸ್ಥೆಯಲ್ಲಿ ನಡೆಸಿದ್ದ ಕೆಲಸಗಾರರು ಅಲ್ಲಿಗೆ ಬಂದಿದ್ದರು; ಡಾ|| ರಾಜೇಂದ್ರ ಪ್ರಸಾದರು ಈ ಸಮ್ಮೇಲನದ ಉದ್ಘಾಟನೆ ಮಾಡಿದರು. ಮತ್ತು ಡಾ|| ಝಾಕೀರ ಹುಸೇನರು ಅಧ್ಯಕ್ಷತೆ ವಹಿಸಿದ್ದರು. ಗಾಂಧೀಜಿಯವರ ಸಂದೇಶವು ಅಲ್ಲಿಯ ಕಾರ್ಯಕ್ರಮದ ಮಾರ್ಗ ನಿರ್ದೇಶ ಮಾಡಿತು. ಮೂರು ದಿನಗಳ ವರೆಗೆ ಈ ಸಮ್ಮೇಲನವು ಸಾಗಿತು. ಮೂರು ವರುಷಗಳ ಕಾರ್ಯದ ವರದಿಗಳನ್ನು ವಿಮರ್ಶಿಸಲಾಯಿತು. ಮೂಲ ಶಿಕ್ಷಣ ಶಾಲೆಗಳ ಮಕ್ಕಳ ಆರೋಗ್ಯ, ನಡತೆ, ಬುದ್ಧಿಮತ್ತೆ ಇವಗಳಲ್ಲಿ ಯೋಗ್ಯ ಪ್ರಗತಿಯಾಗಿವೆಯೆಂದೂ ಶಿಕ್ಷಣ ತಜ್ಞರು ಮನಗಂಡರು.

೧೯೪೧-೪೨ನೇ ಸಾಲು ಮೂಲ ಶಿಕ್ಷಣದ ನಾಲ್ಕನೆಯ ವರುಷವು. ಕಾರ್ಯಕ್ಷೇತ್ರವೇನೂ ವಿಸ್ತಾರವಾಗಲಿಲ್ಲ. ಮುಂಬಯಿ, ಬಿಹಾರ, ಮಧ್ಯ ಪ್ರಾಂತ, ಸಂಯುಕ್ತ ಪ್ರಾಂತಗಳಲ್ಲಿಯೂ ಕಾಶ್ಮೀರ ಸಂಸ್ಥಾನದಲ್ಲಿಯೂ ಸರಕಾರದವರು ಯೋಚಿಸಿದಂತೆ ಪ್ರಯೋಗಗಳು ಸಾಗಿದವು. ಅಲ್ಲದೆ, ಜಾಮಿಯಾ ಮಿಲಿಯಾ ಇಸ್ಲಾಮಿಯಾ, ದಿಲ್ಲಿ ಮತ್ತು ಮಹಾರಾಷ್ಟ್ರ ವಿದ್ಯಾಪೀಠ, ಪುಣೆ ಈ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳೂ ಕಾರ್ಯ ಮುಂದುವರಿಸಿದವು. ಸೇವಾಗ್ರಾಮದಲ್ಲಿ ಒಂದು, ಓಡಿಸಾ ಪ್ರಾಂತದಲ್ಲಿ ಏಳು, ಹೀಗೆ ಎಂಟು ಮೂಲ ಶಿಕ್ಷಣ ಶಾಲೆಗಳನ್ನು ಹಿಂದುಸ್ಥಾನಿ ತಾಲೀಮಿ ಸಂಘದವರೇ ನಡೆಸಿದರು. ಆಗ ಬಿಹಾರದಲ್ಲಿ ೨೭ ಮೂಲ ಶಿಕ್ಷಣ ಶಾಲೆಗಳಿದ್ದವು. ಆಗ ಅಲ್ಲಿಯ ವಿದ್ಯಾರ್ಥಿಗಳ ಪ್ರಗತಿಯನ್ನು ಪರೀಕ್ಷಿಸುವ ಪ್ರಯತ್ನ ಮಾಡಲಾಯಿತು.

೧೯೪೨-೪೫ ಈ ಅವಧಿಯಲ್ಲಿ ಮೂಲ ಶಿಕ್ಷಣದ ಕಾರ್ಯಕ್ಷೇತ್ರ ಸಣ್ಣದಾಯಿತು. ಹಿಂದುಸ್ಥಾನಿ ತಾಲೀಮಿ ಸಂಘದ ಸದಸ್ಯರು ೨೧. ಅವರಲ್ಲಿ

೧೫ ಜನರು ಜೇಲಿನಲ್ಲಿದ್ದರು. ಓಡಿಸಾ ಪ್ರಾಂತದಲ್ಲಂತೂ ಆಗಸ್ಟ ೧೯೪೨ರಿಂದ ಮಾರ್ಚ ೧೯೪೪ರ ವರೆಗೆ ಶಾಲೆಗಳು ಬಂದಾದವು. ಆದಾಗ್ಯೂ ಉಳಿದೆಡೆ ಗಳಲ್ಲಿ ಪ್ರಯೋಗ ನಿಲ್ಲಲಿಲ್ಲ. ಸಭೆ ಸಮ್ಮೇಲನಗಳು ಜರುಗಲಿಲ್ಲ. ವಿಚಾರ ವಿನಿಮಯ ಮಾಡಲು ಕೆಲಸಗಾರರಿಗೆ ಅವಕಾಶ ಸಿಗಲಿಲ್ಲ.ಸಾಹಿತ್ಯ ನಿರ್ಮಾ ಣವಾಗಲಿಲ್ಲ. ಗಾಂಧೀಜಿಯವರೂ ಸೆರೆಮನೆಯಲ್ಲಿದ್ದಾಗ ರಾಷ್ಟ್ರೀಯ ಶಿಕ್ಷಣದ ಬಗೆಗೆ ವಿಚಾರಿಸುತ್ತಿದ್ದರು. ಆಗ ಅವರಿಗೆ ಹೊಸ ದೃಷ್ಟಿ ಹೊಳೆಯಿತು: ಅವ ರಿಂದ ನಯೀ ತಾಲೀಮ ಎಂಬ ಶಬ್ದವನ್ನು ಬಳಸ ತೊಡಗಿದರು. ಹೊರಗೆ ಬಂದ ಕೂಡಲೇ ಅವರು ತಮ್ಮ ದರ್ಶನದ ಸ್ವರೂಪವನ್ನು ಚಿತ್ರಿಸಿದರು.

"ನಮಗೆ ದೊರೆತ ಈಗಿನ ಯಶಸ್ಸಿನಿಂದ ಸಮಾಧಾನ ಹೊಂದ ಕೂಡದು. ಮಕ್ಕಳ ಮನೆಗಳಿಗೂ ನಾವು ಹೋಗಬೇಕು. ಪಾಲಕರಿಗೂ ಶಿಕ್ಷಣ ಕೊಡಬೇಕು. ಮೂಲಶಿಕ್ಷಣವು ಜೀವನ ಶಿಕ್ಷಣವಾಗಬೇಕು. ಮೂಲ ಶಿಕ್ಷಣದ ವ್ಯಾಪ್ತಿಯು ಬೆಳೆಯಬೇಕು. ಅದು ಜೀವನದ ಪ್ರತಿಯೊಂದು ಅವಸ್ಥೆಯಲ್ಲಿಯೂ ಪ್ರತಿಯೊಬ್ಬನಿಗೂ ದೊರೆಯುವಂತಾಗಬೇಕು. ಮೂಲ ಶಿಕ್ಷಣ ಶಾಲೆಯ ಶಿಕ್ಷಕನು ಸಾರ್ವಜನಿಕರ ಶಿಕ್ಷಕನೆಂದು ಭಾವಿಸಬೇಕು. ವೃದ್ಧನಿರಲಿ, ಬಾಲಕನಿರಲಿ, ಯಾರು ಭೆಟ್ಟಿಯಾದರೂ ಈಗ ನಾನು ಇವನಿಗೆ ಏನು ಸಹಾಯಮಾಡಲಿ ಎಂದು ಶಿಕ್ಷಕನು ಅನ್ನುತ್ತಿರಬೇಕು. ತಾನೊಬ್ಬ ಅಸ್ವಚ್ಛ, ಅಜ್ಞಾನ ಮನುಷ್ಯನನ್ನು ಕಾಣಬಹುದು. ಅವನ ಹಳ್ಳಿಯೇ ಅವ ನಿಗೆ ವಿಶ್ವ. ಅವನಿಗೆ ಸ್ವಚ್ಛತೆಯ ಬಗ್ಗೆ ತಿಳಿಹೇಳುವದು, ಅವನ ಅಜ್ಞಾನ ವನ್ನು ದೂರ ಮಾಡುವದು, ಅವನ ದೃಷ್ಟಿಯನ್ನು ವಿಕಸಿಸುವದು ನನ್ನ ಕರ್ತವ್ಯವು ನಾನು ಅವನ ಶಿಕ್ಷಕನಾಗಬೇಕೆಂದು ಅವನಿಗೆ ಹೇಳುವದಗತ್ಯ ವಿಲ್ಲ. ನಾನು ಅವನೊಡನೆ ನಿತ್ಯ ಸಂಬಂಧ ಬೆಳಿಸಬೇಕು, ಇವನ ವಿಶ್ವಾಸ ಗಳಿಸಬೇಕು, ಅವನು ನನ್ನ ಉಪದೇಶವನ್ನು ನಿರಾಕರಿಸಬಹುದು. ಆದರೆ ನಾನು ಸೋಲು ಒಪ್ಪುವದಿಲ್ಲ. ಅವನು ಗೆಳೆಯನಾಗುವವರೆಗೆ ಯತ್ನ ನಡೆ ಯಿಸುವೆ. ಒಮ್ಮೆ ಇಷ್ಟಾದ ಮೇಲೆ ಉಳಿದುದು ತಂತಾನೇ ಹಿಂಬಾಲಿಸುವದು. ಜನ್ಮದಾರಭ್ಯ ಮಕ್ಕಳ ಶಿಕ್ಷಣದ ಬಗ್ಗೆ ಲಕ್ಷ್ಯ ಹಾಕಬೇಕು. ಅದಕ್ಕಿಂತಲೂ ಮೊದಲು ಆರಂಭವಾಗಬೇಕೆಂದು ಒಂದಡಿ ಮುಂದಿಡಲು ಬಯಸುತ್ತೇನೆ."

**ಗಾಂಧೀಜಿ.**

**ಸೇವಾಗ್ರಾಮ ಸಮ್ಮೇಲನ:**

ಈ ಮಾತುಗಳನ್ನು ಕೇಳಿದೊಡನೆ ಜೇಲಿನಿಂದ ಹೊರಬಿದ್ದ ರಾಷ್ಟ್ರೀಯ ಶಿಕ್ಷಣದ ಕೆಲಸಗಾರರು ಮೂಲ ಶಿಕ್ಷಣ ಪ್ರಸಾರದ ಬಗೆಗೆ ಆಲೋಚಿಸ ತೊಡಗಿದರು. ೧೯೪೫ನೇ ಜನೇವರಿ ತಿಂಗಳಲ್ಲಿ ಸೇವಾಗ್ರಾಮದಲ್ಲಿ ರಾಷ್ಟ್ರೀಯ ಶಿಕ್ಷಣ ಕೆಲಸಗಾರರ ಸಮ್ಮೇಲನವು ಕೂಡಿತು. ಗಾಂಧೀಜಿಯ ವರು ಅವರ ಉದ್ಘಾಟನೆ ಮಾಡಿದರು. ಆಗ ಅವರು ಹೇಳಿದ್ದೇನೆಂದರೆ, "ನಾವು ಈ ವರೆಗೆ ಸುರಕ್ಷಿತ ಉಪಸಾಗರದಲ್ಲಿದ್ದೆವು. ನಮ್ಮ ಕಾರ್ಯ ಕ್ಷೇತ್ರವೂ ನಿರ್ದಿಷ್ಟವಾಗಿತ್ತು. ಆದರೆ ಈಗ ಅಲ್ಲಿಂದ ಮಹಾಸಾಗರಕ್ಕೆ ಒಗೆ ಯಲ್ಪಟ್ಟಿದ್ದೇವೆ. ಇನ್ನು ನಮಗೆ ಮಾರ್ಗ ತೋರಿಸುವ ಧೃವತಾರೆ ಎಂದರೆ ಹಳ್ಳಿಯ ಕೈಗಾರಿಕೆಗಳೇ. ೭ರಿಂದ ೧೪ ವರುಷದವರೆಗೆ ಬೆಳೆಯುವ ಮಗು ವಿಗೆ ಮಾತ್ರ ನಮ್ಮ ಕಾರ್ಯಕ್ಷೇತ್ರ ಮೀಸಲಾಗಿಲ್ಲ. ತಾಯಿ ಗರ್ಭದಿಂದ ಮರಣಾಂತ್ಯದವರೆಗೆ ಸಮಗ್ರ ಜೀವನಾವಧಿಯವರೆಗೆ ಹೊಸ ಶಿಕ್ಷಣವು ತನ್ನ ವ್ಯಾಪ್ತಿಯನ್ನಾಗಿ ಅಪ್ಪಿಕೊಂಡಿದೆ." ಐದು ದಿನಗಳವರೆಗೆ ಸಮ್ಮೇಲನದ ಕಾರ್ಯಕಲಾಪಗಳು ಸಾಗಿದವು. ಕೆಳಗಿನ ಸಂಗತಿಗಳನ್ನು ಒಪ್ಪಿಕೊಳ್ಳಲಾ ಯಿತು.

೧. ಗಾಂಧೀಜಿಯವರು ಮೇಲೆ ಹೇಳಿದ ಅಭಿಪ್ರಾಯಕ್ಕೆ ಒಪ್ಪಿಗೆ ದೊರೆಯಿತು.

೨. ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಮೂಲ ಶಿಕ್ಷಣ ಶಾಲೆಗಳ ಸಂಖ್ಯೆಯು ಬಹಳ ಕಡಿಮೆಯಾಗಲಿಲ್ಲ.

೩. ಮಗುವಿನ ವ್ಯಕ್ತಿತ್ವ ವಿಕಾಸ ಹಾಗು ನಾಗರಿಕನನ್ನಾಗಿ ತರ ಬೇತುಗೊಳಿಸುವ ವಿಧಾನ ದೃಷ್ಟಿಯಿಂದ ಮೂಲ ಶಿಕ್ಷಣದ ಕಾರ್ಯವು ತೃಪ್ತಿಕರವಾಗಿ ಸಾಗಿದೆ.

೪. ವಿಧಾಯಕ ಕಾರ್ಯ ಕರ್ತರು ಹಾಗು ರಾಷ್ಟ್ರೀಯ ಶಿಕ್ಷಣ ಕೆಲಸ ಗಾರರು ಈ ಸುಸಂಧಿಯಲ್ಲಿ ಪ್ರಸಾರ ಕಾರ್ಯ ಕೈಕೊಳ್ಳಬೇಕು.

೫. ವಿದ್ಯಾರ್ಥಿಯು ತನ್ನ ಶಿಕ್ಷಣದ ಅವಧಿಯಲ್ಲಿ ತನ್ನ ಶಿಕ್ಷಣದ ವೆಚ್ಚ ವನ್ನು ಗಳಿಸುವಷ್ಟು ಸಮರ್ಥನಾಗಬೇಕು. ಉಪಯುಕ್ತ ಸಾಮಾನುಗಳನ್ನು

ತಯಾರಿಸಿದರೆ ಮಾತ್ರ ಇದು ಸಾಧ್ಯವಿದೆ. ಅವುಗಳನ್ನು ತಯಾರಿಸುವಲ್ಲಿ ಶೈಕ್ಷಣಿಕ ಲಾಭಗಳೂ ಇರಬೇಕು.

೬. ದೇಶದ ಆರ್ಥಿಕ ರಚನೆಯೂ ಬದಲಾಗಬೇಕು. ಮೂಲ ಉದ್ಯೋಗಗಳ ಉತ್ಪತ್ತಿ ಹೆಚ್ಚಾಗಬೇಕು. ತಾಂತ್ರಿಕ ಸಂಶೋಧನೆಯು ವಿಕೇಂದ್ರೀಕರಣದ ತತ್ತ್ವಗಳನ್ನೊಳಗೊಂಡು ಆರ್ಥಿಕ ರಚನೆಯನ್ನು ಯಶಸ್ವಿಯಾಗಿ ಮಾಡಬೇಕು. ರಾಷ್ಟ್ರದ ಸ್ವಾವಲಂಬನ ಶಕ್ತಿಯನ್ನು ಹೊಸ ಶಿಕ್ಷಣವು ಹೆಚ್ಚಿಸಬೇಕು. ಪೂರ್ವ ಬುನಿಯಾದಿ (Pre-Basic) ಉತ್ತರ ಬುನಿಯಾದಿ (Post-Basic) ಹಾಗು ಪ್ರೌಢ ಶಿಕ್ಷಣ ಇವುಗಳ ಅಭ್ಯಾಸ ವಿಷಯಗಳ ಪತ್ರಿಕೆಗಳನ್ನು ತಯಾರಿಸಬೇಕು. ಈ ಸಮಿತಿಗಳು ನೇಮಿಸಲ್ಪಡಬೇಕು. ೧೯೪೫ನೇ ಫೆಬ್ರುವರಿ ತಿಂಗಳಲ್ಲಿ ಕರೆದ ತಾಲೀಮಿ ಸಂಘದ ವಿಶೇಷ ಸಭೆಯಲ್ಲಿ ಮೇಲೆ ಹೇಳಿದಂತೆ ಸಮಿತಿಗಳು ನಿರ್ಮಾಣವಾದುವು. ಇಷ್ಟರಲ್ಲಿ ಹೊಸ ಪ್ರಾಂತಗಳಲ್ಲಿಯೂ ಮೂಲ ಶಿಕ್ಷಣದ ಆರಂಭವಾಗಬೇಕೆಂಬ ಕೂಗು ಕೇಳತೊಡಗಿತ್ತು.

**ಇತರ ಪ್ರಾಂತಗಳಲ್ಲಿ ಪ್ರಗತಿ:**

ಬಂಗಾಲವೂ ಮುಂದೆ ಬಂದಿತು. ೧೯೪೪ನೇ ಅಕ್ಟೋಬರದಿಂದ ಮೂರು ತಿಂಗಳ ತರಬೇತಿ ವರ್ಗವೂ, ಮೂರು ಮೂಲ ಶಿಕ್ಷಣ ಶಾಲೆಗಳೂ ಮಿದನಾಪುರ ಜಿಲ್ಹೆಯಲ್ಲಿ ಸುರುವಾದವು. ೧೯೪೫ರಲ್ಲಿ ಸೇವಾಗ್ರಾಮದಲ್ಲಿ ೨೫ ಶಿಕ್ಷಕರೂ ತರಬೇತು ಹೊಂದಿದರು. ಬಂಗಾಲ ಮೂಲ ಶಿಕ್ಷಣ ಸಮಿತಿಯು ನಿರ್ಮಾಣವಾಯಿತು. ಶ್ರೀ. ಲಾವಣ್ಯಲತಾಚಂದ ಅವರು ಅಧ್ಯಕ್ಷರಾಗಿಯೂ ಶ್ರೀ. ಜಮುನಾ ಘೋಷ ಅವರು ಕಾರ್ಯದರ್ಶಿಗಳಾಗಿಯೂ ನೇಮಕ ಹೊಂದಿದರು. ನಂತರ ಬಲರಾಮಪುರದಲ್ಲಿ ಟ್ರೇನಿಂಗ ಸೆಂಟರ ಸುರುವಾಯಿತು. ೧೫ ಶಾಲೆಗಳಲ್ಲಿ ಹೊಸ ಶಿಕ್ಷಣದ ಕಾರ್ಯವು ನಡೆಯಿತು. ಬಿಹಾರದಲ್ಲಿಯೂ ನಯೀ ತಾಲೀಮ ಸಮಿತಿಯು ನಿರ್ಮಾಣವಾಯಿತು. ಓಡಿಸಾದಲ್ಲಿಯೂ ಮೂಲ ಶಿಕ್ಷಣ ಸಂಘವು ರೂಪುಗೊಂಡಿತು. ಬೇಸಿಕ್ ಶಾಲೆಗಳು ಪುನಃ ತೆರೆಯಲ್ಪಟ್ಟವು. ಮದ್ರಾಸ ಪ್ರಾಂತದಲ್ಲಿ ೧೯೪೦ರಲ್ಲಿ ಸರಕಾರದ ಯತ್ನಗಳು ನಿಂತವು. ಕೋಯಿಮತ್ತೂರ ಹತ್ತರ ಪೆರಿಯಾನಾಯಕನಪಾಲಯಂ ಎಂಬಲ್ಲಿ ಖಾಸಗಿ ಪ್ರಯೋಗ ಸುರುವಾಗಿ ಎರಡೂವರೆ

ವರುಷಗಳ ವರೆಗೆ ಕಾರ್ಯ ಸಾಗಿತು. ಅಲ್ಲಿಂದ ೧೯೪೫ನೇ ಜುಲೈ ತಿಂಗಳ ವರೆಗೆ ಮದ್ರಾಸ ಪ್ರಾಂತದಲ್ಲಿ ಮೂಲ ಶಿಕ್ಷಣವು ಮಾಯವಾಯಿತು. ಈ ತಿಂಗಳಲ್ಲಿ ಸೇಲಂ ಜಿಲ್ಹೆಯ ತಿರುಚಿನಗೂಡು ಎಂಬಲ್ಲಿ ಹಿಂದುಸ್ತಾನಿ ತಾಲೀಮಿ ಸಂಘದವರು ಬೇಸಿಕ್ ಶಿಕ್ಷಕರ ತರಬೇತಿ ಕೇಂದ್ರವನ್ನು ತೆರೆದರು. ಶ್ರೀ. ಜಿ. ರಾಮಚಂದ್ರನ್ ಅವರು ಅದರ ಸಂಚಾಲಕರಾಗಿದ್ದರು. ೧೯೪೫ನೇ ಮೇ ತಿಂಗಳಲ್ಲಿ ರೂಪುಗೊಂಡ ತಮಿಳನಾಡ ಮೂಲ ಶಿಕ್ಷಣ ಸಂಘವು ಈ ಕೇಂದ್ರದ ವೆಚ್ಚವನ್ನು ಕೊಟ್ಟಿತು. ೨೭ ಶಿಕ್ಷಕರು ಆರು ತಿಂಗಳ ತರಬೇತು ಹೊಂದಿದರು. ೧೯೪೬ನೇ ಜಾನೇವರಿ ತಿಂಗಳಲ್ಲಿ ೧೦ ಬೇಸಿಕ್ ಶಾಲೆಗಳು ಸುರುವಾದವು. ಕೇರಳ, ಕರ್ನಾಟಕಗಳಲ್ಲಿ ಕಸ್ತೂರಬಾ ಗ್ರಾಮ ಸೇವಕ ಟ್ರೇನಿಂಗ ಕ್ಯಾಂಪುಗಳು ಆರಂಭವಾದವು. ಈಗ ಮದ್ರಾಸ ಸರಕಾರವೂ ಟ್ರೇನಿಂಗ ಸ್ಕೂಲನ್ನು ತೆರೆಯಿತು. ೧೯೪೬ನೇ ಫೆಬ್ರುವರಿ ತಿಂಗಳಲ್ಲಿ ಆಂಧ್ರದಲ್ಲಿಯೂ ಮೂಲ ಶಿಕ್ಷಣ ಕಾರ್ಯವು ಆರಂಭವಾಯಿತು. ಗುಂಟೂರ ಜಿಲ್ಹೆಯ ಕೊನೆಟಿಪುರಂ ಎಂಬಲ್ಲಿ ಶಿಕ್ಷಕರ ತರಬೇತಿ ಕೇಂದ್ರವನ್ನು ತೆರೆಯಲು ಶ್ರೀ. ಜಿ. ರಾಮಚಂದ್ರನ್ ಅವರು ಸಹಾಯ ಮಾಡಿದರು. ಆಂಧ್ರ ಬೇಸಿಕ್ ಎಜ್ಯುಕೇಶನ್ ಸೊಸಾಯಿಟಿಯು ರೂಪುಗೊಂಡು, ತನ್ನ ಕಾರ್ಯ ನಡೆಸಿದೆ. ೧೯೪೬ನೇ ಜುಲೈ ತಿಂಗಳಲ್ಲಿ ಮೈಸೂರು ಶಿಕ್ಷಕರ ತರಬೇತಿ ಕೆಂದ್ರವನ್ನು ಕೆಂಗೇರಿ ಗುರುಕುಲ ಆಶ್ರಮದಲ್ಲಿ ತೆರೆಯಲಾಯಿತು.

## ಕಸ್ತೂರಬಾ ಗಾಂಧಿ ಮೆಮೋರಿಯಲ್ ಟ್ರಸ್ಟ:

ಇದರ ಅಂಗವಾಗಿಯೂ ಮೂಲ ಶಿಕ್ಷಣ ಪ್ರಸಾರವು ನಡೆಯಿತು. ೧೯೪೪ನೇ ಅಕ್ಟೋಬರ ಎರಡನೇ ದಿನ ಗಾಂಧೀಜಿಯವರು ಈ ನಿಧಿಯ ಉಪಯೋಗದ ಬಗೆಗೆ ತಿಳಿ ಹೇಳುವಾಗ ಮೂಲ ಶಿಕ್ಷಣದ ಕಾರ್ಯಕ್ಷೇತ್ರವನ್ನು ನಿರೂಪಿಸಿದರು:— "ಸಮಗ್ರ ಸಮಾಜವು ಮೂಲ ಶಿಕ್ಷಣದ ಕಾರ್ಯ ಕ್ಷೇತ್ರವು. ಗ್ರಾಮದ ಕೈಗಾರಿಕೆಗಳು, ಸ್ವಚ್ಛತೆ, ಔಷಧೋಪಚಾರಗಳು ಇವುಗಳ ಮುಖಾಂತರವೇ ಮೂಲ ಶಿಕ್ಷಣವು ಸಾಗಬೇಕು." ತರಬೇತಿ ಕೇಂದ್ರಗಳನ್ನು ತೆರೆದು ಹಿಂದುಸ್ತಾನಿ ತಾಲೀಮಿ ಸಂಘವು ಹೆಣ್ಣು ಮಕ್ಕಳನ್ನು ಈ ಕಾರ್ಯದಲ್ಲಿ ತೊಡಗಿಸಿತು.

**ಮಾನ್ಯ ಖೇರರ ಕರೆ:**

೧೯೪೬ನೇ ಎಪ್ರೀಲ ತಿಂಗಳಷ್ಟರಲ್ಲಿ ಪ್ರಾಂತಗಳಲ್ಲಿ ರಾಷ್ಟ್ರೀಯ ಸರಕಾರಗಳು ಪುನಃ ರೂಪುಗೊಂಡವು. ಶಿಕ್ಷಣ ಮಂತ್ರಿಗಳ ಹಾಗೂ ಕಾರ್ಯಕರ್ತರ ಸಭೆಯೊಂದನ್ನು ಮಾನ್ಯ ಖೇರರು ಕರೆದರು. ಮಧ್ಯಪ್ರಾಂತ, ಮದ್ರಾಸ, ಬಿಹಾರ, ಓಡಿಸಾ, ವಾಯುವ್ಯ ಸರಹದ್ದಿನ ಪ್ರಾಂತ ಮತ್ತು ಮುಂಬಯಿ ಪ್ರಾಂತಗಳ ಪ್ರತಿನಿಧಿಗಳು ನೆರೆದಿದ್ದರು. ಈ ಸಭೆಯಲ್ಲಿ ಮಹತ್ವದ ಎರಡು ಗೊತ್ತುವಳಿಗಳನ್ನು ಸ್ವೀಕರಿಸಲಾಯಿತು.

೧. ಮೂಲ ಶಿಕ್ಷಣವು ಪ್ರಯೋಗಾವಸ್ಥೆಯನ್ನು ದಾಟಿದೆ. ಪ್ರಾಂತದ ತುಂಬೆಲ್ಲಾ ಇದನ್ನು ಸುರುವುಮಾಡಲು ಪ್ರಾಂತಿಕ ಸರಕಾರಗಳಿಗೆ ಬಿನ್ನವಿಸಬೇಕು.

೨. ಏಳು ವರುಷಗಳ ಶಿಕ್ಷಣದ ಅವಧಿಯಲ್ಲಿ ಇಂಗ್ಲೀಷಿಗೆ ಸ್ಥಾನವಿರಕೂಡದು.

**ಮುನ್ನಡೆ:**

೧೯೪೬ನೇ ಅಗಸ್ಟ ೫ರಿಂದ ೧೯೪೭ನೇ ಎಪ್ರಿಲ ೧೫ರ ವರೆಗೆ ಸೇವಾಗ್ರಾಮದಲ್ಲಿ ಮಾಧ್ಯಮಿಕ ಶಿಕ್ಷಕರಿಗೂ ಶಿಕ್ಷಣಾಧಿಕಾರಿಗಳಿಗೂ ಮೂಲ ಶಿಕ್ಷಣ ತರಬೇತಿ ಕೊಡಲಾಯಿತು. ಪೂಜ್ಯ ಆರ್ಯನಾಯಕಂ ಹಾಗೂ ಅವರ ಧರ್ಮಪತ್ನಿ ಆಶಾದೇವಿ ಈ ದಂಪತಿಗಳು ಈ ತರಬೇತಿ ವರ್ಗದ ಹೊಣೆಯನ್ನು ಯಶಸ್ವಿಯಾಗಿ ನಿರ್ವಹಿಸಿದರು. ಮುಂಬಯಿ, ಮದ್ರಾಸ, ಮಧ್ಯಪ್ರಾಂತ, ಓಡಿಸಾ, ಬಂಗಾಲ, ಬಿಹಾರ, ಆಸಾಮ ಮೊದಲಾದ ಪ್ರಾಂತಗಳಿಂದ ಶಿಕ್ಷಕರು ತರಬೇತು ಹೊಂದಿದರು. ಮೂಲ ಶಿಕ್ಷಣದಲ್ಲಿ ತರಬೇತುಗೊಳಿಸುವ ಈ ಅಖಿಲ ಭಾರತ ಕೇಂದ್ರವು ಎರಡನೆಯ ಸಲ ಅದೇ ತರದ ತರಬೇತಿ ವರ್ಗವನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿತು. ಸೇವಾಗ್ರಾಮದಲ್ಲಿ ೧೯೪೭ ನೇ ಮಾರ್ಚ ತಿಂಗಳಲ್ಲಿ ಉತ್ತರಬುನಿಯಾದಿ ಮೂಲ ಶಿಕ್ಷಣ ವರ್ಗವು ಸುರುವಾಯಿತು. ಅದೇ ವರುಷ ಜನೇವರಿ ತಿಂಗಳಲ್ಲಿ ಬಿಹಾರದಲ್ಲಿ ವೃಂದಾವನ ಪ್ರಾಯೋಗಿಕ ಕ್ಷೇತ್ರದ ಕುಮಾರಬಾಘದಲ್ಲಿ ಉತ್ತರಬುನಿಯಾದಿ ವರ್ಗವೂ ೧೫೦ ವಿದ್ಯಾರ್ಥಿಗಳಿಗಾಗಿ ಆರಂಭವಾಯಿತು.

## ಮುಂಬಯಿ ಪ್ರಾಂತದ ಮುನ್ನಡೆ:

ಬಿಹಾರದಂತೆ ಮುಂಬಯಿಯಲ್ಲಿಯೂ ಮೂಲ ಶಿಕ್ಷಣ ಪ್ರಗತಿ ಚನ್ನಾಗಿ ಸಾಗಿದೆ. ಹಿಂದುಸ್ತಾನದ ತುಂಬೆಲ್ಲಾ ಮೂಲ ಶಿಕ್ಷಣ ಪ್ರಸಾರ ನಡೆಯಲು ಕಾರಣಪುರುಷರಲ್ಲೊಬ್ಬರಾದ ಮಾನ್ಯ ಖೇರರ ನೇತೃತ್ವದಲ್ಲಿ ಮೂಲ ಶಿಕ್ಷಣವು ಪ್ರಾಯೋಗಿಕ ಕ್ಷೇತ್ರವನ್ನು ದಾಟಿದೆ. ಸಾರ್ವತ್ರಿಕವಾಗಿ ಅದನ್ನು ಅಮಲಿನಲ್ಲಿ ತರುವ ಯೋಜನೆಗಳು ಭರದಿಂದ ಸಾಗಿವೆ. ಮೂರು ಪ್ರಾದೇಶಿಕ ಟ್ರೇನಿಂಗ ಕಾಲೇಜುಗಳು ೧೯೩೮ ರಿಂದ ಪ್ರಾಥಮಿಕ ಶಿಕ್ಷಕರನ್ನು ತರಬೇತು ಗೊಳಿಸುತ್ತಿವೆ. ೫೮ ಬೇಸಿಕ್ ಶಾಲೆಗಳೂ ಪ್ರಯೋಗ ಮಾಡಿವೆ. ಇತರ ಟ್ರೇನಿಂಗ ಸಂಸ್ಥೆಗಳೂ ಮೂಲ ಶಿಕ್ಷಣದ ಸಂಸ್ಥೆಗಳೇ ಆಗಿವೆ. ಪುಣೆಯಲ್ಲಿ ಮಾಧ್ಯಮಿಕ ಶಿಕ್ಷಕರಿಗೂ, ಮೇಲ್ವಿಚಾರಕರಿಗೂ ಅಲ್ಪಾವಧಿ ತರಬೇತು ಕೊಡಲಾಯಿತು. ಬೆಳಗಾಂವಿಯಲ್ಲಿ ಪದವೀಧರರನ್ನು ತರಬೇತುಗೊಳಿಸುವ ಬಿ. ಟಿ. ಕಾಲೇಜು ಒಂಬತ್ತು ತಿಂಗಳು ನಡೆಯಿತು. ಪದವೀಧರರ ತರಬೇತಿಗಾಗಿ ಮೂರು ಪ್ರಾದೇಶಿಕ ಕಾಲೇಜುಗಳು ಕೆಲಸ ಮಾಡುತ್ತಿರುವುದು ಸ್ತುತ್ಯವು. ಡೆಪ್ಯೂಟಿ ಡಾಯರೆಕ್ಟರರಾಗಿರುವ ಶ್ರೀ. ಎಲ್. ಆರ್. ದೇಸಾಯಿ, ಮುಂಬಯಿ ಶಿಕ್ಷಣ ಸಲಹೆಗಾರರಾದ ಜನಾಬ ಸೈಯದ್ದೈನ ಹಾಗು ಮುಂಬಯಿ ಪ್ರಾಂತದ ಡಾಯರೆಕ್ಟರರಾದ ಶ್ರೀ. ಡಿ. ಸಿ. ಪಾವಟೆ ಇವರ ಹಿರಿಯತನದಲ್ಲಿ ಮೂಲ ಶಿಕ್ಷಣವು ಪ್ರಗತಿಪಥದಲ್ಲಿ ಸಾಗಿದೆ.

## ವಿಕ್ರಮ ಸಮ್ಮೇಲನ:

ಅಖಿಲ ಭಾರತ ರಾಷ್ಟ್ರೀಯ ಮೂಲ ಶಿಕ್ಷಣ ಸಮ್ಮೇಲನವು ೧೯೪೮ನೇ ಎಪ್ರಿಲ ೧೮ ರಿಂದ ೨೨ ರ ವರೆಗೆ ಪಾಟಣಾ ಜಿಲ್ಹೆಯ ವಿಕ್ರಮದಲ್ಲಿ ಜರುಗಿತು. ವಿವಿಧ ಪ್ರಾಂತಗಳ ಪ್ರತಿನಿಧಿಗಳೂ, ಅಧಿಕಾರಿಗಳೂ, ಸಂಸ್ಥಾನಗಳ ಶಿಕ್ಷಣ ಮಂತ್ರಿಗಳೂ ಅಲ್ಲಿ ನೆರೆದಿದ್ದರು. ಹಿಂದುಸ್ತಾನಿ ತಾಲೀಮಿ ಸಂಘದವರ ಮಾರ್ಗದರ್ಶಿತ್ವದಲ್ಲಿ ಅಲ್ಲಿಯ ಕಾರ್ಯವೆಲ್ಲ ಯಶಸ್ವಿಯಾಗಿ ಪೂರ್ತಿಗೊಂಡಿತು. ಬಿಹಾರದ ಗವ್ಹರ್ನರರಾದ ನಾಮದಾರ ಅಣೆ ಅವರು ಮಾಡಿದ ಪ್ರಾಸ್ತಾವಿಕ ಭಾಷಣವು ಮಾರ್ಮಿಕವಾಗಿದೆ. "ವರ್ಧಾ ಯೋಜನೆಯು ಮಹಾತ್ಮರ

ವಿಧಾಯಕ ಕಾರ್ಯಕ್ರಮಗಳಲ್ಲೊಂದು. ಇದನ್ನು ಕೃತಿಗಿಳಿಸುವುದು ಅತ್ಯ ಗತ್ಯವು. ಈ ಶಿಕ್ಷಣ ಯೋಜನೆಯ ಮುಖಾಂತರವೇ ಭಾವೀ ಭಾರತವನ್ನೂ ಹೊಸ ಸಮಾಜವನ್ನೂ ರಚಿಸಲು ಬಾಪೂಜಿಯವರು ಬಯಸಿದ್ದರು." ಎಂದು ಹೇಳಿ ಭಾರತೀಯರ ಜೀವನವನ್ನು ಸುಖಮಯವಾಗಿಯೂ, ಆಶಾದಾಯಿಕ ವಾಗಿಯೂ ಮಾಡಬಲ್ಲ ರಾಷ್ಟ್ರೀಯ ಶಿಕ್ಷಣದಿಂದ ನಿಜವಾದ ಸ್ವರಾಜ್ಯವನ್ನು ಪ್ರಸ್ಥಾಪಿಸುವುದು ಸಾಧ್ಯವೆಂಬ ಮಾತನ್ನು ಸ್ಪಷ್ಟೀಕರಿಸಿದರು. ನಂತರ ಬೇರೆ ಬೇರೆ ಪ್ರಾಂತಗಳ ಶಿಕ್ಷಣ ಕೇಂದ್ರಗಳು ಮಾಡಿದ ಪ್ರಯೋಗಗಳ ವರದಿ ಗಳನ್ನು ಪರಿಶೀಲಿಸಲಾಯಿತು. ಇನ್ನು ಮೇಲೆ ಈ ಯೋಜನೆಯ ಯೋಗ್ಯ ಪ್ರಸಾರವಾಗಲು ಶಿಕ್ಷಣತಜ್ಞರೆಲ್ಲ ಯತ್ನಿಸಬೇಕೆಂದೂ ನಿರ್ಣಯಿಸಲಾಯಿತು. ಈ ಸಮಯದಲ್ಲಿ ಸನ್ಮಾನ್ಯ ಬಾಬು ರಾಜೇಂದ್ರ ಪ್ರಸಾದ ಅವರು ಏಳು ವರುಷಗಳ ಅವಧಿಯ ಮೂಲ ಶಿಕ್ಷಣವನ್ನು ಪೂರ್ತಿಗೊಳಿಸುವ ವಿದ್ಯಾರ್ಥಿ ಗಳಿಗೆ ಪ್ರಮಾಣ ಪತ್ರಹಂಚಿದರು. ಆಗ ಅವರು ವರ್ಧಾ ರಾಷ್ಟ್ರೀಯ ಶಿಕ್ಷಣ ಯೋಜನೆಯು ಬಡ ಭಾರತದ ದೃಷ್ಟಿಯಿಂದ ನಿರ್ಮಾಣವಾಗಿದೆಯೆಂದೂ, ಸಿರಿವಂತ ಪಾಶ್ಚಾತ್ಯ ರಾಷ್ಟ್ರಗಳನ್ನು ನಾವು ಅನುಕರಣಮಾಡುವಂತಿಲ್ಲವೆಂದೂ ತಿಳಿಸಿ, ಈ ಹೊಸ ಯೋಜನೆಯ ಚರಿತ್ರೆಯನ್ನು ವಿವರಿಸಿದರು. ಆದರ್ಶ ಶಿಕ್ಷಕರನ್ನು ತಯಾರಿಸಬೇಕೆಂತಲೂ, ಮಹಾತ್ಮಾಜಿಯವರ ಆದರ್ಶ ಸಮಾಜ ರಚನೆಯ ಕನಸು ನನಸಾಗಲಿಕ್ಕೆ ನಯೀ ತಾಲೀಮು ಅತ್ಯಂತ ಸಹ ಕಾರಿಯಾಗಿದೆಯೆಂದೂ, ಈ ಕಾರ್ಯದಲ್ಲಿ ಯಶಾಪಯಶಗಳನ್ನು ಲಕ್ಷಿಸದೆ— ರಣಭೂಮಿಯ ಸೈನಿಕರಂತೆ- ಮುಂದರಿದಲ್ಲಿ ಯಶವನ್ನು ಸಂಪಾದಿಸಲಿಕ್ಕೆ ಎಲ್ಲರೂ ಸಮರ್ಥರಾಗುವರೆಂದೂ ಡಾ| ಝಕೀರ ಹುಸೇನರು ಒತ್ತಿ ಹೇಳಿ ದರು. ಸೇವಾಗ್ರಾಮದಲ್ಲಿ ಹಳ್ಳಿಯ ಮಕ್ಕಳ ಶಿಕ್ಷಣಕ್ಕಾಗಿ ತಾಯ್ಗರುಳಿ ನಿಂದ ದುಡಿಯುತ್ತಿರುವ ಶ್ರೀಮತಿ ಆಶಾದೇವಿ ಅವರು ಶಿಕ್ಷಕರ ಟ್ರೇನಿಂಗಿನ ಬಗೆಗೆ ತಮ್ಮ ಅನುಭವ ಪ್ರಕಾಶವನ್ನು ಬೀರಿದರು. ವಿಕ್ರಮ ಸಮ್ಮೇಲನವು ಉತ್ಸಾಹಪೂರಿತ ಶಿಕ್ಷಣತಜ್ಞರ ವಿಚಾರಗಳಿಗೂ, ಮಹಾತ್ಮಾಜಿಯವರ ವಿಧಾ ಯಕ ಕಾರ್ಯಕ್ರಮದಲ್ಲಿ ಮುಂದಡಿ ಇಡುವವರ ಮಾರ್ಗದರ್ಶನಕ್ಕೂ, ಮೂಲ ಶಿಕ್ಷಣದ ವಿವಿಧಾಂಗಗಳ ಪರಿಶೀಲನೆಗೂ ಸಕಾಲಸಂಧಿಯನ್ನು ಕಲ್ಪಿಸಿಕೊ ಟ್ಟಿತು.

**ಪೆರಿಯನಾಯಕನ ಪಾಳಯಂ ಸಮ್ಮೇಳನ:**

ತಾ. ೭—೮—೯|೫|೧೯೫೧ನೇ ದಿನಗಳಲ್ಲಿ ಅಖಿಲ ಭಾರತ ಮೂಲ ಶಿಕ್ಷಣ ಸಮ್ಮೇಳನವು ಜರುಗಿತು. ಆಚಾರ್ಯ ವಿನೋಬಾ ಅವರು ಅಧ್ಯಕ್ಷತೆ ವಹಿಸಿದ್ದರು. ನಯೀ ತಾಲೀಮು ನಮ್ಮ ಆಶೆಯ ಸ್ಥಾನವೆಂದೂ, ಆದರ್ಶ ಶಿಕ್ಷಕನು ಹೇಗಿರಬೇಕೆಂಬುದನ್ನೂ, ಶಾಲೆ ಒಂದು ಸೇವಾಕೇಂದ್ರವೆಂಬುದನ್ನೂ ಅವರು ಸ್ಪಷ್ಟೀಕರಿಸಿದರು. ಇಲ್ಲಿಯ ವರೆಗಿನ ಪ್ರಯೋಗಗಳ ಪರಿಶೀಲನೆಯಾಗಿ, ಮುಂದಿನ ಮಾರ್ಗವನ್ನು ನಿಶ್ಚಿತ ಗೊಳಿಸಲಾಯಿತು.

————

# ೩. ಹೊಸ ಶಿಕ್ಷಣ

ಜಗತ್ತಿನ ಪರಿಸ್ಥಿತಿಯು ಕಾಲಕಾಲಕ್ಕೆ ಬದಲುತ್ತ ಸಾಗಿದಂತೆ ಹೊಸ ವಿಚಾರಗಳು ಆಗಾಗ ತಲೆಯೆತ್ತಿವೆ. ರಾಜಕೀಯ, ಆರ್ಥಿಕ, ಸಾಮಾಜಿಕ ವಿಷಯಗಳಲ್ಲಿ ಹೊಸ ಸಿದ್ಧಾಂತಗಳು ಬೆಳಕಿಗೆ ಬಂದಿವೆ. ಶೈಕ್ಷಣಿಕ ಕ್ಷೇತ್ರ ದಲ್ಲೂ ಹೊಸ ವಿಚಾರಗಳು ಪ್ರಕಟವಾಗಿವೆ. ಶಿಕ್ಷಣ ತಜ್ಞರ ವಿವಿಧ ಪ್ರಯೋಗಗಳ ಫಲವಾಗಿ ಅನೇಕ ಪದ್ಧತಿಗಳೂ ಪ್ರಚಾರದಲ್ಲಿವೆ. ಶಿಕ್ಷಣದ ವ್ಯಾಪ್ತಿ, ಧ್ಯೇಯ, ಸಾಧನ, ಕ್ರಮ ಇತ್ಯಾದಿ ವಿಷಯಗಳ ಬಗೆಗೆ ಸಕಾಲ ಪರಿಶೀಲನೆಯಾಗಿ ಅವು ಹೊಸ ರೂಪ ತಾಳಿವೆ. ಹೊಸ ಹೆಸರು ಪಡೆದಿವೆ. ವರ್ಧಾ ಶಿಕ್ಷಣ ಯೋಜನೆಯು ಪ್ರಯೋಗಾವಸ್ಥೆಯನ್ನು ಯಶಸ್ವಿಯಾಗಿ ದಾಟಿದೆ. ಅದು ಈಗ ಜನಸಾಮಾನ್ಯರಿಗೆ ದೊರೆಯುವ ಸುಸಂಧಿ ಒದಗಿದೆ. ಅದರ ಮೂಲಪುರುಷರು ಮಹಾತ್ಮಾಗಾಂಧಿಯವರು. ಅದು, ಅವರು ತಮ್ಮ ಜೀವನ ನೌಕೆಯನ್ನು ಕ್ಷೀರಸಾಗರದಲ್ಲಿ ನೂಕುತ್ತ ಕಡೆದ ಕೆನೆ ಮೊಸರು, ಅನುಭವಾಮೃತವು.

**ನಯೀ ತಾಲೀಮ:**

ನಯೀ ತಾಲೀಮ ಎಂದರೆ ಹೊಸ ಶಿಕ್ಷಣ. ಹೊಸ ಶಿಕ್ಷಣ ಎಂಬುದು ಶಿಕ್ಷಣದಲ್ಲಿ ಹೊಸದೃಷ್ಟಿ. ಇಂದಿನ ಯುಗವು ಮಕ್ಕಳಯುಗವು. ಈ ಕೂಗು ಹೊಸತು. ರೂಸೋ, ಪೆಸ್ಟಾಲಜಿ, ಹರ್ಬಾರ್ಟ, ಫ್ರೊಬೆಲ್, ಮೊಂಟೆಸರಿ ಈ ಐವರು ಹೊಸ ಶಿಕ್ಷಣದ ಪುರಸ್ಕರ್ತರು. ಡಾ. ನನ್, ಅಡ್ಯಾಮ್ಸ. ಡ್ಯೂಯಿ ಮುಂತಾದ ಆಧುನಿಕ ಶಿಕ್ಷಣ ತಜ್ಞರು ಅವರ ಕೂಗಿಗೆ ಓ ಕೊಟ್ಟರು. ಮಗು ಪ್ರಾಧಾನ್ಯ; ಶಿಕ್ಷಣವು ಅವರ ವೀಣೆಯ ಮೃದು ಮಧುರವಾಣಿ. ವಿಷಯ ಪ್ರಾಧಾನ್ಯ ಶಿಕ್ಷಣವು ರೂಢಿಯಲ್ಲಿತ್ತು. ಮಗುವಿಗೆ ರುಚಿಸಲಿ, ರುಚಿಸದೆ ಇರಲಿ, ಅವನು ಬೆಳೆಯುವ ಜೀವನಕ್ಕೆ ಅಗತ್ಯವಿರಲಿ, ಇಲ್ಲದಿರಲಿ, ಅವನ ಸುತ್ತು ಮುತ್ತಲಿನ ಪರಿಸ್ಥಿತಿಗೆ ಹೊಂದಿಕೆಯಾಗಲಿ, ಬಿಡಲಿ, ಪ್ರೌಢನು ನಿರ್ಣಯಿಸಿದ ವಿಷಯಗಳನ್ನು ಅವನು ಕಲಿಯಲೇಬೇಕಾಗುತ್ತಿತ್ತು. ಅವನ

ಒಲವು ನಿಲುವುಗಳಿಗೆ ಅನುಗುಣವಾಗುವ ಶಿಕ್ಷಣವು ದೊರೆಯಲಿಲ್ಲ. ಅವನ ವಿಕಾಸದ ವಿಧಾನದಲ್ಲಿ ಸ್ವದಾರಿಯಿರಲಿಲ್ಲ; ಸುದಾರಿಯೂ ಸಿಗಲಿಲ್ಲ. ಹೀಗಾಗಿ ಪ್ರೌಢನಿಂದ ನಿರ್ಮಿತವಾದ ಸೆರೆಮನೆಯಲ್ಲಿ ಮಗುವು ನರಳುತ್ತಿದ್ದನು, ಕೊರಗುತ್ತಿದ್ದನು. ಶಿಕ್ಷಣದಲ್ಲಿ ಮಗು, ಸ್ವಾತಂತ್ರ್ಯ ಚಳವಳಿಯು ಆರಂಭವಾಯಿತು. ಮಗುವು ಶಿಕ್ಷಣದ ಕೇಂದ್ರ ಎಂಬ ಕೂಗು ಧ್ವನಿತವಾಗ ತೊಡಗಿತು. ಇದುವೇ ಶಿಕ್ಷಣದ ಹೊಸ ದೃಷ್ಟಿಯೆಂದು ಪ್ರಸಾರ ವಾಯಿತು. ಜಗತ್ತಿನ ಪ್ರಮುಖ ರಾಷ್ಟ್ರಗಳಲ್ಲಿ ಈ ಕೂಗಿಗೆ ಮನ್ನಣೆ ದೊರೆತಿದೆ. ದಾಸ್ಯ ರಾಷ್ಟ್ರಗಳಲ್ಲಿ ಈ ಹೊಸ ವಿಚಾರ ಪ್ರಚಾರವಾದರೂ ಸಾಕಷ್ಟು ಕಾರ್ಯರಂಗಕ್ಕಿಳಿಯಲಿಲ್ಲ. ಭಾರತದ ಸ್ವಾತಂತ್ರ್ಯ ಹೋರಾಟದ ಶಿರೋಮಣಿಗೆ ಈ ಕಾರ್ಯ ಮೀಸಲಾಯಿತು. ಮಗುವಿನಲ್ಲಿ ಹುದುಗಿದ ಉತ್ತಮಾಂಶಗಳನ್ನೆಲ್ಲ ಶಾರೀರಿಕ, ಮಾನಸಿಕ, ನೈತಿಕ, ಪೋಷಣೆಯ ದೃಷ್ಟಿಯಿಂದ ಬಯಲಿಗೆಳೆಯುವ ವಿಧಾನವೇ ಶಿಕ್ಷಣವು. ಅವನ ಸಮವಾಯ (ಸರ್ವಾಂಗೀಣ ಹಾಗು ಸಮನ್ವಿತ) ವಿಕಾಸವೇ ಶಿಕ್ಷಣದ ಗುರಿ ಎಂದು ಗಾಂಧೀಜಿಯವರು ಸಾರಿದರು. ಅದನ್ನು ಮುಟ್ಟುವ ವಿಶಿಷ್ಟ ಮಾರ್ಗಗಳೇ ಅವರು ಬೋಧಿಸಿದ ನಯೀ ತಾಲೀಮಿನ ರೂಪುರೇಷೆಗಳು. ಅವರು ಉಪಕ್ರಮಿಸಿದ ನಯೀ ತಾಲೀಮು ಶಿಕ್ಷಣದ ಹೊಸ ದೃಷ್ಟಿಯನ್ನು ಅಪ್ಪಿ, ತನ್ನದೇ ಆದ ಹೊಸ ದರ್ಶನವನ್ನು ಬೀರುತ್ತಿದೆ. ಅದುವೇ ಭಾರತೀಯರ ಶಿಕ್ಷಣದಲ್ಲಿ ತಲೆಯೆತ್ತಿದ ಕ್ರಾಂತಿಯ ಉಗಮವು. ಇದಕ್ಕೆ ಜೀವನ ಶಿಕ್ಷಣ ಎಂದು ಸೂತ್ರ ರೂಪವಾಗಿ ನಿರೂಪಿಸಬಹುದು.

**ಹೊಸ ಶಿಕ್ಷಣಜ್ಞ:**

ಮನುಷ್ಯನ ಅಂತಃಶಕ್ತಿಗಳನ್ನೆಲ್ಲ ಕೆರಳಲು ಹವಣಿಸಿದ ಉಪದೇಶಕರೆಲ್ಲ ಹೊಸ ಶಿಕ್ಷಣ ತಜ್ಞರೆಂದು ಸ್ಥೂಲಮಾನವಾಗಿ ಹೇಳಬಹುದು. ಅವರ ಮಾರ್ಗದ ಅಡಿಗಲ್ಲು ಒಲುಮೆ, ಒಲುಮೆಯಲ್ಲ. ಜನರನ್ನು ಬುದ್ಧಿಯುತರಾಗಿ, ವಿಚಾರ ಮಾಡಹಚ್ಚಿದ ಸಾಕ್ರೇಟಿಸನು ಸಹ ಹೊಸ ಶಿಕ್ಷಣಜ್ಞನೇ. ಸ್ವಾಭಾವಿಕ ಬೆಳಿಗೆಯಲ್ಲಿ ಆಸ್ಥೆ, ಸಹಾನುಭೂತಿ, ತಾಳ್ಮೆ, ಅಂತಃಸ್ಫೂರ್ತಿ ಇತ್ಯಾದಿಗಳನ್ನು ತೋರಿಸುವ ತಾಯಿಯೂ ಹೊಸ ಶಿಕ್ಷಣಜ್ಞಳೇ.

ಅದರಂತೆ ಒಬ್ಬ ಶಿಕ್ಷಕನಿಗೆ ಹೊಸ ಶಿಕ್ಷಣದ ಪುರಸ್ಕರ್ತರ ಬಗೆಗೂ, ಹೊಸ ಪದ್ಧತಿಗಳ ಬಗೆಗೂ ಪರಿಜ್ಞಾನವಿರಲಿಕ್ಕಿಲ್ಲ. ಆದರೆ ಅವನು ಅನುಭವದ ಪರಿಪಾಕದಿಂದಲೋ, ಆಂತರಿಕ ಜ್ಯೋತಿಯ ಕಿರಣದಡಿಯಲ್ಲೋ, ಮಗುವಿನ ಸ್ವಾಭಾವಿಕ ಬೆಳವಣಿಗೆಗೆ ಬಾಧಕವಾಗುವ ಮುಳ್ಳುಗಳನ್ನು ಆಚೆಗೆಳೆಯುತ್ತಲೂ, ಪೋಷಕವಾಗುವ ಸಂಗತಿಗಳನ್ನೆಲ್ಲ ಈಚೆಗೆಳೆಯುತ್ತಲೂ ತನ್ನ ಕಾರ್ಯವನ್ನು ಸಾಗಿಸುವನು. ಅವನೂ ಹೊಸ ಶಿಕ್ಷಣಜ್ಞನೇ. ತಾತ್ಪರ್ಯವೇನೆಂದರೆ, ಇವರೆಲ್ಲರಿಗೆ ಶಿಕ್ಷಣದ ಇತಿಹಾಸ, ಧ್ಯೇಯ, ಕ್ರಮ, ಸಂವಿಧಾನ, ಇತ್ಯಾದಿಗಳ ಬಗೆಗೆ ಸಾಕಷ್ಟು ಜ್ಞಾನವಿರಲಿಕ್ಕಿಲ್ಲ. ಆದರೆ ಶಿಕ್ಷಣ ಹೊಂದುವ ವ್ಯಕ್ತಿ ಮಗುವು; ಅವನು ಬೆಳೆಯುವ ಜೀವನದಲ್ಲಿ ನಿಜವಾದ ಸೌಂದರ್ಯವು ಒಡಮೂಡಬೇಕು; ಅವನ ಸರ್ವಾಂಗೀಣ ಉನ್ನತಿ ಆಗಬೇಕು; ತಾನು ಸಮಾಜದ ಒಂದು ಘಟಕವೆಂದೂ, ತನ್ನ ಉನ್ನತಿಯಿಂದ ಸಮಾಜಕ್ಕೆ ಕಳೆ ಏರಬೇಕೆಂದೂ, ಅವನಿಗೆ ಮನವರಿಕೆಯಾಗಬೇಕು ಎಂದು ಮುಂತಾಗಿ ಅವರ ಅಂತಃಪ್ರೇರಣೆಯು ಕೂಗುವದು. ಇದುವೇ ಅವರ ಆಂತರಿಕ ಕರೆ, ಅರ್ಥಾತ್ ದರ್ಶನ. ಅಂಥವರೇ ಹೊಸ ಶಿಕ್ಷಣಜ್ಞರು.

### ಗಾಂಧೀಜಿಯವರ ಆಂತರಿಕ ಕರೆ:

ಮಹಾತ್ಮಾಜಿಯವರು ಸೇಗಾಂವ ತಪಸ್ವಿಯೆಂದು ಹೆಸರಾಗಿದ್ದಾರೆ. ಸೇಗಾಂವದಲ್ಲಿ ಅವರ ತಪೋವನವಿದೆ. ಅದಕ್ಕೆ ಸೇವಾಗ್ರಾಮ ಎಂದು ಕರೆಯುವರು. ಅನೇಕ ವರ್ಷಗಳಿಂದ ರಾಜಕೀಯ ಆಂದೋಲನದ ನೌಕೆಯನ್ನು ಸಾಗಿಸಿದರು. ರಚನಾತ್ಮಕ ಕಾರ್ಯಗಳನ್ನು ರೂಪುಗೊಳಿಸಿದರು. ಜನತೆಯ ದಾರಿದ್ರ್ಯ, ನಿರಕ್ಷರತೆಗಳು ದೂರಾದ ಹೊರತು ಭಾರತವು ಬೆಳಕಿಗೆ ಬರುವದಿಲ್ಲೆಂದು ಮನಗಂಡರು. ಶಿಕ್ಷಣವು ನವಭಾರತದ ತಳಗಲ್ಲು, ಭಾಗ್ಯವೀಡು. ಈ ವಿಚಾರವು ಮಹಾತ್ಮಾಜಿಯವರ ಹೃನ್ಮಂದಿರವನ್ನು ಸೇರಿತು. ಹೃದಯದ ಅಂತರಾಳವನ್ನು ಭೇದಿಸಿ ಅಮೃತವು ಹೊರಹೊಮ್ಮಿತು. ಅದುವೇ ಅವರ ದಿವ್ಯದರ್ಶನ, ಹೃದಯದ ಕೂಗು, ಅಂತರಾತ್ಮನ ಕರೆ. ಅವರ ಅಮೃತವಾಣಿಯೇ ಭಾರತದ ಶಿಕ್ಷಣದಲ್ಲಿ ಕ್ರಾಂತಿಯನ್ನು ಹೂಡಿತು. ಜಗತ್ತಿನ ಶಿಕ್ಷಣ ತಜ್ಞರಿಗೆಲ್ಲ ಹೊಸ ದಾರಿಯನ್ನು

ತೋರಿತು. ಅದುವೇ ಭಾರತೀಯರಿಗೆ ಬೇಕಾದ ಹೊಸ ಶಿಕ್ಷಣ. ಡಾಲ್ಟನ್ ಕ್ರಮ, ಪ್ರಾಜೆಕ್ಟ ಪದ್ಧತಿ, ಮಾಂಟೆಸರಿ ಪದ್ಧತಿ ಇವುಗಳಂತೆ ನಯೀ ತಾಲೀಮ ವಿಶಿಷ್ಟ ಕ್ರಮವನ್ನು ಸೂಚಿಸುವದಿಲ್ಲ. ಅದರ ಕ್ರಾಂತಿಯ ಕಿಡಿಗಳು ಶಿಕ್ಷಣದ ಸಮಗ್ರ ವಿಚಾರಗಳಲ್ಲಿ ಮಿನುಗುವವು. ಆದಕಾರಣ ಗಾಂಧೀಜಿಯವರ ದರ್ಶನವು ಶಿಕ್ಷಣದಲ್ಲಿ ಆಮೂಲಾಗ್ರ ಬದಲಾವಣೆ ಯನ್ನು ನಿರ್ದೇಶಿಸುತ್ತದೆ. ಅದು ನವಸಂದೇಶವನ್ನು ಸಾರುತಿದೆ.

**ನವ ಸಂದೇಶ:**

ನಯೀ ತಾಲೀಮು ನವಸಂದೇಶವನ್ನು ಸಾರುತಿದೆ; ಅದು ಜೀವನದ ಶಾಶ್ವತ ಮೂಲ್ಯಗಳ ಮೇಲೆ ನಿಂತಿದೆ; ಧರ್ಮ, ತತ್ವಜ್ಞಾನ, ನೀತಿ ಶಾಸ್ತ್ರಗಳ ಮೂಲ ಸೂತ್ರಗಳನ್ನು ತನ್ನ ಮುಂದಿರದ ತಳಹದಿಯನ್ನಾಗಿ ಅಳವಡಿಸಿ ಕೊಂಡಿದೆ. ಸತ್ಯ, ನ್ಯಾಯ, ಅಹಿಂಸೆ ಇವೇ ಆ ಸೂತ್ರಗಳು. ಇವುಗಳನ್ನು ಕೇಳಿದೊಡನೆ ಶಿಕ್ಷಣ ತಜ್ಞರು ಭಯಗೊಳ್ಳುವರು. "ಶಿಕ್ಷಣದಲ್ಲಿಯೂ ವೇದಾಂತವೇ" ಎಂದು ಶಂಕಿಸುವರು. ವೇದಾಂತವು ಜೀವನದಿಂದ ಹೊರ ನೂಕಲ್ಪಟ್ಟಿಲ್ಲ. ಶಿಕ್ಷಣಕ್ಕೂ ಜೀವನಕ್ಕೂ ನಿಕಟ ಸಂಬಂಧವಿದ್ದಂತೆ, ಜೀವನಕ್ಕೂ ತತ್ವಜ್ಞಾನಕ್ಕೂ ನಿಕಟ ಸಂಬಂಧವಿದೆ. ವೇದಾಂತವು ಶಿಕ್ಷಣದಲ್ಲಿ ಬೆರೆತರೆ ಹಾಲಿನಲ್ಲಿ ಉಪ್ಪು ಹಾಕಿದಂತಾಗಲಿಲ್ಲ, ಹಾಲಿನಲ್ಲಿ ತುಪ್ಪ ಬೆರೆಸಿದಂತೆ ಅದೆ. ಇದರ ಸತ್ಯತೆಯನ್ನು ಜಗತ್ತಿಗೆ ತೋರಿಸುವುದೇ ಮಹಾತ್ಮಾಜಿಯವರ ವ್ಯವಹಾರಿಕ ಚಾತುರ್ಯವಾಗಿತ್ತು.

ವೇದಗಳ ಅಂತ್ಯದಲ್ಲಿ ಉಪನಿಷತ್ತುಗಳು ಬರುತ್ತಿವೆ.ಅಲ್ಲಿ ಆತ್ಮಜ್ಞಾನದ ನಿರೂಪಣೆಯಿದೆ. ಆತ್ಮಜ್ಞಾನವು ಧರ್ಮದ ರಹಸ್ಯವು. ಆದರಿಂದ ಧರ್ಮವೆಂದರೆ ವೇದಾಂತವೆಂಬ ಅರ್ಥವು ರೂಢವಾಯಿತು. ಕರ್ಮ ಮಾರ್ಗ, ಜ್ಞಾನ ಮಾರ್ಗ ಗಳಿಂದ ಆತ್ಮಜ್ಞಾನ ಪಡೆಯಬಹುದಾಗಿತ್ತು. ಧಾರ್ಮಿಕ ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿದ್ದವು; ಆದರಿಂದ ಸಂಸ್ಕೃತವು ದೇವಭಾಷೆಯಾಯಿತು. ಈ ಭಾಷೆ ಬಲ್ಲವರು ಕಡಿಮೆ ಪ್ರಮಾಣದಲ್ಲಿದ್ದರು. ಅಲ್ಲದೆ, ಪ್ರತಿಯೊಬ್ಬ ಮಾನ ವನಿಗೂ ಧಾರ್ಮಿಕ ಹಕ್ಕುಗಳಿರಲಿಲ್ಲ. ಸ್ತ್ರೀಯಂತೂ ಮಾಯೆಯಾಗಿಯೇ ನಿಂತಳು. ಇಂತಹ ಧರ್ಮ ಕೆಲವರಿಗೆ ಮಾತ್ರ ಸಾಧ್ಯವಾಯಿತು. ಆದರಿಂದ

ವೇದಾಂತವೆಂದರೆ ಸಾಮಾನ್ಯ ಮನುಷ್ಯನಿಗೆ ಇಂದಿಗೂ ತಲೆನೋವು. ಅಷ್ಟು ಬಲವಾಗಿ ಶೃಂಖಲೆಗಳನ್ನು ಹಾಕಿತು ವೇದದ ಕಾಲವು! ಭಗವಾನ್ ಬುದ್ಧನು ಈ ಶೃಂಖಲೆಗಳನ್ನು ಹರಿದೊಗೆದು ಮಾನವನನ್ನು ಬೆಳಕಿಗೆ ತಂದನು. ಪ್ರತಿಯೊಬ್ಬನೂ ಆತ್ಮಜ್ಞಾನ ಪಡೆಯಬಲ್ಲನೆಂದು ಮೊದಲು ಸಾರಿದನು. ಸ್ತ್ರೀಗೂ ಆ ಹಕ್ಕು ಇದೆ ಎಂದು ಪ್ರತಿಪಾದಿಸಿದನು. ತಾಯಿ ನುಡಿಯೇ ದೇವಭಾಷೆಯೆಂದು ತಿಳಿಹೇಳಿದನು. ಈ ಧಾರ್ಮಿಕ ಕ್ರಾಂತಿಯು ಸಾಮಾನ್ಯವಾದುದಲ್ಲ. ಜೀವನದಲ್ಲಿ ಹೊಸ ಹಾದಿಯನ್ನು ತೋರಿಸಿತು. ಧರ್ಮಕ್ಕೆ ವ್ಯಾಪಕ ಸ್ವರೂಪ ಕೊಟ್ಟಿತು. ಆದರೆ ಬುದ್ಧನ ಬೋಧೆಯಿಂದ ಸನ್ಯಾಸಕ್ಕೆ ಪ್ರಾಶಸ್ತ್ಯ ದೊರೆಯಿತು. ಧರ್ಮವು ಜನ ಜೀವನದಿಂದ ದೂರ ಸಿಡಿಯಿತು. ಗೃಹಸ್ಥಾಶ್ರಮಿಗೆ ಮುಕ್ತಿ ಮಾರ್ಗ ದೊರೆಯಲಿಲ್ಲ. ಈ ಕೊರತೆಯನ್ನು ಪೂರೈಸಲು ಮಹಾತ್ಮಾ ಬಸವಣ್ಣನವರು ಅವತರಿಸಿದರು. ಜೀವನವು ನೀರುಗುಳ್ಳೆ, ಸೊಡರುಗಾಳಿ, ಬರಿದಾದ ಕನಸು ಎಂಬ ತಿರಸ್ಕಾರ ಭಾವನೆಯು ದೂರಾಯಿತು. ತುಂಬು ಜೀವನದಿಂದ ಸೌಂದರ್ಯ ಕಾಣುವ ಬಗೆಯನ್ನು ಬಸವಣ್ಣನವರು ತೋರಿಸಿದರು. ಪ್ರಪಂಚದಲ್ಲಿದ್ದುಕೊಂಡು ಶಿವಸಾಯುಜ್ಯ ಹೊಂದುವ ತಿಳಿಹೊಳೆ ಹರಿಸಿದರು. ಈಗ ಮಾತ್ರ ಧರ್ಮವು ಜನಸಾಮಾನ್ಯನ ಮಟ್ಟಕ್ಕಿಳಿಯಿತು. ಮೂಢ ಸಂಪ್ರದಾಯಗಳು ದೂರಾಗಿ, ಸದಾಚಾರಕ್ಕೆ ಮನ್ನಣೆ ದೊರೆಯಿತು. ಸತ್ಯವೇ ಸ್ವರ್ಗ, ದೇವನೊಬ್ಬ ನಾಮ ಹಲವು, ಸಕಲ ಜೀವಾತ್ಮರಿಗೂ ಲೇಸನೇ ಬಯಸುವ ನಮ್ಮ ಕೂಡಲ ಸಂಗಮದೇವ, ದಯವೇ ಧರ್ಮದ ಮೂಲವಯ್ಯ ಇತ್ಯಾದಿ ಮಾತುಗಳಿಂದ ಬಸವಣ್ಣನವರು ಬೋಧಿಸಿದ ಧರ್ಮವು ಮಾನವ ಧರ್ಮವಾಯಿತು. ವಿಶ್ವಧರ್ಮದ ಲಕ್ಷಣಗಳೇ ಅಲ್ಲಿ ಒಡಮೂಡಿದವು. ಧರ್ಮವೇ ಜನಜೀವನದ ಆಧಾರವಾಯಿತು. ಜೀವನದ ಹೊಸ ಹಾದಿಯನ್ನು ತೋರಿಸಿತು. ಹೊಂಬೆಳಕು ಬೀರಿತು. ಜೀವನವು ಸತ್ಯವೂ, ಸುಂದರವೂ ಆಯಿತು. ನೀತಿಶಾಸ್ತ್ರವು ಧರ್ಮದ ತಳಹದಿಯಾಯಿತು. ನಿರ್ಮಲ ಜೀವಿಗಳಿಗೆ ಧರ್ಮದ ತಿರುಳಿನ ಅರ್ಥವಾಗತೊಡಗಿತು. ತನು-ಮನ-ಧನ ಈ ತ್ರಿವಿಧ ದಾಸೋಹವೇ ಸಮಾಜ ಸೇವೆಯ ದರ್ಪಣವಾಯಿತು. ಈ ಸಮಾಜ ಸೇವೆಯಿಂದಲೇ ಶಿವನ ದರ್ಶನವಾಗುವದೆಂಬ ಮಾತೂ ಮನವರಿಕೆಯಾಗತೊಡಗಿತು. ಈಗ

ಧರ್ಮವು ಮಾನವನನ್ನು ಉನ್ನತ ಮಟ್ಟಕ್ಕೆ ಒಯ್ಯುವ ಸಾಧನವಾಯಿತು. ಮಾನವನಿಗೆ ತುಂಬು ಜೀವನದ ಕಲ್ಪನೆಯನ್ನು ಕೊಟ್ಟಿತು. ಸುಂದರಜೀವಿಗಳಾಗಿ ಬಾಳಿ ಬೆಳೆದು ಚಿರಂಜೀವಿಗಳಾಗಿ ಬೆಳಗಬಲ್ಲ ಮಾರ್ಗವನ್ನು ತೋರಿಸಿತು. ಧರ್ಮ, ನೀತಿ, ಸಂಸ್ಕಾರ ಇವು ಜೀವನಕ್ಕೆ ಹೊಸ ಸ್ವರೂಪ ಕೊಟ್ಟವು. ಹೊಸ ಕಳೆಯನ್ನು ತಂದವು. ಅಷ್ಟೇ ಅಲ್ಲ! ಅವು ಮಾನವನ ತುಂಬು ಜೀವನಕ್ಕೆ ಅಗತ್ಯವಾದವು. ಈಗ ವೇದಾಂತವು ವ್ಯವಹಾರಿಕವಾಯಿತು. ಇಂತಹ ವೇದಾಂತವನ್ನು ಮಹಾತ್ಮಾಜಿಯವರು ಬೋಧಿಸಿದರು. ಸತ್ಯವೇ ದೇವರೆಂದೂ ದೇವನೊಬ್ಬನೆಂದೂ, ಅಹಿಂಸೆಯೇ ಸತ್ಯ ಶೋಧನೆಯ ಸಾಧನವೆಂದೂ, ನ್ಯಾಯಮಾರ್ಗವೇ ಅಹಿಂಸೆಯ ಪ್ರತೀಕವೆಂದೂ ತಿಳಿಹೇಳಿ, ಸತ್ಯ, ಅಹಿಂಸೆ, ನ್ಯಾಯ ಈ ತ್ರಿವೇಣಿ ಸಂಗಮದಲ್ಲಿ ಧರ್ಮ, ತತ್ವಜ್ಞಾನ, ನೀತಿಶಾಸ್ತ್ರಗಳ ತ್ರಿಕೂಟ ಸೇರಿಸಿದರು. ಮಾನವಧರ್ಮವೇ ನಿಜವಾದ ಧರ್ಮವು. ತತ್ವಜ್ಞಾನವು ಅದರ ಆಧ್ಯಾತ್ಮಿಕ ಕಣ್ಣು. ನೀತಿಶಾಸ್ತ್ರವು ಅದರ ವ್ಯವಹಾರಿಕ ಕಣ್ಣು, ಮಾನವನ ಜೀವನಕ್ಕೆ ಇವು ಅಗತ್ಯವಾದವುಗಳೇ.

ಮಾನವನ ಒಳ್ಳೆಯ ಜೀವನಕ್ಕೆ ಶಿಕ್ಷಣವೂ ಬೇಕು. ಶಿಕ್ಷಣವೆಂದರೆ ಸಂಸ್ಕಾರ. ನಿತ್ಯಜೀವನದಲ್ಲಿ ಮನುಷ್ಯನಿಗೆ ತನ್ನ ಅನುಭವದ ಮುಖಾಂತರ ಸಂಸ್ಕಾರವಾಗುತ್ತ ಹೋಗುವದೇ ಅವನ ಶಿಕ್ಷಣ. ಅದರಿಂದ ಮನುಷ್ಯನ ಸಾಂಸ್ಕೃತಿಕ ಜೀವನಕ್ಕೆ ಧರ್ಮವೂ ಬೇಕು, ನೀತಿ ಶಾಸ್ತ್ರವೂ ಬೇಕು, ಶಿಕ್ಷಣವೂಬೇಕು. ಮನುಷ್ಯನು ವಿಶ್ವಧರ್ಮಿಯಾಗಿ ಸಚ್ಛೀಲನಾಗಿ, ಸುಸಂಸ್ಕೃತನಾಗಿ ಬಾಳಿ ಬೆಳೆಯಬೇಕೆಂಬುದೇ ಮಹಾತ್ಮಾಜಿಯವರ ಮನೀಷೆಯಾಗಿತ್ತು. ಅವರು ಬೋಧಿಸಿದ ಶಿಕ್ಷಣದ ರೂಪುರೇಷೆಯಲ್ಲಿ ಜೀವನ, ಜೀವನ ಸಿದ್ಧಾಂತವಿದೆ. ಜೀವನದ ಆದರ್ಶವೂ ಶಿಕ್ಷಣದ ಆದರ್ಶವೂ ಒಂದೇ ಗುರಿಗೆ ಮುಟ್ಟುತ್ತವೆ.

**ಡಾ. ಝಾಕೀರ ಹುಸೇನರ ಅಭಿಪ್ರಾಯ:**

ಡಾ. ಝಾಕೀರ ಹುಸೇನರು ಪವಿತ್ರ ಜೀವನವೇ ಹೊಸ ಶಿಕ್ಷಣದ ಗುರಿಯೆಂದು ಕೆಳಗಿನ ಮಾತುಗಳಿಂದ ಸ್ಪಷ್ಟೀಕರಿಸಿದ್ದಾರೆ.

" ಹೊಸ ಶಿಕ್ಷಣವು ಹೊಸ ಜೀವನದ ಕುರುಹು ಆಗಿದೆ. ನೋಡಿದುದೆಲ್ಲ ನಿಚ್ಚಳವಾಗಿ ಕಾಣಿಸುವಂತೆ ಕಣ್ಣುಗಳಿಗೆ ಒಂದು ಬೆಳಕನ್ನು

ಕೊಡುವದು. ಈ ಜೀವನವು ಮನಸ್ಸಿನ ಪವಿತ್ರತೆಯನ್ನೂ ಕೈಗಳ ಕುಶಲತೆ ಯನ್ನೂ ಕೂಡಿಯೇ ಉಂಟುಮಾಡುವದು. ಇದು ಶ್ರಮದ ಬೆವರಿನ ಹನಿಯನ್ನು ಮುತ್ತನ್ನಾಗಿಸುವದು.''

ಈವರೆಗಿನ ಶಿಕ್ಷಣವು ನಮ್ಮ ಸಾಂಸ್ಕೃತಿಕ ಜೀವನಕ್ಕೆ ಹೊಂದಿಕೆ ಯಾಗಿರಲಿಲ್ಲ. ದಾಸ್ಯರಾಷ್ಟ್ರಗಳ ಶಿಕ್ಷಣವೇ ಅದಾಗಿತ್ತು. ಕೇವಲ ನೌಕರಿ ಗಾಗಿ ಶಿಕ್ಷಣವೆಂಬುದೇ ಪ್ರಚಾರವಾಯಿತು. ನಾಗರಿಕತೆಗಾಗಿ ಶಿಕ್ಷಣವೆಂಬ ಅರಿವೇ ಉಂಟಾಗಲಿಲ್ಲ. ವರ್ಧಾ ಶಿಕ್ಷಣವು ರಾಷ್ಟ್ರೀಯ ಶಿಕ್ಷಣವು; ಸ್ವತಂತ್ರ ಭಾರತಕ್ಕೆ ಬೇಕಾದ ಶಿಕ್ಷಣವು. ಜೀವನ ಸನ್ನಿವೇಶಗಳ ಮುಖಾಂತರ ಮಕ್ಕಳನ್ನು ತರಬೇತುಗೊಳಿಸುವ ಶಿಕ್ಷಣವು. ಸುಂದರ ಜೀವನದತ್ತ ಒಯ್ಯುವ ಶಿಕ್ಷಣವು. ಸ್ವಾವಲಂಬಿ ವ್ಯಕ್ತಿಗಳಿಂದ ಕೂಡಿದ ಸುಂದರ ಸಮಾಜವನ್ನು ಕಟ್ಟಲು ಹವಣಿಸುವ ಶಿಕ್ಷಣವು. ಗಾಂಧೀಜಿಯವರ ಜೀವನ ದರ್ಶನದ ಫಲವಾಗಿ ಭಾರತೀಯರ ಶಿಕ್ಷಣದ ಧ್ಯೇಯ-ಧೋರಣ ಗಳಲ್ಲಿ ಹೊಸ ದೃಷ್ಟಿಯು ಹೊರಸೂಸಿತು. ಶಿಕ್ಷಣದ ವ್ಯಾಪ್ತಿ, ಪಾಠ ಕ್ರಮ, ಕಲಿಸುವ ಕ್ರಮ, ಶಾಲೆಯ ಶಿಸ್ತು, ಶಿಕ್ಷಕರ ಕರ್ತವ್ಯ, ಪಾಲಕರ ಹೊಣೆ, ಸರಕಾರದ ಕಾರ್ಯಕ್ರಮ, ಇತ್ಯಾದಿಗಳೆಲ್ಲವೂ ಆದರ್ಶ ಜೀವನಕ್ಕೆ ಹೊಂದಿಕೆಯಾಗುವ ರೀತಿಯಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಆದುದರಿಂದಲೇ ಗಾಂಧೀಜಿಯವರು 'ನಯೀ ತಾಲೀಮ' ಎಂದು ಕರೆದಿದ್ದಾರೆ.

---

# ೪. ಹೊಸ ಶಿಕ್ಷಣದ ವೈಶಿಷ್ಟ್ಯಗಳು.

ಮೂಲ ಶಿಕ್ಷಣವು ಭಾರತೀಯರಿಗೆ ಹೊಸತು. ಅದು ಹಿಂದುಸ್ತಾನದ ಶಿಕ್ಷಣ ವಿಷಯದಲ್ಲಿ ಹೊಸ ದಾರಿಯನ್ನು ತೋರಿದೆ. ಜಗತ್ತಿನ ಶಿಕ್ಷಣ ತಜ್ಞರ ಇಂದಿನ ವಿಚಾರಗಳನ್ನೆಲ್ಲ ಸೂಕ್ಷ್ಮವಾಗಿ ಸೇರಿಸಿಕೊಂಡು, ತನ್ನದೇ ಆದ ವೈಶಿಷ್ಟ್ಯವನ್ನು ಕಾಯ್ದುಕೊಂಡು, ಜಗತ್ತಿಗೆ ಮುನ್ನೋಟ ಬೀರುತಿದೆ. ಮುನ್ನಡೆಗೆ ಕಾರಣವಾಗುತಿದೆ. ಇನ್ನು ಈ ಹೊಸ ಶಿಕ್ಷಣದ ಕೆಲ ವೈಶಿಷ್ಟ್ಯಗಳನ್ನು ಇಲ್ಲಿ ವಿವರಿಸುವ.

**ಶಿಶುಕೇಂದ್ರ ಶಿಕ್ಷಣ:**

ಇದು ಮಕ್ಕಳ ಯುಗವು. ಶಿಕ್ಷಣ ಪ್ರಪಂಚವೆಲ್ಲ ಮಗುವಿಗೆ ಸಂಬಂಧಿಸಿದೆ. ಮಗುವಿನ ವಯೋಮಾನ, ಬುದ್ಧಿಮಾನ ಹಾಗೂ ವಾತಾವರಣ ಇವುಗಳಿಗೆ ಹೊಂದಿಕೆಯಾಗುವ ವಿಷಯಗಳನ್ನು ಮಾತ್ರ ಅವನು ಅರಗಿಸಿಕೊಳ್ಳಬಲ್ಲನು. ಅವನಿಗೆ ಬೇಕಾದ ರೀತಿಯಲ್ಲಿ ಕೊಟ್ಟರೆ ಮಾತ್ರ ಅವನಿಗೆ ತೀವ್ರ ಗ್ರಾಹ್ಯವಾಗುವದು. ಶಾಲೆಯ ವ್ಯವಸ್ಥೆ, ಮಗುವಿನ ಕಾರ್ಯ ನಿರೀಕ್ಷಣೆ, ಮೇಲ್ವಿಚಾರಣೆ ಇತ್ಯಾದಿ ಕೆಲಸಗಳೆಲ್ಲವೂ ಅವನ ಸಮವಾಯ ವಿಕಾಸಕ್ಕೆ ಸಹಾಯಕವಾಗಬೇಕು. ರೂಸೋನ ಕಾಲದಿಂದ ಈ ವಿಚಾರಗಳು ಪ್ರಚಾರವಾದರೂ, ಈವರೆಗೂ ಅವು ಪರಿಣಾಮಕಾರಕವಾಗಿ ಕಾರ್ಯ ರಂಗಕ್ಕಿಳಿಯಲಿಲ್ಲ. ಪೆಸ್ಟಾಲಝಿಯು ಶಿಕ್ಷಣವನ್ನು ಮನಶಾಸ್ತ್ರಾನುಗಾಮಿಯಾಗಿ ಮಾಡಲು ಹವಣಿಸಿದನು. ಶೈಕ್ಷಣಿಕ ಗ್ರಂಥಗಳಲ್ಲಿ ಮಾತ್ರ ಇದರ ಮಹತಿಯನ್ನು ತೋರಿಸಲಾಗಿದೆ. ಪ್ರತ್ಯಕ್ಷ ಕಾರ್ಯದಲ್ಲಿ ಅದು ಇನ್ನೂ ಪೂರ್ಣ ಪರಿಣಮಿಸಿಲ್ಲ. ಇದು ಶಿಕ್ಷಣದಲ್ಲಿ ಅತ್ಯಂತ ಮಹತ್ವದ ವಿಷಯವಾಗಿದೆ. ಅದರಿಂದ ನಯೀ ತಾಲೀಮ ಮಗು ಮಧ್ಯಗಾಮಿ ಶಿಕ್ಷಣ ತತ್ತ್ವಕ್ಕೆ ಅಗ್ರಸ್ಥಾನ ಕೊಟ್ಟಿದೆ. ಮಗುವಿಗಾಗಿ ಶಿಕ್ಷಣ ಎಂಬುದು ಮೂಲ ಶಿಕ್ಷಣದ ಮೊದಲ ಮೆಟ್ಟಲು.

**ಮಗುವಿನ ವಿಕಾಸದಲ್ಲಿ ಶ್ರದ್ಧೆ:**

ಬಾಲಕನು ತನ್ನ ಶಿಕ್ಷಣ ವಿಧಾನದಲ್ಲಿ ಶಾರೀರಕ–ಬೌದ್ಧಿಕ–ನೈತಿಕ ಸಾಂಸ್ಕೃತಿಕ ಬೆಳವಣಿಗೆಯನ್ನು ಹೊಂದುತ್ತ ಸಾಗುವನೆಂಬುದನ್ನು ಲಕ್ಷ್ಯದಲ್ಲಿಡಬೇಕು. ಇದು ಶಿಕ್ಷಕನ ಆದ್ಯ ಕರ್ತವ್ಯವು. ಬಾಹ್ಯ ಜಗತ್ತಿನ ಜ್ಞಾನವನ್ನು ಸ್ವಂತ ಅನುಭವದಿಂದ ಬಾಲಕನು ದೊರಕಿಸುವನೇ ಹೊರತು ಹೊತ್ತಿಗೆಗಳಿಂದಲ್ಲ; ಶಿಕ್ಷಕನ ಕಲಿಸುವಿಕೆಯಿಂದಲೂ ಅಲ್ಲ. ಯಾವುದೊಂದು ಕಾರ್ಯವನ್ನು ಮಾಡುವಾಗ ಅವನು ಹೊಸ ಹೊಸ ಅನುಭವಗಳನ್ನು ಹೊಂದುವನು. ಅನುಭವದ ಅಣುಗಳು (Engrams) ಮನಸ್ಸಿನ ಶಾಶ್ವತ ಭಾಗವಾಗಿ ಉಳಿಯುವವು. ಅವನ ನಿತ್ಯ ಜೀವನದಲ್ಲಿ ಪ್ರತಿಕ್ಷಣದಲ್ಲಿಯೂ ಹೊಸ ಅನುಭವಾಂಶಗಳು ಸಂಕಲನವಾಗುವವು; ಅರ್ಥಾತ್ ಅವನು ಹೊಸ ಸಂಗತಿಗಳನ್ನು ಕಲಿಯುವನು. ಹೀಗೆ ಅವನ ಅನುಭವಮಾಲೆ ಬೆಳೆಯುವದು: ಅವನೂ ಬೆಳೆಯುವನು. ಅವನ ಶಿಕ್ಷಣವು ವೃದ್ಧಿ ಹೊಂದುವದು; ಅವನೂ ವೃದ್ಧಿ ಹೊಂದುವನು. ಅವನು ಬೆಳೆಯುತ್ತ ಹೋದಂತೆ ಹೊಸ ಅನುಭವಗಳನ್ನು ಸಂಗ್ರಹಿಸುವನು, ಸಂಸ್ಕಾರ ಹೊಂದುವನು. ಶಿಕ್ಷಣವೆಂದರೆ ಸಂಸ್ಕಾರ, ಇಲ್ಲವೆ ಅನುಭವದ ಸಾರ ಎಂದು ನಯೀ ತಾಲೀಮು ಸಾರುವದು. ಶಿಕ್ಷಣವು ಹುಟ್ಟಿದಂದಿನಿಂದ ಆರಂಭವಾಗಿ ಮರಣಾಂತ್ಯದ ವರೆಗೆ ಸಾಗುವ ವಿಧಾನವು. ಶಿಕ್ಷಣವು ಶಾಲೆಯ ಮೀಸಲು ಅಲ್ಲ, ಶಿಕ್ಷಕನ ಸೊತ್ತು ಅಲ್ಲ, ಬಾಲಕನ ಅನುಭವಾಮೃತವು. ಇದುವೇ ಮೂಲ ಬೀಜವು. ಬಾಲಕನ ಆಟ ನೋಟ, ಕೃತಿಗಳಲ್ಲಿಯೇ ಅವನ ಶಾರೀರಿಕ–ಬೌದ್ಧಿಕ–ನೈತಿಕ ವಿಕಾಸದ ಬೀಜಗಳು ಅಂಕುರಿಸುವವು. ಶಿಕ್ಷಕನ ಮಾರ್ಗದರ್ಶಿತ್ವದಲ್ಲಿ ಅವು ಮೊಳಕೆಯೊಡೆದು, ಸಸಿಗಳಾಗಿ ಬೆಳೆದು, ಮುಂದೆ ಫಲಗಳನ್ನು ಕೊಡುವವು. ಶಿಕ್ಷಕನು ಕಲಿಸಲಿ ಬಿಡಲಿ, ಬಾಲಕನು ಶಾಲೆಗೆ ಹೋಗಲಿ ಬಿಡಲಿ, ತನ್ನ ಜೀವನದಲ್ಲಿ ಅನುಭವಗಳನ್ನು ಗಳಿಸುತ್ತ ಸಾಗುವನು. ತತ್ಪರಿಣಾಮವಾಗಿ ಮಾರ್ಪಾಡು ಹೊಂದುವನು. ಒಂದು ಸಸಿಯು ನಿಸರ್ಗದ ನಿಯಮಗಳಿಗನುಸರಿಸಿ ತಾನೇ ಬೆಳೆಯುವದು. ಆದರೆ ತೋಟಿಗನು ಅದಕ್ಕೆ ಬಾಧಕವಾಗುವ ಸನ್ನಿವೇಶಗಳನ್ನು ಕಿತ್ತೊಗೆದು, ಸಾಧಕವಾಗುವ ಸನ್ನಿವೇಶಗಳನ್ನು ಒದಗಿಸಿ ಕೊಟ್ಟರೆ, ಅದು ಉತ್ತಮ ರೀತಿಯಿಂದ ಬೆಳೆಯುವದು; ಉತ್ತಮ

ಫಲಗಳನ್ನು ಕೊಡುವದು. ಆದುದರಿಂದ ಶಿಕ್ಷಕನೊಬ್ಬ ತೋಟಿಗನು, ಮಗುವು ಒಂದು ಸಸಿ ಎಂದು ಫ್ರೊಬೆಲ್‌ನು ವಿವರಿಸಿದ್ದಾನೆ. ಸಸಿಯ ಆಕಾರ ಮಾನದಿಂದ ಬೆಳೆಯುವದು; ಆದರೆ ಮಗುವು ದೇಹದಿಂದ ಮಾತ್ರ ಬೆಳೆಯುವದಿಲ್ಲ, ಅವನ ಬುದ್ಧಿಯೂ ವಿಕಾಸವಾಗುವದು. ಸಾಮಾಜಿಕ ಸಂಪರ್ಕದಿಂದ ಅವನ ನೀತಿಯೂ ಬೆಳೆಯುವದು. ಈ ತ್ರಿವಿಧ ರೂಪವನ್ನು ಅನುಲಕ್ಷಿಸಿ ಮಗುವಿನ ಇಡೀ ಬೆಳವಣಿಗೆಯನ್ನು ನಿರ್ದೇಶಿಸಬೇಕು. ಮೇಲಿನ ಮಾತುಗಳಿಂದ ಮಗುವಿನ ವಿಕಾಸ, ಶಿಕ್ಷಣ ವಿಧಾನ, ಇವುಗಳ ಅನ್ಯೋನ್ಯ ಸಂಬಂಧವು ಪುಷ್ಪ ಪರಿಮಳದ ಬೆರಿಕೆಯಂತಿದೆ ಎಂಬುದು ಸ್ಪಷ್ಟವಾಗುವದು. ಅದು ಕಾರಣ ಶಿಕ್ಷಕನು ಮಗುವಿನ ಸಮವಾಯ ವಿಕಾಸದಲ್ಲಿ ಶ್ರದ್ಧೆ ಇಡಬೇಕೆಂದು ನಯೀ ತಾಲೀಮು ಸಾರುತಿದೆ.

**ಶಿಕ್ಷಣದಲ್ಲಿ ಸ್ವಾಂತತ್ರ್ಯ:**

ಮಗುವಿಗೆ ಅನುಭವ ಪಡೆಯಲು ಪೂರ್ಣ ಸ್ವಾತಂತ್ರ್ಯವಿರಬೇಕು. ಮಗುವಿನ ಬೆಳವಣಿಗೆಗೆ ಸ್ವಾತಂತ್ರ್ಯದ ವಾತಾವರಣವು ಅಗತ್ಯವೆಂದು ನಯೀ ತಾಲೀಮು ನಂಬುತ್ತದೆ. ಈಗ ಓದು ನಾಳೆ ಬರೆ ಎಂಬ ಅಪ್ಪಣೆಗಳು ಮಗುವಿಗೆ ಸೇರುವದಿಲ್ಲ. ಓದು–ಬರೆಹ ಕೆಲಸಗಳನ್ನು ಮಕ್ಕಳು ಒಲುಮೆಯಿಂದ ಮಾಡುವದಿಲ್ಲ; ಜುಲುಮೆ ಬೇಕು. ಪರರ ಜುಲುಮೆಯಿಂದ ಮಾಡಿದ ಕೆಲಸದಲ್ಲಿ ಮಕ್ಕಳು ಆಸ್ಥೆ ತೋರುವದಿಲ್ಲ. ಅನುಭವ ಹೊಂದಲು ಹವಣಿಸುವದಿಲ್ಲ. ಆದ್ದರಿಂದ ಕೇವಲ ಪುಸ್ತಕೀಯ ವಿದ್ಯೆಯು ನಿಜವಾದ ಜ್ಞಾನಾರ್ಜನೆಗೆ ಸಹಾಯಕವಾಗುವದಿಲ್ಲ. ಹೊತ್ತಿಗೆಗಳ ಬದಲು ಕೃತಿಗಳು ಬೇಕು. ಕೃತಿಗಳಲ್ಲಿ ಮಕ್ಕಳ ಸ್ವಾಭಾವಿಕ ಪ್ರೇಮವಿದೆ. ಕೃತಿಗಳನ್ನು ಮಾಡುತ್ತ ಅನೇಕ ಅನುಭವಗಳನ್ನು ಪಡೆಯುವರು. ಕೃತಿಗಳನ್ನು ಮಾಡುವಾಗಲೂ ಮಕ್ಕಳಿಗೆ ಸ್ವಾತಂತ್ರ್ಯದ ವಾತಾವರಣವಿರಬೇಕು. ಕೃತಿ ಮೂಲಕ ಶಿಕ್ಷಣದಲ್ಲಿ ಮಕ್ಕಳು ಆಸಕ್ತಿ ತೋರಿಸುವರು: ಸ್ವಂತ ಅನುಭವಗಳನ್ನು ಗಳಿಸುವರು. ಅವರು ಕೆಲಸ ಮಾಡುವಾಗ ಶಿಕ್ಷಕನು ತಪ್ಪುಗಳನ್ನು ತಿದ್ದುವನು; ಅವನು ಅವರ ಜ್ಞಾನಾರ್ಜನೆಯ ಮಾರ್ಗದರ್ಶಕನಾಗುವನು. ಒಮ್ಮೊಮ್ಮೆ ಮಕ್ಕಳು ಕೆಲಸ ಮಾಡಲು ಬೇಸರಿಯುವರು. ಆಗ ಅವರಿಗೆ ಕೆಲಸ ಮಾಡಲಿಕ್ಕೆ ಒತ್ತಾಯ ಮಾಡಬಾರದು;

ತಾವೇ ಮತ್ತೆ ಕೆಲಸದಲ್ಲಿ ತೊಡಗುವ ವಾತಾವರಣವನ್ನುಂಟುಮಾಡಬೇಕು. ಸಮಾಜದ ಮೂಢ ರೂಢಿಗಳಿಂದ ದೂರಿರಲು ಸ್ವಾತಂತ್ರ್ಯವಿರಬೇಕು. ಸ್ವತಂತ್ರ ರೀತಿಯಿಂದ ವಿಚಾರಿಸಲು ಸನ್ನಿವೇಶಗಳನ್ನು ಒದಗಿಸಿಕೊಡಬೇಕು. ಮಕ್ಕಳು ತಮ್ಮ ಶಾಲೆಯ ಕೆಲಸಗಳನ್ನೆಲ್ಲ ತಾವೇ ನಿರ್ವಹಿಸಿಕೊಂಡು ಹೋಗುವಂತೆ ವ್ಯವಸ್ಥೆ ಇರಬೇಕು. ಸ್ವಚ್ಛತಾ ಮಂತ್ರಿ, ವರ್ಗದ ಮಂತ್ರಿ, ಆಟದ ಮಂತ್ರಿ ಇತ್ಯಾದಿ ನಾಯಕರನ್ನಾರಿಸಿ, ಅವರಿಂದಲೇ ಶಾಲೆಯ ಕೆಲಸವನ್ನು ನಡೆಯಿಸಬೇಕು. ದಿನವೂ ಶಿಕ್ಷಕನು ಮಕ್ಕಳಿಗೆ ಹೀಗೆ ಮಾಡಬೇಕು, ಹಾಗೆ ಮಾಡಬೇಕು ಎಂಬ ಹುಕುಮುಗಳನ್ನು ಕೊಡಬಾರದು. ತಮ್ಮ ನಿತ್ಯದ ಕೆಲಸವನ್ನು ಮಕ್ಕಳು ಜವಾಬ್ದಾರಿಯನ್ನರಿತು ತಾವೇ ಆರಿಸಿಕೊಳ್ಳುವಂತೆ ಮಾಡಬೇಕು. ಇದರಿಂದ ನಾಯಕತ್ವದ ತರಬೇತು ಮಕ್ಕಳಿಗೆ ದೊರೆಯುವದು. ಅಲ್ಲದೆ ಅವರಲ್ಲಿ ಕಾರ್ಯದ ಅರಿವು ಉಂಟಾಗುವದು. ಸ್ವಶಿಸ್ತು ಹುಟ್ಟುವದು. ಆಧುನಿಕ ಶಿಕ್ಷಣ ತಜ್ಞರು ಸ್ವಶಿಸ್ತಿಗೆ ಬಹಳ ಮಹತ್ವ ಕೊಟ್ಟಿದ್ದಾರೆ. ಮಕ್ಕಳು ಸಹಕಾರದಿಂದ, ಪ್ರೇಮದಿಂದ, ಸ್ವಯಂ ಸ್ಫೂರ್ತಿಯಿಂದ ಕೆಲಸಮಾಡುವರು. ಅನುಭವ ಪಡೆಯುವರು; ಸಂಸ್ಕಾರ ಹೊಂದುವರು. ಪರೀಕ್ಷೆಗಳ ಪಾಶದಿಂದ ಬಾಲಕರನ್ನು ವಿಮುಕ್ತ ಮಾಡಬೇಕು. ಬಾಲಕರ ರಚನಾತ್ಮಕ ಕಾರ್ಯಪ್ರವೃತ್ತಿ, ಪ್ರೇರಣೆ, ಪೋಷಣೆಗಳಿಗೆ ಸ್ವಾತಂತ್ರ್ಯವಾತಾವರಣವು ಅತ್ಯಂತ ಅಗತ್ಯವು. ನಯೀ ತಾಲೀಮು ಶಿಕ್ಷಕರ ಕಾರ್ಯದಲ್ಲಿಯೂ ಸ್ವಾತಂತ್ರ್ಯವನ್ನು ಕೊಟ್ಟಿದೆ. ವೇಳಾಪತ್ರಿಕೆಯ ಒತ್ತಾಯವಿಲ್ಲ. ಬಾಲಕರ ಒಲವುಗಳಿಗನುಸರಿಸಿ, ನೈಸರ್ಗಿಕ ಪರಿಸ್ಥಿತಿಗನುಸರಿಸಿ ದಿನದ ಕಾರ್ಯವನ್ನು ಬದಲಿಸಬಹುದು. ಅಲ್ಲಿ ಉನ್ನತ ಮಟ್ಟದ ಸ್ವಾತಂತ್ರವು ಬೇಕೇ ಬೇಕು.

**ವೈಯಕ್ತಿಕತೆ:**

ಸ್ವಾತಂತ್ರ್ಯದ ವಾತಾವರಣದಲ್ಲಿ ಬೆಳೆಯುವ ಮಕ್ಕಳು ಸ್ವತಂತ್ರ ರೀತಿಯಿಂದ ಕೆಲಸ ಮಾಡುವರು. ಸ್ವಬುದ್ಧಿ, ಸ್ವಾನುಭವಗಳನ್ನು ಬಳಸಿ ಬೆಳೆಯುವರು. ಒಂದು ವರ್ಗದ ಎಲ್ಲ ಮಕ್ಕಳು ಒಂದೇ ತೆರನಾಗಿ ಕೆಲಸ ಮಾಡುವದಿಲ್ಲೆಂದು ಮನಃಶಾಸ್ತ್ರವೂ ಹೇಳುತಿದೆ. ಒಂದು ವರ್ಗದಲ್ಲಿಯ ಮಕ್ಕಳನ್ನು ಕೆಲ ನಿಮಿಷ ನಿರೀಕ್ಷಿಸಬೇಕು. ಕೆಲವರು ಹೊಸ ಸಂಗತಿಗಳನ್ನು

ತೀವ್ರ ಗ್ರಹಿಸುವರು; ಕೆಲವರು ತಮ್ಮ ಕೆಲಸದಲ್ಲಿ ನಿರುತ್ಸಾಹ ತೋರಿ ಸುವರು; ಕೆಲವರು ಶೋಧಕ ಪ್ರವೃತ್ತಿಯನ್ನು ತೋರಿಸುವರು. ಎಲ್ಲರೂ ಒಂದು ವಿಷಯವನ್ನು ನಿರ್ದಿಷ್ಟ ಸಮಯದಲ್ಲಿ ಅಷ್ಟೇ ಪ್ರಮಾಣದಲ್ಲಿ ಕಲಿಯುವದಿಲ್ಲ. ಆಧುನಿಕ ಮನಃಶಾಸ್ತ್ರಜ್ಞರು ಮಕ್ಕಳಲ್ಲಿ ಕಂಡುಬರುವ ಅನೇಕ ಭಿನ್ನತೆಗಳನ್ನು (Individual differences) ಪರೀಕ್ಷಿಸಿ ದ್ದಾರೆ. ಬುದ್ಧಿ, ಸ್ವಭಾವ, ಒಲವುಗಳು, ಪ್ರಾಕೃತಿಕ ಹಾಗೂ ಸಾಮಾಜಿಕ ವಾತಾವರಣಗಳಲ್ಲಿ ವ್ಯಕ್ತವಾಗುವ ಪ್ರತಿಕ್ರಿಯೆಗಳು ಇತ್ಯಾದಿಗಳಲ್ಲಿ ಮಕ್ಕಳು ಭಿನ್ನತೆ ತೋರಿಸುವರು. ಒಬ್ಬನಂತೆ ಮತ್ತೊಬ್ಬನು ವರ್ತಿಸುವದಿಲ್ಲ. ಒಂದು ಕಾರ್ಯದಲ್ಲಿ ತೊಡಗಿದಾಗ, ಕೆಲವರು ಯಾಂತ್ರಿಕವಾಗಿ ಕೆಲಸ ಮಾಡುವರು. ಕೆಲವರು ಪ್ರತಿ ನಿಮಿಷ ಹೊಸ ಅನುಭವ ಗಳಿಸಲು ಹವಣಿ ಸುವರು; ಕೆಲವರು ತಾವು ಉಪಯೋಗಿಸುತ್ತಿರುವ ಸಾಧನವನ್ನು ಬಿಚ್ಚು ವದು, ಹೊಂದಿಸುವದು ಇಂಥ ಕೆಲಸಗಳಲ್ಲಿ ತೊಡಗುವರು; ಕೆಲವರು ಕೆಲಸ ಮಾಡುತ್ತ ಮಾಡುತ್ತ ಹೊಸ ಹೊಸ ಸಾಧನಗಳನ್ನು ಶೋಧಿಸು ವರು; ಇಲ್ಲವೆ ಹೊಸ ತತ್ತ್ವಗಳನ್ನು ಕಂಡು ಹಿಡಿಯುವರು. ಪ್ರತಿಯೊಬ್ಬ ಮಗುವಿನಲ್ಲಿ ರಚನಾತ್ಮಕ ಪ್ರವೃತ್ತಿಯು ಒಂದಿಲ್ಲೊಂದು ರೂಪದಲ್ಲಿ ವ್ಯಕ್ತ ವಾಗುತ್ತದೆ. ಯೋಗ್ಯ ಸನ್ನಿವೇಶಗಳನ್ನು ಒದಗಿಸಿ ಕೊಟ್ಟಲ್ಲಿ ಸಾಧಾರಣ ಬಾಲಕರು ಸಹ ತಮ್ಮಲ್ಲಿ ಅಸಾಧಾರಣ ಬುದ್ಧಿ ಹುದುಗಿದೆ ಎಂಬುದನ್ನು ಕಂಡುಕೊಳ್ಳುವರು. ಅಸಾಧಾರಣ ಬುದ್ಧಿ ಪ್ರಚೋದನೆಗೆ ಸುಸಂಧಿಯು ಪ್ರತಿಯೊಬ್ಬ ಮಗುವಿಗೆ ದೊರೆಯಬೇಕು. ಮೊದಲು ಪ್ರತಿಯೊಬ್ಬ ಬಾಲಕನಿಗೂ ಆದರ ಕೊಡಬೇಕು; ತನ್ನ ಬುದ್ಧಿ ಬಲಗಳಿಗನುಸರಿಸಿ ಬೆಳೆ ಯಲು ಅವಕಾಶ ಕೊಡಬೇಕು; ಎಂದರೆ ಮಕ್ಕಳಲ್ಲಿ ಅಡಗಿದ ವೈಯಕ್ತಿ ಕತೆಯು (Individuality) ಪ್ರಜ್ವಲಿಸುವದು. ರಚನಾತ್ಮಕ ಕಾರ್ಯ ಗಳು ಹೊರಬೀಳುವವು. ಪ್ರತಿಭಾ ಸಂಪನ್ನರು ಬೆಳಕಿಗೆ ಬರುವರು. ಇದ ರಿಂದ ವ್ಯಕ್ತಿಯ ಪ್ರತಿಭೆ ಸಮಾಜದ ಮೇಲೆ ಉತ್ತಮ ಪರಿಣಾಮವನ್ನುಂಟು ಮಾಡುವದು. ಸಮಾಜವೂ ಮುನ್ನಡೆಯುವದು. ಆದುದರಿಂದ ಶಿಕ್ಷಕನು ಪ್ರತಿಯೊಬ್ಬ ಮಗುವಿಗೆ ಲಕ್ಷ್ಯಪೂರೈಸಬೇಕು. ವರ್ಗ ಶಿಕ್ಷಣದ ಹಾನಿಯನ್ನು ತೋರಿಸಿ, ವೈಯಕ್ತಿಕ ಶಿಕ್ಷಣದ ಮಹತ್ವವನ್ನು ನಾರ್ಮನ್ ಮ್ಯಾಕ್‌ಮನ್‌ರು

ವಿವರಿಸಿದ್ದಾರೆ. ಪ್ರೋಕ್ರಸ್ಟಸ್‌ನ ಹಾಸಿಗೆಯಂತೆ ಮಕ್ಕಳನ್ನು ಒಂದೇ ಅಳ ತೆಗೋಲಿನಿಂದ ಅಳೆಯಕೂಡದು. ಅಂಗ ಹೀನರಿಗೂ, ಬುದ್ಧಿ ಮಾಂದ್ಯರಿಗೂ ಪ್ರತ್ಯೇಕ ಸಾಲೆಗಳು ಬೇಕು. ವೈಯಕ್ತಿಕ ಲಕ್ಷ್ಯದ (Individual attention) ಪರಿಣಾಮವಾಗಿ, ಅಸಾಧಾರಣ ಬುದ್ಧಿಯುಳ್ಳವರೂ, ಪ್ರತಿಭಾಶಾಲಿಗಳೂ ಆದ ವ್ಯಕ್ತಿಗಳು ತಯಾರಾಗುವರು. ವರ್ಗ ಶಿಕ್ಷಣಕ್ಕಿಂತ ವ್ಯಕ್ತಿ ಶಿಕ್ಷಣ ಮಿಗಿಲೆಂದೂ, ಮಕ್ಕಳಲ್ಲಿ ಕಂಡುಬರುವ ಭಿನ್ನತೆಗಳನ್ನು ಅಭ್ಯಸಿಸಿ, ವ್ಯಕ್ತಿತ್ವವು ವಿಕಸಿತವಾಗುವ ಸನ್ನಿವೇಶಗಳನ್ನು ಒದಗಿಸಿ ಕೊಡಬೇಕೆಂದೂ, ದೊಡ್ಡವರಾದ ಮೇಲೆ ಅವರ ಒಲವು-ನಿಲವುಗಳಿಗನುಸರಿಸಿ ವಿಶೇಷ ಸಾಲೆಗಳ (Special Schools) ಏರ್ಪಾಡು ಮಾಡಬೇಕೆಂದೂ ನಯೀ ತಾಲೀಮು ಸಾರುತಿದೆ.

**ರಚನಾತ್ಮಕ ಕಾರ್ಯದಲ್ಲಿ ಆನಂದ:**

ಕೆಲ ಜನರು ತಮ್ಮ ಇಚ್ಛಿತ ವಸ್ತುಗಳನ್ನು ಸಂಗ್ರಹಿಸಿ ಸೌಖ್ಯ ಹೊಂದುವರು. ಕೆಲವರು ಸ್ವಾರ್ಥಕ್ಕಾಗಿ ಪರರನ್ನು ಸುಲಿದು ಬಲಿಷ್ಠರಾಗುವರು. ಕೆಲವರು ಪರರನ್ನು ತಮ್ಮ ಆಧೀನದಲ್ಲಿಟ್ಟುಕೊಂಡು ಸಮಾಧಾನ ಪಡೆಯುವರು. ಇವು ಯೋಗ್ಯ ಮಾರ್ಗಗಳಲ್ಲ; ಹಿಂಸಾತ್ಮಕ ಮಾರ್ಗಗಳು. ನಯೀ ತಾಲೀಮ ಅಹಿಂಸಾತ್ಮಕ ಮಾರ್ಗಗಳನ್ನು ಬೋಧಿಸುತ್ತದೆ. ಆನಂದವನ್ನು ಹೊಂದುವದು ನ್ಯಾಯಮಾರ್ಗದಿಂದಲೇ. ಬಾಲ್ಯಾವಸ್ಥೆಯಲ್ಲಿ ಈ ಬೀಜವನ್ನು ಅಂಕುರಿಸಬೇಕು. ಆರಂಭದಲ್ಲಿಯೇ ನಿಜವಾದ ಆನಂದದ ಕಲ್ಪನೆಯು ಮಕ್ಕಳಲ್ಲಿ ಅಂಕುರಿಸಬೇಕು. ಮಕ್ಕಳು ಕೃತಿ–ಪ್ರೇಮಿಗಳು. ಒಳ್ಳೇ ಉತ್ಸಾಹದಿಂದ ಕೆಲಸದಲ್ಲಿ ತೊಡಗುವರು. ಯಶಸ್ಸು ದೊರೆತಂತೆ ಸಮಾಧಾನ ಹೊಂದುವರು. ಮಾಡುತ್ತ ಮಾಡುತ್ತ ರಚನಾ ಪ್ರವೃತ್ತಿ ಪ್ರಚೋದನೆಯಾಗಿ ಕಲಾಕೃತಿ ಹೊರಬೀಳುವದು. ಆದರಿಂದ ಆನಂದವು ಹೊರಸೂಸುವದು. ರಚನಾತ್ಮಕ ಕಾರ್ಯವು ನೈಜವಾದ ಆನಂದದ ಮೂಲವು. ಶಾಲೆಯಲ್ಲಿ ರಚನಾತ್ಮಕ ಕೃತಿಗಳಿಗೆ ಸಾಕಷ್ಟು ಸನ್ನಿವೇಶಗಳನ್ನು ಕಲ್ಪಿಸಿ ಕೊಡಬೇಕು. ಸಾಹಿತ್ಯ, ಕಲೆ, ಕೈಗಾರಿಕೆ, ಸಮಾಜಸೇವೆ ಇತ್ಯಾದಿ ಮಾರ್ಗಗಳಲ್ಲಿ ರಚನಾ ಪ್ರವೃತ್ತಿಯು ವ್ಯಕ್ತವಾಗುವದು. ಕಲಾಕೃತಿ ಮೂಲಕ ಆನಂದ ಹೊಂದಲು ಮಕ್ಕಳಿಗೆ ನಯೀ ತಾಲೀಮ ಆವಕಾಶ ಕೊಡುವದು.

ಪ್ರಚಲಿತ ಶಿಕ್ಷಣದಲ್ಲಿ ಈ ತರದ ಸುಸಂಧಿಗಳು ಕಡಿಮೆ; ಅದರ ಪರಿಣಾಮ
ವಾಗಿ ಮಕ್ಕಳು ಹೊಟ್ಟೆಗೆಯ ಹುಳಗಳಾಗುವರೇ ಹೊರತು ಕೃತಿಶಾಲಿಗಳಾ
ಗುವದಿಲ್ಲ; ಅವರಿಗೆ ನೈಜವಾದ ಆನಂದವನ್ನು ಕೊಡುವ ವಾತಾವರಣವಿಲ್ಲ.
"ಆನಂದವು ನಿಸರ್ಗಪ್ರೋತ್ಸವ ಮುದ್ರೆ," ಎಂದು ಬರ್ಗಸನ್ ಅಂದಿರುವರು.
ಈ ಮುದ್ರೆಯು ಪ್ರತಿಯೊಂದು ರಚನಾತ್ಮಕ ಕಾರ್ಯದಲ್ಲಿ ಒಡಮೂಡುವದು.
ಆದುದರಿಂದ ಮಕ್ಕಳಿಗೆ ಹೆಜ್ಜೆಹೆಜ್ಜೆಗೆ ನೈಜವಾದ ಆನಂದವನ್ನುಂಟು
ಮಾಡುವ ರಚನಾತ್ಮಕ ಕಾರ್ಯಗಳನ್ನು ನಯೀ ತಾಲೀಮ ಅಳವಡಿಸಿ ಕೊಡು
ತ್ತಿದೆ. ಮಕ್ಕಳು ನಗುತ್ತ ಆಲಿಯಬೇಕು; ನಗುತ್ತ ಕೆಲಸ ಮಾಡಬೇಕು;
ಮಾಡುತ್ತ ಅನುಭವ ಗಳಿಸಬೇಕು; ಅನುಭವ ಗಳಿಸಿದಂತೆ ನಗು ಹೊರ
ಸೂಸಬೇಕು. ಇದುವೇ ಆನಂದ ಸಾಗರ. ಬಾಲಕರ ಜೀವನ ನೌಕೆ ತೇಲು
ತಿದೆ ಅಲ್ಲಿ; ಶಿಕ್ಷಕನು ಬಾಲಕರ ಜೊತೆಗೆ ನಕ್ಕು ನಲಿಯುತಿರುವನು. ಇದು
ಬಾಪೂಜಿಯ ಕನಸೋ! ನನಸೋ! ಮುಂದಿನ ಸಮಾಜ ನಿರ್ಣಯಿಸಲಿ.

## ವೃತ್ತಿ ಮೂಲ ಶಿಕ್ಷಣ:

ಪ್ರಾಥಮಿಕ ಶಿಕ್ಷಣವು ಶಿಕ್ಷಣ ವೃಕ್ಷದ ಬೇರು. ನವನಾಗರಿಕತೆ
ಯನ್ನುಂಟು ಮಾಡುವ ಸಾಮಾನ್ಯ ಶಿಕ್ಷಣವು. ಉದ್ಯೋಗಗಳಲ್ಲಿ ಮಕ್ಕಳ
ಒಲವು ಹುಟ್ಟಬೇಕು. ಅಷ್ಟೇ ಅಲ್ಲ. ಉದ್ಯೋಗಗಳ ಮುಖಾಂತರ ಮಕ್ಕ
ಳಿಗೆ ಶಿಕ್ಷಣವು ದೊರೆಯಬೇಕು. ಜೀವನದ ಮೂಲಭೂತ ಬೇಡಿಕೆಗಳಾದ
ಅನ್ನ-ವಸ್ತ್ರಗಳನ್ನು ಹುಟ್ಟಿಸುವ ಜ್ಞಾನ ಮೊದಲು ಬೇಕು. ಅದು ಮಕ್ಕಳಲ್ಲಿ
ಸ್ವಾವಲಂಬನ ಪ್ರವೃತ್ತಿಯನ್ನು ಹುಟ್ಟಿಸಿ ಜೀವನದ ಹೋರಾಟವನ್ನು ಎದು
ರಿಸುವ ಸಾಮರ್ಥ್ಯವನ್ನುಂಟು ಮಾಡಬಲ್ಲುದು. ಆದ್ದರಿಂದ ಮೂಲ ಶಿಕ್ಷಣ
ಎಂಬ ಹೆಸರು ತಕ್ಕುದಾಗಿದೆ.

## ಶ್ರೀ ಸ್ವಾಮಿ ವಿವೇಕಾನಂದರ ಮಾತಿನಲ್ಲಿ ಹೇಳುವದಾದರೆ:

"ಜೀವಮಾನದಲ್ಲಿ ಜೀರ್ಣವಾಗದೆ ಕಸರಾಗಿ ಮೆದುಳಿನಲಿ ಮಲೆತ
ವಿಷಯಸಂಗ್ರಹವು ಶಿಕ್ಷಣವಲ್ಲ. ನವಜೀವನವನ್ನು ನಿರ್ಮಿಸಬಲ್ಲ, ಮನುಷ್ಯ
ನನ್ನಾಗಿ ರೂಪಿಸಬಲ್ಲ, ಶೀಲಸಂವರ್ಧಕ, ವಿಚಾರಗಳನ್ನು ಜೀರ್ಣಿಸಿ ಕಾರ್ಯ
ರಂಗದಲ್ಲಿರಿಸಬಲ್ಲ, ಶಿಕ್ಷಣವು ನಮಗೆ ಬೇಕು. ಒಂದು ವಾಚನಾಲಯದಲ್ಲಿದ್ದ
ಅನೇಕ ಗ್ರಂಥಗಳನ್ನು ಕೇವಲ ಮುಖಪಾಠ ಹೇಳುವ ವ್ಯಕ್ತಿಗಿಂತ ಐದೇ

ವಿಚಾರಗಳನ್ನಾಗಲಿ ಅರಗಿಸಿಕೊಂಡು ತನ್ಮೂಲಕ ತನ್ನ ಜೀವನ-ಶೀಲಗಳನ್ನು ಸರಿಪಡಿಸಿಕೊಂಡ ವ್ಯಕ್ತಿಯೇ ಶ್ರೇಷ್ಠನು. ವಿಷಯ ಸಂಗ್ರಹವೇ ಶಿಕ್ಷಣವೆಂದು ಒಪ್ಪಿಕೊಂಡಲ್ಲಿ, ವಾಚನಾಲಯಗಳೇ ಜಗತ್ತಿನ ಮಹಾಯೋಗಿಗಳೆಂದೂ, ಜ್ಞಾನಕೋಶಗಳೇ ಋಷಿಗಳೆಂದೂ ಪರಿಗಣಿಸಬೇಕಾದೀತು! ಪರರ ವಿಚಾರ ಗಳನ್ನು ಪರಭಾಷೆಯಲ್ಲಿ ಕಂಠಪಾಠ ಮಾಡಿ, ತಲೆತುಂಬಿಕೊಂಡ ಪದವೀ ಧರರು ಶಿಕ್ಷಣ ಪಡೆದವರೆಂದು ಎನ್ನಿಸಿಕೊಳ್ಳುವರು. ಇದು ಶಿಕ್ಷಣವೋ? ಶಿಕ್ಷಣದ ಧ್ಯೇಯವೇನು? ಕಾರಕೂನ, ವಕೀಲ, ಬಹಳವಾದರೆ ಡೆಪ್ಯೂಟಿ ಮ್ಯಾಜಿಸ್ಟ್ರೇಟ (ಅದೊಂದು ತರದ ಕಾರಕೂನಿಕೆ) ಇಷ್ಟೇ ಅಲ್ಲವೇ? ಇದರಿಂದ ವ್ಯಕ್ತಿಗಾಗಲಿ, ದೇಶಕ್ಕಾಗಲಿ ಆಗುವ ಉತ್ತಮ ಪರಿಣಾಮವೇನು? ಫಲವತ್ತಾದ ಭರತ ಭೂಮಿಯಲ್ಲಿ ಅನ್ನಕ್ಕಾಗಿ ಹೃದಯದ್ರಾವಕ ಕೂಗು ಧ್ವನಿತವಾಗುತ್ತಲಿದೆ, ಅರುಹಿನ ಕಣ್ತೆರೆಯಿರಿ. ಈಗಿನ ಶಿಕ್ಷಣವು ಈ ಕೊರತೆ ಯನ್ನು ದೂರ ಮಾಡಬಲ್ಲುದೇ? ಜನಸಾಮಾನ್ಯರಲ್ಲಿ ಜೀವನದ ಹೋರಾಟ ವನ್ನು ಎದುರಿಸುವ ಸಾಮರ್ಥ್ಯವನ್ನುಂಟುಮಾಡದ, ಶೀಲಸಂವರ್ಧನೆ ಮಾಡದ, ಪರೋಪಕಾರಿ ಸ್ಫೂರ್ತಿಯನ್ನು ತುಂಬದ ಸಿಂಹನಂತಹ ಧೈರ್ಯ ವನ್ನು ತಾರದ ಶಿಕ್ಷಣವು ಶಿಕ್ಷಣವೇ? ಅದು ಹೆಸರಿಗೆ ತಕ್ಕುದೇ? ಶೀಲ ರೂಪುಗೊಳ್ಳಬೇಕು. ಮನೋಬಲ ಹೆಚ್ಚಾಗಬೇಕು. ಅವುಗಳಿಂದ ವ್ಯಕ್ತಿಯು ಪರಾವಲಂಬಿಯಾಗದೆ, ತನ್ನ ಜೀವನ ತಾನೇ ಸಾಗಿಸಲು ಸಮರ್ಥನಾಗ ಬೇಕು....ಔದ್ಯೋಗಿಕ ಶಿಕ್ಷಣ ಪಡೆಯಬೇಕು. ಉದ್ಯೋಗಗಳನ್ನು ಪುನ ರುಜ್ಜೀವನಗೊಳಿಸುವ ಎಲ್ಲ ತರದ ವಿದ್ಯೆ ಬೇಕು.... ಕಬ್ಬಿಣದ ಸ್ನಾಯುಗಳುಳ್ಳ, ಉಕ್ಕಿನ ನರಗಳುಳ್ಳ ಮತ್ತು ಅದ್ಭುತಕಾರ್ಯ ಪ್ರವೃತ್ತಿಗಳುಳ್ಳ ಜನರು ನಮ್ಮ ದೇಶಕ್ಕೆ ಬೇಕು. ಅಡೆತಡೆಗಳನ್ನು ಏರಿ, ವಿಶ್ವದ ಗೂಢ ಸನ್ನಿವೇಶಗಳನ್ನು ಸೇರಿ, ಸಾಗರದ ಆಳವನ್ನು ಅಳೆದು, ಮರಣವನ್ನಾದರೂ ಅಪ್ಪಿ ನಿರಿಯಿಟ್ಟ ಗುರಿಯನ್ನು ಮುಟ್ಟಲು ಸಮರ್ಥರಾದ ವ್ಯಕ್ತಿಗಳು ಬೇಕು. ಮನುಷ್ಯನನ್ನಾಗಿ ಮಾಡಬಲ್ಲ, ಮುಕ್ತಿಯನ್ನು ಕೊಡದಿದ್ದರೂ ಜೀವನವನ್ನೇ ಉತ್ತಮ ರೀತಿ ಯಲ್ಲಿ ಸಾಗಿಸಲು ಹಚ್ಚುವ ಧರ್ಮವು ನನಗೆ ಬೇಕು. ಮನುಷ್ಯನನ್ನಾಗಿ ಮಾಡಬಲ್ಲ ಸಿದ್ಧಾಂತಗಳು ಬೇಕು. ಮನುಷ್ಯನನ್ನಾಗಿ ಮಾಡಬಲ್ಲ ಸರ್ವಾಂಗ ಜ್ಞಾನವನ್ನೀಯುವ ಶಿಕ್ಷಣವು ನಮಗೆ ಬೇಕು."

ಶಿಕ್ಷಣವು ವ್ಯಕ್ತಿಯ ಪರಿಪೂರ್ಣ ವಿಕಾಸದ ಮಾರ್ಗವೆಂದೂ, ಅದು ಜೀವನಕ್ಕೆ ನಿಕಟ ಸಂಬಂಧವಾದುದೆಂದೂ, ಜೀವನವನ್ನು ಉತ್ತಮ ರೀತಿ ಯಲ್ಲಿ ಸಾಗಿಸಲು ಹಚ್ಚುವ ದಾರಿಯೆಂದೂ ಶ್ರೀ ಸ್ವಾಮಿ ವಿವೇಕಾನಂದರು ಮಾರ್ಮಿಕವಾಗಿ ತಿಳಿ ಹೇಳಿದ್ದಾರೆ. ಈ ವಿಚಾರಗಳು ನಯೀ ತಾಲೀಮಿನ ನವದೃಷ್ಟಿಯನ್ನು ನಿರೂಪಿಸುತ್ತವೆ. ನಯೀ ತಾಲೀಮು ಜೀವನ ಶಿಕ್ಷಣ. ಅದರಲ್ಲಿ ಆಧ್ಯಾತ್ಮಿಕ ದೃಷ್ಟಿಯೂ ಅದೆ; ವ್ಯಾವಹಾರಿಕ ಸ್ವರೂಪವೂ ಅದೆ. ವ್ಯಕ್ತಿಯ ಪೋಷಣೆಯೂ ಅದೆ, ಸಾಮಾಜಿಕ ವಿಕಾಸವೂ ಅದೆ. ದೃಷ್ಟಾರರ ವಿಚಾರಗಳು ತ್ರಿಕಾಲಾಬಾಧಿತವಿರುತ್ತವೆ. ಸ್ವಾಮಿ ವಿವೇಕಾನಂದರು ಮತು ಗಾಂಧೀಜಿಯವರು ದೃಷ್ಟಾರರು.

**ಜೀವನ ಶಿಕ್ಷಣ:**

'ಜೀವನಕ್ಕಾಗಿ ಶಿಕ್ಷಣ' ಎಂದು ಹರ್ಬರ್ಟ್ ಸ್ಪೆನ್ಸರರು ಹೇಳಿದರು, ಆಗ ಪ್ರೌಢ ಜೀವನದ ಪೂರ್ವ ತಯಾರಿ ಎಂಬ ಭಾವನೆಯು ಬೇರೂರಿತು. ಪ್ರೌಢ ಜೀವನದ ಸ್ವರೂಪ, ಲಕ್ಷಣಗಳನ್ನು ಅನುಲಕ್ಷಿಸಿ ಎಳೆಯ ಮಕ್ಕಳ ಶಿಕ್ಷಣ ಸಾಗಿತು. ಪ್ರಾಢರ ಬೇಡಿಕೆಗಳು ಬೇರೆ, ಮಕ್ಕಳ ಬೇಡಿಕೆಗಳು ಬೇರೆ ಎಂಬ ಹೊಸ ಹಾದಿಯನ್ನು ಮನಶ್ಶಾಸ್ತ್ರಜ್ಞರು ತೋರಿಸಿದರು. ಮಕ್ಕಳ ಶಿಕ್ಷಣವು ಅವರ ಜೀವಿಕೆಗೆ ಹೊಂದಿಕೆಯಾಗಬೇಕು. ಅದು ಬೆಳೆಯುವ ಜೀವಿಗೆ ಪೋಷಕವಾಗಬೇಕು. ಇದು ಸ್ವಾಭಾವಿಕವಾದುದು. ಪ್ರಚಲಿತ ಶಿಕ್ಷಣವು ಅವರ ಜೀವಿಕೆಗೆ ಪೂರ್ಣ ಹೊಂದಿಕೆಯಾಗಲಿಲ್ಲ. ಅವರನ್ನು ಪ್ರೌಢ ಜೀವ ನಕ್ಕೂ ಅಣಿಮಾಡಲಿಲ್ಲ. ಈ ಕೊರತೆಯನ್ನು ಪೂರ್ತಿ ಮಾಡುವದೇ ಮೂಲ ಶಿಕ್ಷಣದ ನಾವೀನ್ಯತೆ. ಮಕ್ಕಳಿಗೆ ಜೀವಿಸುವ ಕಲೆಯ ಪರಿಚಯ ಮೊದಲು ಬೇಕು. ಮಕ್ಕಳ ಜೀವನದ ಚಟುವಟಿಕೆಗಳೇ ಶಿಕ್ಷಣದ ಸಾಮಗ್ರಿಗಳು. ಅವುಗಳ ಮುಖಾಂತರವೇ ಅವರಿಗೆ ಹೊರ ಜಗತ್ತಿನ ಜ್ಞಾನವಾಗುತ್ತದೆ. ಅವರ ಯೋಗ್ಯ ಬೆಳವಣಿಗೆಯೇ ಅವರ ಶಿಕ್ಷಣ. ಅವರ ಅನುಭವವೇ ಅದರ ಸ್ವರೂಪ, ಅವರ ಜೀವನವೇ ಅವರ ಶಿಕ್ಷಣ. ಶಿಕ್ಷಣವು ಮಕ್ಕಳ ಬೆಳೆಯುವ ಜೀವನದೊಂದಿಗೆ ಸಾಗಬೇಕು. ಪ್ರೌಢ ಜೀವನದ ಆದರ್ಶವನ್ನೂ ಮುಂದಿಟ್ಟುಕೊಂಡು ಸಾಗಬೇಕು.

ಸದ್ಯದ ಜೀವನ ಸನ್ನಿವೇಶಗಳ ಮುಖಾಂತರವೇ ಪ್ರೌಢ ಜೀವನಕ್ಕೆ ಅಣಿಮಾಡಬೇಕೆಂಬ ಜಾನ್ ಡ್ಯೂಯಿ ಅವರ ಅಭಿಪ್ರಾಯವಾದರೂ ಇದೇ ಮಾತನ್ನು ಸ್ಪಷ್ಟೀಕರಿಸುತ್ತಿದೆ....''ಶಿಕ್ಷಣವು ಮಕ್ಕಳಿಗೆ ಜೀವಿಸುವ ಕಲೆಯನ್ನು ಕಲಿಸಬೇಕು. ಜೀವನದ ಹೊಸ ಹಾದಿಯನ್ನು ತೋರಿಸ ಬೇಕು," ಎಂದು ಶ್ರೀ ಆರ್ಯನಾಯಕಂ ಅವರು ಒತ್ತಿ ಹೇಳುತ್ತಿದ್ದಾರೆ.

**ಅಹಿಂಸಾತ್ಮಕ ಶಿಕ್ಷಣ:**

ಮೂಲ ಶಿಕ್ಷಣವು ಅಹಿಂಸಾತ್ಮಕ ಶಿಕ್ಷಣವು. ಈ ಮಾತಿನ ಅರ್ಥವು ತಟ್ಟನೆ ತೋಚುವದಿಲ್ಲ. ಶಿಕ್ಷಣದಲ್ಲಿಯೂ ಹಿಂಸಾಹಿಂಸೆಗಳ ತಾಕಲಾಟವೇ ಎಂದು ಕೇಳಬಹುದು. ಸದ್ಯದ ಶಿಕ್ಷಣದಲ್ಲಿ ಹಿಂಸಾತ್ಮಕ ವಿಧಾನಗಳು ಇನ್ನೂ ಉಳಿದಿವೆ. ಕೆಲ ಮಕ್ಕಳಿಗೆ ಶಾಲೆಯೆಂದರೆ ಸೆರೆಮನೆ. ಅವರನ್ನು ಒತ್ತಾಯದಿಂದ ಶಾಲೆಗೆ ತರಬೇಕು. ನಂತರವೂ ಜುಲುಮೆಯಿಂದ ಓದು-ಬರಹ ಕೆಲಸಗಳನ್ನು ಕೊಡಬೇಕು. ಮೇಲೆ ಬೆತ್ತದ ಬೆದರಿಕೆ! ಕೇಳುವ ದೇನು ? ಶಿಕ್ಷಕನೊಬ್ಬ ರಾಕ್ಷಸನೇ ! ಶಾಲೆಯ ತುಂಬೆಲ್ಲ ಭಯೋತ್ಪಾದಕ ವಾತಾವರಣವು. ಇದು ಬಹು ಮಟ್ಟಿಗೆ ಕಡಮೆಯಾಗಿದ್ದರೂ, ಪೂರ್ಣ ಅಳಿದಿಲ್ಲ. ಮಕ್ಕಳು ಮನೆಯಲ್ಲಿ ಗೊಂದಲ ಹಾಕಿದಾಗ ತಾಯಿಯು, 'ತಡೆ, ನಾಳಿನಿಂದ ನಿನ್ನನ್ನು ಶಾಲೆಗೆ ದೂಡುತ್ತೇನೆ,' ಎಂದು ಅನ್ನುವದನ್ನು ಕೇಳಬಹುದು. ಇವೆಲ್ಲ ಹಿಂಸಾತ್ಮಕ ಶಿಕ್ಷಣದ ಲಕ್ಷಣಗಳಲ್ಲವೇ ? ಮಕ್ಕಳಿಗೆ ಶಾಲೆಯೆಂದರೆ ಬೇಸರವೇಕೆ ? ಕಾಲುಕಟ್ಟಿ ಅವರನ್ನು ಅಲ್ಲಿಗೆ ಏಕೆ ಎಳೆ ದೊಯ್ಯಬೇಕು ? ಕಿವಿ ಹಿಂಡಿ ಏಕೆ ಬರೆಯಹಚ್ಚಬೇಕು ? ಇವೆಲ್ಲವೂ ಮಕ್ಕ ಳಿಗೆ ಅರ್ಥವಾಗುವದಿಲ್ಲ. ಮಕ್ಕಳಿಗೆ ಅರ್ಥವಾಗುವ ರೀತಿಯಲ್ಲಿ ಪ್ರೌಢರು ವರ್ತಿಸುವದು ಸ್ವಾಭಾವಿಕ ಮಾರ್ಗವು. ಮಕ್ಕಳು ಚಟುವಟಿಕೆಗಳ ಮುಖಾಂತರ ಬೆಳೆಯುವದು ನಿಸರ್ಗ ನಿಯಮವು. ನೈಜ ಮಾರ್ಗವನ್ನಾ ಗಲಿ, ನಿಸರ್ಗ ನಿಯಮವನ್ನಾಗಲಿ ಬಿಟ್ಟು ಸಾಗುವದೆಲ್ಲ ಹಿಂಸಾಕೃತಿಯೇ ಎಂದು ಡಾ. ಜೆ. ಸಿ. ಕುಮಾರಪ್ಪ ಅವರು ಹೇಳಿರುವರು. ಈ ಮಾತಿನ ಅರ್ಥವನ್ನು ಸರಿಯಾಗಿ ಮಾಡಿಕೊಂಡರೆ ಮಾತ್ರ, ಅಹಿಂಸಾತ್ಮಕ ಶಿಕ್ಷಣವೇ ಯೋಗ್ಯ ಶಿಕ್ಷಣವೆಂದು ತಿಳಿಯುತ್ತದೆ. ಇದಲ್ಲದೆ ಅಹಿಂಸಾತ್ಮಕ ಸಮಾಜ ವನ್ನು ರಚಿಸುವದು ಮೂಲ ಶಿಕ್ಷಣದ ಆದರ್ಶವು. ಅದುವೇ ಗಾಂಧಿಯು ವರ ಬೋಧೆಯ ಬೆಳಕು.

'ಗಾಂಧೀಜಿಯವರ ಯೋಜನೆಯು ಹೊಸವಲ್ಲವೆಂದು ಹೇಳಲಾಗಿದೆ ಆದರೆ ಅದು ನವಯುಗವನ್ನು ನಿರ್ಮಿಸುವುದೆಂದು ನಾನು ತಿಳಿಯುತ್ತೇನೆ; ಯಾಕಂದರೆ ಶಿಕ್ಷಣ ಕ್ಷೇತ್ರದಲ್ಲಿ ಅದು ಅಹಿಂಸೆಯನ್ನು ಆರಂಭಿಸಿತು.'

ಶ್ರೀ. ಬಿ. ಜಿ. ಖೇರ

'ಅಹಿಂಸೆಯು ಸರ್ವರೋಗಗಳಿಗೆ ಔಷಧವೆಂದು ತಿಳಿದ ಮನಸ್ಸಿನಿಂದ ಈ ಯೋಜನೆಯು ಹೊರಬಿದ್ದಿದೆ ಎಂಬ ಶ್ರದ್ಧೆಯಿಂದ ಈ ಕೆಲಸಕ್ಕೆ ಅಣಿಯಾಗಬೇಕು.'

ಶ್ರೀ. ಮಹಾದೇವ ದೇಸಾಯಿ

'ಜಗತ್ತಿನ ಮುಂದಿನ ನಾಗರಿಕನೆಂದು ಮಗುವನ್ನು ತರಬೇತು ಮಾಡುವಲ್ಲಿ ಸೇಗಾಂವ ಪದ್ಧತಿಯು ಅಹಿಂಸಾನಿಯಮದ ಪ್ರಯೋಗವಿದೆ.'

ಶ್ರೀ. ಕಿಶೋರಲಾಲ ಮಶ್ರುವಾಲಾ

**ರಾಷ್ಟ್ರೀಯ ಶಿಕ್ಷಣ :**

ಆಂಗ್ಲ ಭಾಷಾಭ್ಯಾಸವೇ ಹೊಸ ಶಿಕ್ಷಣವೆಂದು ಹಿಂದುಸ್ಥಾನದಲ್ಲಿ ಕೆಲಕಾಲ ಪ್ರಚಾರವಾಯಿತು. ಆಂಗ್ಲರ ಶಿಕ್ಷಣ ಪದ್ಧತಿಯನ್ನೇ ಅನುಕರಣ ಮಾಡಲಾಯಿತು. ಹಿಂದುಸ್ಥಾದಲ್ಲಿಯ ಶಿಕ್ಷಣವು ರಾಷ್ಟ್ರೀಯ ಜೀವನದಿಂದ ದೂರ ಸಿಡಿಯಿತು. ನಮ್ಮ ಸಾಲೆ ಕಾಲೇಜುಗಳೆಲ್ಲ ಆಂಗ್ಲರ ಆಳಿಕೆಗೆ ಅನುಕೂಲವಾಗುವ ಮಧ್ಯಸ್ಥಗಾರರನ್ನು ತಯಾರಿಸುವ ಕಾರಖಾನೆಗಳಾದವು. ಅಂತೆಯೇ ಮಾಧ್ಯಮಿಕ ಹಾಗೂ ಉಚ್ಚ ಶಿಕ್ಷಣ ಸಂಸ್ಥೆಗಳಿಗೆ ಮಹತ್ವಕೊಡಲಾಯಿತು. ಪ್ರಾಥಮಿಕ ಶಿಕ್ಷಣಕ್ಕೆ ಪ್ರಾಧಾನ್ಯ ದೊರೆಯಲಿಲ್ಲ. ಅದು ಸಾಕಷ್ಟು ಪ್ರಸಾರವೂ ಆಗಲಿಲ್ಲ. ಮಾಡಿದಷ್ಟು ಕಾರ್ಯ ಉಪಯುಕ್ತವೂ ಆಗಲಿಲ್ಲ; ಯಾಕಂದರೆ ಪುಸ್ತಕೀಯ ವಿದ್ಯೆಗೆ ಪ್ರಾಶಸ್ತ್ಯ ದೊರೆಯಿತು. ಪರೀಕ್ಷೆಗಳಿಗೆ ಪ್ರಾಧಾನ್ಯಕೊಡಲಾಯಿತು. ಶಿಕ್ಷಣವು ಜನರನ್ನು ಉದ್ಯೋಗಗಳಿಂದ ದೂರಿಡಿಸಿತು. ಸುಶಿಕ್ಷಿತ ವರ್ಗವು ಜನಜೀವನದಿಂದ ದೂರ ಹಾರಿತು. ಪಾಶ್ಚಾತ್ಯರ ಆಚಾರ ವಿಚಾರಗಳನ್ನು ಅನುಕರಣ ಮಾಡುವದು ಸುಶಿಕ್ಷಿತ ಜನರ ಲಕ್ಷಣವೆಂದು ತಿಳಿದು ನಮ್ಮದೆಲ್ಲ ಹಳೆಯದು, ಹೀನವಾದುದು, ತ್ಯಾಜ್ಯವಾದುದು ಎಂದು ಉಸಿರೆಳೆಯುವ ಮಟ್ಟಕ್ಕಿಳಿದು, ನಮ್ಮ ನಿತ್ಯ ಜೀವನವಲ್ಲಿಯೇ ರಾಷ್ಟ್ರೀಯತ್ವವು ಮಾಯವಾಗತೊಡಗಿತು. ಸ್ವದೇಶಿ

ವಸ್ತುಗಳ ಪ್ರೀತಿ ಕಡಿಮೆಯಾಗತೊಡಗಿತು. ಪರಕೀಯ ಆಚಾರ ವಿಚಾರ ಗಳಿಗೆ ಮಹತ್ವ ದೊರೆಯಿತು. ಸ್ವದೇಶಾಭಿಮಾನ, ಸ್ವಾಭಿಮಾನಗಳು ಕುಗ್ಗ ಲಾರಂಭಿಸಿದವು. ನಮ್ಮ ಸಾಹಿತ್ಯ ಕಲೆಗಳಲ್ಲಿ ಅಭಿರುಚಿ ಹುಟ್ಟಲಿಲ್ಲ. ಯೋಗ್ಯ ಪಾಠ್ಯಕ್ರಮಗಳೂ ಇರಲಿಲ್ಲ. ಒಟ್ಟಿನಲ್ಲಿ ನಮ್ಮ ಶಿಕ್ಷಣವು ನಮ್ಮ ಸಾಂಸ್ಕೃತಿಕ ಜೀವನದ ಕುರುಹಾಗಿ ಸಾಗಲಿಲ್ಲ. ನಮ್ಮ ದೇಶದ ಪರಿಸ್ಥಿತಿಗೆ ಹೊಂದಿಕೆಯಾಗಿಯೂ ನಡೆಯಲಿಲ್ಲ, ನಮ್ಮ ಮಕ್ಕಳ ಬಾಳಿಗೆ ಬೆಳಕನ್ನು ತೋರಲಿಲ್ಲ. ಅದರಿಂದ ಈ ವರೆಗಿನ ಶಿಕ್ಷಣವು ಭಾರತೀಯರಿಗೆ ಬೇಕಾದ ಶಿಕ್ಷಣವಲ್ಲ. ಭಾರತೀಯರಿಂದ ನಿರ್ಮಿತವಾದ ಶಿಕ್ಷಣದ ಯೋಜನೆಯೂ ಅದಾಗಿರಲಿಲ್ಲ, ಅದು ದಾಸ್ಯ ರಾಷ್ಟ್ರಗಳ ಶಿಕ್ಷಣದ ಪ್ರತೀಕವಾಗಿತ್ತು. ವರ್ಧಾ ಶಿಕ್ಷಣವು ಸ್ವತಂತ್ರ ರಾಷ್ಟ್ರದ ಯೋಜನೆಯಾಗಿ ಜಗತ್ತಿನ ಶೈಕ್ಷಣಿಕ ಚರಿತ್ರೆಯಲ್ಲಿ ಒಂದು ಅಧ್ಯಾಯವಾಗಿ ಉಳಿಯುವುದು. ಅದುವೇ ಅಖಂಡ ಭಾರತದ ರಾಷ್ಟ್ರೀಯ ಶಿಕ್ಷಣವು.

**ನವ ನಾಗರಿಕತೆ:**

ಮಗುವಿನ ವ್ಯಕ್ತಿತ್ವ ಪ್ರಕಟವಾಗುವಂತೆ ಶೈಕ್ಷಣಿಕ ಸನ್ನಿವೇಶಗಳನ್ನು ಒದಗಿಸಿ ಕೊಡಬೇಕೆಂದೂ, ವೈಯಕ್ತಿಕ ಶಿಕ್ಷಣಕ್ಕೆ ಪೂರ್ಣ ಲಕ್ಷ್ಯ ಪೂರೈಸ ಬೇಕೆಂದೂ ಹಿಂದೆ ಹೇಳಿದೆ. ಡಾ। ನನ್ ಅವರು ವ್ಯಕ್ತಿತ್ವ ವಿಕಾಸವೇ ಶಿಕ್ಷಣದ ಧ್ಯೇಯವಾಗಬೇಕೆಂದು ಪ್ರತಿಪಾದಿಸುವರು; ಎಂದರೆ ವ್ಯಕ್ತಿಗೆ ಮಾತ್ರ ಲಕ್ಷ ಗಮನಿಸಬೇಕೆಂದೂ, ಸಮಾಜ ನಿರ್ಲಕ್ಷಿಸಬೇಕೆಂದೂ ಅರ್ಥವಲ್ಲ. ವ್ಯಕ್ತಿಯು ಸಮಾಜದ ಘಟಕ. ವ್ಯಕ್ತಿಯ ಬೆಳವಣಿಗೆ ಸಮಾಜದ ಹೆಚ್ಚ ಳದಲ್ಲಿ ಪ್ರತಿಬಿಂಬಿಸಬೇಕು. ವ್ಯಕ್ತಿಯ ಪ್ರತಿಭೆ ಸಾಮಾಜಿಕ ಘನತೆಗೆ ಸಹಾಯಕವಾಗಬೇಕು. ಸಮಾಜದ ಮೂಲಕ ವ್ಯಕ್ತಿಯು ತನ್ನ ವೈಶಿಷ್ಟ್ಯ ವನ್ನು ತೋರಲು ಯತ್ನಿಸಬೇಕು. ಅವನು ಸಮಾಜದ ಸೇವೆಯಲ್ಲಿಯೇ ನಿರತನಾಗುವಂತೆ ನಯೀ ತಾಲೀಮು ಪ್ರೇರಿಸುವದು. ಸಮಾಜವೆಂದರೆ ಕೆಲ ವ್ಯಕ್ತಿಗಳ ಒಂದು ಸಣ್ಣ ಗುಂಪು ಮಾತ್ರ ಎಂದು ತಿಳಿಯಕೂಡದು. ಅದಕ್ಕೆ ಜಾತೀಯ ಇಲ್ಲವೆ ಯಾವುದೊಂದು ಪಕ್ಷವು ಅಂಟಿಕೊಳ್ಳುವದಿಲ್ಲ. ಅದರಿಂದ ಮಹಾತ್ಮಾಜಿಯವರ ಸಮಾಜದಲ್ಲಿ ಮಾನವತೆ ಪ್ರಾಮುಖ್ಯ ವಾಗಿದೆ. ಹಿಂದೂ ಸಮಾಜ, ಮುಸಲ್ಮಾನ ಸಮಾಜ ಅಥವಾ ಆಂಗ್ಲ

ಸಮಾಜ, ಭಾರತ ಸಮಾಜ, ಎಂಬ ಗುಂಪುಗಳು ನಯೀ ತಾಲೀಮಿನ ಸಮಾಜಗಳಲ್ಲ. ಮಾನವ ಸಮಾಜವೇ ನಯೀ ತಾಲೀಮಿನ ಸಮಾಜ. ವಿಶ್ವ ಬಂಧುತ್ವವೇ ಅದರ ಮೂಲ ಮಂತ್ರ. ವಿಶ್ವ ಪ್ರೇಮವೇ ಅದರ ಆದರ್ಶ. ಸತ್ಯ, ನ್ಯಾಯ, ಅಹಿಂಸೆ ಈ ತತ್ತ್ವಗಳು ಆ ಸಮಾಜದ ಅಡಿಗಲ್ಲು. ಆದುದರಿಂದ ಮಹಾತ್ಮಾಜಿಯವರ ಸಮಾಜವು ಮಾನವ ಸಮಾಜ: ಅಂತೆಯೇ ಮಹಾತ್ಮಾಜಿಯವರು ಜಗತ್ತಿನ ಒಂದನೆಯ ನಾಗರಿಕರೆಂದು ಕರೆಯಿಸಿಕೊಳ್ಳಲ್ಪಡುತ್ತಾರೆ. ಭಾರತ ಮಗುವಿನ ವ್ಯಕ್ತಿತ್ವವು ಮಾನವ ಪ್ರಗತಿಗೆ ಪೋಷಕವಾಗಬೇಕು; ಜಗತ್ತಿನ ಮುನ್ನಡೆಗೆ ಕಾರಣವಾಗಬೇಕು: ಪ್ರೇಮಮಯ ಜಗತ್ತು ನಿರ್ಮಾಣವಾಗಬೇಕೆಂದು ಮಹಾತ್ಮಾಜಿಯವರ ಮನೀಷೆ: ಅದುವೇ ಅವರ ಜೀವನ ದರ್ಶನ-ನಯೀ ತಾಲೀಮು.

---

# ೫. ಹೊಸ ಸಮಾಜ ರಚನೆ

ಇದು ಶಾಸ್ತ್ರೀಯ ಯುಗವು. ಅನೇಕ ಶಾಸ್ತ್ರೀಯ ಶೋಧಗಳಾಗಿವೆ. ಅವು ಮಾನವ ಪ್ರಗತಿಯ ದ್ಯೋತಕಗಳೇ ಎಂದು ಪ್ರಶ್ನಿಸುವ ಕಾಲ ಬಂದಿದೆ. ಯಾಕಂದರೆ ರಸಾಯನ ಶೋಧಗಳು ಮಾನವನ ಅವನತಿಗೆ ಕಾರಣಗಳಾಗಿವೆ. ಮನುಷ್ಯನನ್ನು ಅಧೋಗತಿಗೆ ಇಳಿಸಿವೆ. ಅಮಾನುಷ ಕೃತಿಗಳನ್ನು ಮಾಡಹಚ್ಚಿವೆ. ಬಂಧುಗಳ ಕೊಲೆ–ಸುಲಿಗೆಗಳಿಗೆ ಕಾರಣವಾಗಿವೆ. ಸಾಮ್ರಾಜ್ಯವಾದವನ್ನು ಪುಷ್ಟಿಗೊಳಿಸಿವೆ. ಮೊನ್ನಿನ ಮಹಾ ಯುದ್ಧವು ಇದನ್ನು ಸಿದ್ಧಮಾಡಿದೆ. ಪ್ರಪಂಚವೇ ಪ್ರಯೋಗದ ರಂಗಭೂಮಿಯಾಗಿತ್ತು. ಒಂದಾನೊಂದು ಕಾಲದಲ್ಲಿ ಯೋಧರು ಎದುರೆದುರು ಕಾದುತ್ತಿದ್ದರು. ಶಸ್ತ್ರ ಕೆಳಗಿಟ್ಟರೆ ಯುದ್ಧ ಮಾಡುತ್ತಿರಲಿಲ್ಲ. ಅದು ಯುದ್ಧ ನೀತಿಯಾಗಿತ್ತು. ಈಗಿನ ಯುದ್ಧಕ್ಕೆ ನೀತಿಯಿಲ್ಲ: ನೆಲೆಯಿಲ್ಲ. ಮಲಗಿದ ಕೂಸು, ಬಸಿರು ಹೆಂಗಸು, ಹರಗುವ ಒಕ್ಕಲಿಗ, ಓದುವ ಬಾಲಕ, ಪ್ರಾರ್ಥಿಸುವ ಪಾದ್ರಿ ಇವರೆಲ್ಲರೂ ಏಕಕಾಲಕ್ಕೆ ಬಾಂಬಿನ ಉರಿಗೆ ತುತ್ತಾದರು. ವಾಚನಾಲಯಗಳು, ಶಾಲೆ ಕಾಲೇಜುಗಳು, ಕಾರಖಾನೆಗಳು, ಸಂಗ್ರಹಾಲಯಗಳು, ಸುಂದರ ಇಮಾರತಿಗಳು ಬಾಂಬಿನ ಹೊಡೆತಕ್ಕೆ ಕಳಚಿ ಬಿದ್ದವು. ಸಾಹಿತ್ಯ ಕಲೆ, ಧರ್ಮ, ನೀತಿ ಮಣ್ಣುಗೂಡಿದವು. ಸಂಸ್ಕೃತಿ ಉನ್ನತ ಶಿಖರದಿಂದ ರಸಾತಳಕ್ಕೆ ಇಳಿಯಿತು. ನನ್ನ ದೇಶ ಮುಂದು, ನಮ್ಮ ಸಾಮ್ರಾಜ್ಯ ಹೆಚ್ಚು, ನಮ್ಮ ಪ್ರಾಬಲ್ಯ ಅಧಿಕ ಇವು ಬ್ರಹ್ಮಾಂಡವನ್ನು ಅಗ್ನಿಕುಂಡವನ್ನಾಗಿ ಪರಿವರ್ತಿಸಿದವು. ಈ ತರದ ಈರ್ಷೆ, ಸ್ಪರ್ಧೆ, ಸ್ವಾರ್ಥ ವಿಶ್ವದಲ್ಲೆಲ್ಲ ತುಂಬಿ ಹಿಂಸಾತ್ಮಕ ಜಗತ್ತನ್ನು ನಿರ್ಮಿಸಿದವು. ಹಿಂಸೆಯು ಪರಮಾವಧಿಯನ್ನು ಮುಟ್ಟಿತು. ಇನ್ನು ಅದು ಕೆಳಗಿಳಿದ ಹೊರತು ಗತ್ಯಂತರವಿಲ್ಲ; ಅಂತಹ ಪರಿಸ್ಥಿತಿಯು ಒದಗಿತು. ಹಿಂದೆ ದೇವತೆಗಳು ಮತ್ತು ರಕ್ಕಸರು ಅಮೃತ ಮಂಥನ ಮಾಡಿದ ಕಥೆ ನಮ್ಮೆಲ್ಲರಿಗೆ ಗೊತ್ತು. ಅಮೃತ ದೊರೆಯುವ ಪೂರ್ವದಲ್ಲಿ ಕಾಲಕೂಟ ವಿಷವು ಹೊರಟಿತು; ಆಗ ದೇವತೆಗಳೂ ಪಲಾಯನ ಮಾಡಹತ್ತಿದರು;

ಶಿವನನ್ನು ಕುರಿತು ಪ್ರಾರ್ಥಿಸಿದರು. ಶಿವನು ಆ ವಿಷವನ್ನೆಲ್ಲ ತನ್ನ ಕಂಠ ವಲ್ಲಿ ಇರಿಸಿಕೊಂಡನು. ನೀಲಕಂಠನಾದನು. ಇಂತಹ ಪ್ರಸಂಗವೇ ಮೊನ್ನಿನ ಬ್ರಹ್ಮಾಂಡ ಯಜ್ಞ ಸಮಯದಲ್ಲಿ ಉಂಟಾಯಿತು. ಮಹಾತ್ಮಾ ಜೀಯವರು ಹಿಂಸೆಯ ವಿಷವನ್ನೆಲ್ಲ ತಮ್ಮ ಕಂಠದಲ್ಲಿ ಮೀಸಲಿರಿಸಿ, ಜಗತ್ತು ಅಹಿಂಸಾಮೃತ ಪಡೆಯಲು ಬೋಧಿಸಿದರು; ಎಂದರೆ ಹಿಂಸೆಯು ಜಗತ್ತಿ ನಿಂದ ಮಾಯವಾಗಿ, ಅಹಿಂಸೆಯು ಹೊಸ ಪ್ರಪಂಚದ ತಳಹದಿಯಾಗ ಬೇಕೆಂದು ಕಂಠಗರ್ಜನೆ ಮೊಳಗಿಸಿದರು. ಹೊಸ ಮಾನವ ಸಮಾಜ ನಿರ್ಮಾಣವಾಗಬೇಕೆಂದು ಹೇಳಿದರು. ಸತ್ಯ, ನ್ಯಾಯ, ವಿಶ್ವಪ್ರೇಮ ಇವು ಹೊಸ ಸಮಾಜ ಮಂದಿರದ ಆಧಾರಸ್ತಂಭಗಳು. ಒಬ್ಬನು ಮತ್ತೊಬ್ಬ ನನ್ನು ನೋಯಿಸುವಂತಿಲ್ಲ, ವಂಚಿಸುವಂತಿಲ್ಲ. ಸುಲಿಯುವಂತಿಲ್ಲ. ಪಶು ಪ್ರವೃತ್ತಿಗಳು ಅಡಗಿ, ಮನುಷ್ಯನಲ್ಲಿ ಹುದುಗಿದ ದೇವಾಂಶಗಳು ಪ್ರಜ್ವಲಿಸ ಬೇಕು. ಮನುಷ್ಯನು ಈಶ್ವರನ ಪ್ರತಿಬಿಂಬವಾಗಬೇಕು. ಮಾನವ ಜಗತ್ತು ದೇವಲೋಕವಾಗಬೇಕು. ಇದುವೇ ಮಹಾತ್ಮಾಜಿಯವರ ಹೊಸ ಸಂದೇಶ. ಜೀವನ ದರ್ಶನ. ಅವರೇ ಜಗತ್ತಿನ ಪ್ರಥಮ ನಾಗರಿಕರು.

**ಅಹಿಂಸಾ ಪ್ರಪಂಚ**

ಬುದ್ಧ, ಕ್ರೈಸ್ತ, ಬಸವ, ಮಹಮ್ಮದ ಪೈಗಂಬರ ಮೊದಲಾದವರು ಅಹಿಂಸೆಯನ್ನು ಬೋಧಿಸಿದರು. ಪ್ರಾಣಿಗಳಲ್ಲಿ ದಯೆ ತೋರಿಸುವದು ಅವರ ಬೋಧೆಯ ಮರ್ಮವಾಗಿತ್ತು. ಕ್ರೈಸ್ತನನ್ನು ಶಿಲುಬಿಗೇರಿಸಿದಾಗ, "ಪ್ರಭುವೇ, ಇವರನ್ನು ಕ್ಷಮಿಸು, ತಾವು ಮಾಡುತ್ತಿರುವುದರ ಅರಿವು ಅವರಿ ಗಿಲ್ಲ," ಎಂದು ಅವರು ಅಂದರು. ಕೊಲೆಗಡಕನ ಗುಂಡು ಎದೆ ಸೇರಿದಾಗ, ಕೆಳಗೆ ಬಿದ್ದು ಕೈಮುಗಿದು "ಹಾ, ರಾಮ, ಕ್ಷಮಿಸು ಇವನನ್ನು" ಎಂದು ಗಾಂಧೀಜಿಯವರ ಹೃದಯವು ಹರಸಿತು. ಎಂತಹ ಔದಾರ್ಯ! ಅತ್ಯುನ್ನತ ಕ್ಷಮಾಬುದ್ಧಿ! ಅತುಲ ಅಹಿಂಸಾವಾದಿಗಳು ಇವರು! ಅಹಿಂಸಾವಾದಿಯು ಹೇಡಿಯಲ್ಲ. ಮರಣವನ್ನಾದರೂ ಅಪ್ಪಿ, ಗುರಿಯಿಟ್ಟ ನಿರಿಯನ್ನು ಮುಟ್ಟುವ ತನಕ ನಿಲ್ಲುವನು. ಸತ್ಯ ಸಾಧನೆಗಾಗಿ ಸಕಲವನ್ನು ತ್ಯಜಿಸುವನು. ಕೃತಿಶಾಲಿ, ಧೃತಿಶಾಲಿ, ಮತಿಶಾಲಿ, ಅಹಿಂಸಾವಾದಿ! "ಸತ್ಯವೇ ದೇವರು; ಅಹಿಂಸೆಯೇ ಸತ್ಯಶೋಧನದ ಪರಮ ಸಾಧನ; ನ್ಯಾಯ ಮಾರ್ಗವೇ ಅಹಿಂಸೆಯ ಪ್ರತೀಕ"

ಎಂದು ಗಾಂಧೀಜಿಯವರು ಬೋಧಿಸಿದರು. ಅನ್ಯಾಯವಿದ್ದಲ್ಲಿ ಹಿಂಸೆಯಿದೆ. ಅನ್ಯಾಯವೇ ಇಂದಿನ ಸಮಾಜದ ಧೋರಣವಾಗಿದೆ. ಇದನ್ನು ಬಲು ಜಾಣ ಎಂದರೆ ಮೋಸಗಾರಿಕೆಯಲ್ಲಿ ಎಂದು ಅರ್ಥ ಮಾಡಿಕೊಳ್ಳಬೇಕು. ತಿಳಿದವನು ತಿಳಿಯದವನಿಗೆ ತಿಳಿಯದ ಹಾಗೆ ಮೋಸ ಮಾಡುವುದೇ ಗ್ನಾನ ಎಂದು ಶ್ರೀ ಕಾರಂತರು ಅಂದಿರುವರು. ಇಂದಿನ ಸಮಾಜದ ಅನೀತಿಯನ್ನು ವಿಡಂಬನ ರೂಪದಲ್ಲಿ ಚಿತ್ರಿಸಿದ್ದಾರೆ. ಶ್ರೀಮಂತರು ಬಡವರನ್ನು, ಬುದ್ಧಿ ಜೀವಿಗಳು ಅಜ್ಞಾನಿಗಳನ್ನು ಬಲಿಷ್ಠರು ದುರ್ಬಲರನ್ನು ಸುಲಿದು ಬಾಳುವುದೇ ಪ್ರಗತಿಯ ನೀತಿಯಾಗಿದೆ. ಇದು ಪ್ರಗತಿಯೂ ಅಲ್ಲ, ನೀತಿಯೂ ಅಲ್ಲ. ಬಲಿಷ್ಠರೇ ಬಾಳಬೇಕೆಂಬುದು ಪ್ರಾಣಿ ಜೀವನಕ್ಕೆ ಸಂಬಂಧಿಸಿದುದು. ಮಾನವನ ಹೋರಾಟದ ಫಲವನ್ನೆಲ್ಲ ಮಣ್ಣುಗೂಡಿಸುವ ಮೇಲಾಟವಿದು. ಸುಪ್ರಸಿದ್ಧ ಆಂಗ್ಲ ಸಾಹಿತಿ ಜಾರ್ಜ ಬರ್ನಾರ್ಡ ಶಾ ಅವರು ತಮ್ಮ ವೈದ್ಯರ ಸಮಸ್ಯೆ (Doctors' Dilemma) ಎಂಬ ನಾಟಕದಲ್ಲಿ "ಎಲ್ಲ ದಂಧೆಗಳು ಜನಸಾಮಾನ್ಯರನ್ನು ಸುಲಿಯಲು ಹೊಂಚು ಹಾಕುತ್ತಿವೆ," ಎಂಬುದನ್ನು ಚಿತ್ರಿಸಿದ್ದಾರೆ. ಇದು ಭಂಡವಳಶಾಹಿಗಿಂತ ಕಟುವಾದ ರೋಗವೆಂದು ಅವರು ಪ್ರತಿಪಾದಿಸಿದ್ದಾರೆ. ಇದು ಯಾವುದೊಂದು ದೇಶದ ಧೋರಣ ಮಾತ್ರವಲ್ಲ. ಜಗತ್ತೇ ಈ ಮಾರ್ಗದಲ್ಲಿ ನಡೆದಿದೆ. ರಶಿಯನ್ನರು ಬಡವರ ಭಾಗ್ಯರಾಜ್ಯವನ್ನು ಕಟ್ಟಿದರು. ಆದರೇನು? ರಶಿಯಾ ಸಾಮ್ರಾಜ್ಯವಾದಕ್ಕೆ ಶರಣು ಹೊಡೆಯಿತು. ಸಾಮ್ರಾಜ್ಯವಾದವು ಕೊಲೆ–ಸುಲಿಗೆಗೆ ಈಡುಮಾಡುವದು. ಪರರ ಸ್ವಾತಂತ್ರ್ಯವನ್ನು ಹರಣ ಮಾಡುವದು. ಇನ್ನೊಬ್ಬನಿಗೂ ಬಾಳುವ ಹಕ್ಕಿದೆ. ಇದರ ಅರಿವು ಬೇಕು. ಈ ಅರಿವು ಉಂಟಾಗಬೇಕಾದರೆ ಹೃದಯ ವೈಶಾಲ್ಯಬೇಕು. ವಿವೇಕವು ಸ್ಫುಟವಾಗಬೇಕು. ನೀತಿಯ ಸೆಲೆಯಿಂದ ಪ್ರವಾಹವು ತುಂಬಿ ಹರಿಯಬೇಕು. ನಾವೆಲ್ಲರು ಅಲ್ಲಿ ತೇಲಬೇಕು. ನಮ್ಮ ಜೀವನ ನೌಕೆ ಅಲ್ಲಿ ಸಾಗಬೇಕು. ಇದು ಗಾಂಧೀಜಿಯವರು ತೋರಿಸಿದ ನ್ಯಾಯಮಾರ್ಗ. ಅದುವೇ ಅಹಿಂಸಾ ಪ್ರಪಂಚ! ಹೊಸ ಸಮಾಜ! ಹೊಸ ಜಗತ್ತು!

ಅಹಿಂಸಾತ್ಮಕ ಸಮಾಜ ವೃಕ್ಷವನ್ನು ನಿರ್ಮಾಣ ಮಾಡಬೇಕಾದರೆ ಹದಗಾಲದಲ್ಲಿ ಬೀಜವನ್ನು ಅಂಕುರಿಸಬೇಕು. ಬಾಲ್ಯಾವಸ್ಥೆಯೇ ಇದಕ್ಕೆ

ಹದಗಾಲ. ಎಳೆ ವಯಸ್ಸಿನಲ್ಲಿಯೇ ಅಹಿಂಸಾಮೃತವು ರಕ್ತನಾಳದಲ್ಲಿ ಸೇರ ಬೇಕು. ಮಕ್ಕಳು ಶಿಕ್ಷಣ ಹೊಂದುವಾಗ ಅರ್ಥಾತ್ ಸಂಸ್ಕಾರ ಹೊಂದುವಾಗ ಅಹಿಂಸೆಯು ಅವರ ಜೀವನ ನೌಕೆಯ ಚುಕ್ಕಾಣಿಯಾಗಬೇಕು. ಅವರ ನಡೆನುಡಿಗಳಲ್ಲಿ ಅದು ಪ್ರತಿಬಿಂಬಿತವಾಗಬೇಕು. ಏಂದರೇನೆ, ಪ್ರಪಂಚವು ಅಹಿಂಸೆಯ ತಳಗಲ್ಲಿನ ಮೇಲೆ ನಿಲ್ಲಬಲ್ಲುದು. ಹೊಸ ಸಮಾಜ ರಚಿತವಾಗ ಬಲ್ಲುದು. ಅದರಿಂದ ಮಹಾತ್ಮಾಜಿಯವರು ಶಿಕ್ಷಣದಲ್ಲಿ ಅಹಿಂಸಾ ಕ್ರಾಂತಿ ಯನ್ನು ಹೂಡಿದರು.

"ನಮ್ಮ ತೊಡಕಿನ ಮೂಲವು ಬಾಹ್ಯ ಜಗತ್ತಿನಲ್ಲಿಲ್ಲ. ದೃಷ್ಟಿಗೋಚ ರವಾದ ನಿಸರ್ಗದ ವಿಭಾಗದಲ್ಲಿಲ್ಲ.... ಅದು ನಮ್ಮ ಮನೋವಿಕಾರಗಳಲ್ಲಿ ಹುದುಗಿದೆ, ಭಾವೋತ್ತೇಜಕ ಚಟುವಟಿಕೆಗಳಲ್ಲಿದೆ, ತರುಣರಲ್ಲಿ ಒಡಮೂಡಿದ ಭಾವನೆಗಳಲ್ಲಿದೆ, ಶೈಶವಾವಸ್ಥೆಯಲ್ಲಿ ಹುಟ್ಟಿದ ಚೇತನ ಸ್ವರೂಪದಲ್ಲಿವೆ. ನಮ್ಮ ಸಮಸ್ಯೆಗಳಿಗೆಲ್ಲ ಪರಿಹಾರವೆಂದರೆ ಮನುಷ್ಯರನ್ನು ವಿವೇಕಿಗಳನ್ನಾಗಿ ಮಾಡುವದು. ಮನುಷ್ಯರನ್ನು ವಿವೇಕಿಗಳನ್ನಾಗಿ ಮಾಡಬೇಕಾದರೆ, ಅವರು ವಿವೇಕ ಮೂಲ್ಯ ಶಿಕ್ಷಣವನ್ನು ಪಡೆಯಬೇಕು." ಈ ರೀತಿಯಾಗಿ ಶಿಕ್ಷಣ ತಜ್ಞ ಬರ್ಟ್ರಾಂಡ ರಸೆಲ್ ಅವರು ವಿವರಿಸಿದ್ದಾರೆ. ಹೃದಯ ಪರಿವರ್ತನವನ್ನುಂಟು ಮಾಡುವ ಶಿಕ್ಷಣ ಬೇಕೆಂದು ಸರ್ ರಾಧಾಕೃಷ್ಣನ್‌ರು ಹೇಳಿದ್ದಾರೆ. ಮನುಷ್ಯತ್ವವನ್ನು ತಂದು ಕೊಡುವ ಶಿಕ್ಷಣ ಬೇಕೆಂದು ಸ್ವಾಮಿ ವಿವೇಕಾನಂದರು ಕೂಗಿದ್ದಾರೆ. ಅವರ ಉಕ್ತಿಗಳು ನಯೀ ತಾಲೀಮಿನ ದೃಷ್ಟಿಕೋನವನ್ನೇ ಸ್ಪಷ್ಟೀಕರಿಸುತ್ತವೆ. ಬುದ್ಧಿ, ವಿವೇಕ, ದಯೆ, ನ್ಯಾಯ ಇವುಗಳನ್ನು ಬಳಸಿ, ಬೆಳಸಿ ಹೊಸ ಸಮಾಜ ನಿರ್ಮಾಣ ಮಾಡಬೇಕು. ಇಂಥ ಸಮಾಜದಲ್ಲಿ ಬೆಳೆಯುವ ಮಕ್ಕಳು ಸರಳರೂ, ಉದಾರರೂ, ಪರಸ್ಪರ ಪ್ರೇಮಿಗಳೂ, ಅಸಾಧಾರಣ ಬುದ್ಧಿಯುಳ್ಳವರೂ, ಕೃತಿಶಾಲಿಗಳೂ, ಮಹತ್ ಕಾರ್ಯದಲ್ಲಿ ಜೀವನ ಸೌಂದರ್ಯ ಕಾಣುವವರೂ, ರಚನಾತ್ಮಕ ಹಾಗೂ ವಿಧಾಯಕ ಕಾರ್ಯಕರ್ತರೂ, ಸಹಕಾರ ಜೀವಿಗಳೂ, ಸ್ವಾವಲಂಬಿಗಳೂ ಆಗುವರು. ಇಂಥ ವ್ಯಕ್ತಿಗಳಿಂದ ಕೂಡಿದ ಸಮಾಜವು ಎಂತಹ ಎಡರು ಗಳನ್ನಾದರೂ ಎದುರಿಸಬಲ್ಲುದು; ಆದರ್ಶವೆಂದೆನಿಸಿಕೊಳ್ಳಬಲ್ಲುದು. ಇಂತಹ ಆದರ್ಶ ಸಮಾಜ ರಚನೆಯು ವಿಶ್ವಕ್ಕೆಲ್ಲ ಬೇಕು. ಭಾರತಕ್ಕಂತೂ ಮೊದಲು ಬೇಕು.

ಭಾರತೀಯರಲ್ಲಿ ಪರಸ್ಪರ ವೈಷಮ್ಯಗಳು ದೂರಾಗಿ, ಒಕ್ಕಟ್ಟು ಬೆಳೆಯ ಬೇಕು. ಸೌಹಾರ್ದ ಭಾವವು ಒಡಮೂಡಬೇಕು. ಸದ್ಯದ ಸಮಾಜದ ಕೊಳೆಗಳನ್ನೆಲ್ಲ ಕಿತ್ತೊಗೆದು ಹೊಸ ಸಮಾಜವನ್ನು ನಿರ್ಮಿಸಬೇಕು. ಅಂಥ ಸಮಾಜದಲ್ಲಿ ಪರಸ್ಪರ ದ್ವೇಷ, ಸುಲಿಗೆ, ಅನ್ಯಾಯಗಳಿಗೆ ಸ್ಥಾನವಿರಕೂಡದು. ಸತ್ಯ, ನ್ಯಾಯ, ಪ್ರೇಮ ಇವೇ ಜನರ ನಡೆನುಡಿಗಳಲ್ಲಿ ಪ್ರತಿಬಿಂಬಿತವಾಗ ಬೇಕು. ಈ ಬೀಜಗಳನ್ನು ಶಾಲೆಗಳಲ್ಲಿಯೇ ಬಿತ್ತಬೇಕು. ಶಾಲೆಯು ಈ ಹೊಸ ಸಮಾಜದ ಒಂದು ಚಿಕ್ಕ ಮಾದರಿಯಾಗಬೇಕು. ಅಲ್ಲಿ ಎಲ್ಲ ಜಾತಿ, ಮತ, ಪಂಥಗಳ ಮಕ್ಕಳು ಪರಸ್ಪರ ಪ್ರೇಮದಿಂದ ಕೂಡಿ, ಆಡಿ ಮಾಡಿ ಸಂಸ್ಕಾರಗಳನ್ನು ಹೊಂದಲು ಯೋಗ್ಯ ಸನ್ನಿವೇಶಗಳನ್ನು ಒದಗಿಸಿ ಕೊಡ ಬೇಕು. ಎಲ್ಲರೂ ಒಂದಾಗಿ ಅಡಿಗೆ ಮಾಡಬೇಕು, ಊಟ ಮಾಡಬೇಕು. ಅವರಲ್ಲಿ ನಿಜವಾದ ಸೌಹಾರ್ದ ಭಾವವು ನೆಲೆಸಬೇಕು. ಇದೊಂದು ದೊಡ್ಡ ಸಾಮಾಜಿಕ ಕ್ರಾಂತಿಯು. ಶಿಕ್ಷಣ ಕ್ಷೇತ್ರವು ಇದರ ರಂಗಭೂಮಿಯು.

**ಆರ್ಥಿಕ ತಳಹದಿ:**

ಅಹಿಂಸಾತ್ಮಕ ಸಮಾಜವು ಹೊಸ ಜಗತ್ತು. ಅದಕ್ಕೆ ಅಧ್ಯಾತ್ಮಿಕ ಹಿನ್ನೆಲೆಯಿದೆ. ಆದರೆ ಅದು ಕಾಲ್ಪನಿಕವಾದುದು ಮಾತ್ರ ಅಲ್ಲ: ಆಕಾಶ ಕುಸುಮವಲ್ಲ. ಅದು ವ್ಯವಹಾರ್ಯವಾದುದು. ಆ ಸಮಾಜದ ಘಟಕಗ ಳಲ್ಲಿ ಕೆಲವೊಂದು ಲಕ್ಷಣಗಳು ಅವೆ. ಅವುಗಳನ್ನು ತಿಳಿಯಬೇಕು: ಎಂದರೆ ಮಾತ್ರ ಆ ಸಮಾಜದ ವ್ಯಾವಹಾರಿಕ ಸ್ವರೂಪವು ಗೊತ್ತಾಗು ವದು. ಯಾವುದೊಂದು ಹೊಸ ಸಮಾಜವು ಬಹು ಕಾಲ ಬಾಳುವುದಾ ದರೆ, ಅದಕ್ಕೆ ಆರ್ಥಿಕ ಭದ್ರತೆ ಬೇಕು. ೧೨ನೆಯ ಶತಮಾನದಲ್ಲಿ ಶ್ರೀ ಬಸವಣ್ಣನವರು ವೀರಶೈವ ಸಮಾಜವನ್ನು ಪುನರ್ರಚನೆ ಮಾಡಿದರು. "ಕಾಯಕವೇ ಕೈಲಾಸ" ಎಂಬ ತತ್ತ್ವವನ್ನು ಸಮಾಜ ಮಂದಿರದ ಆಡಿ ಗಲ್ಲಾಗಿ ಇರಿಸಿದರು. ಈ ತತ್ವದಲ್ಲಿ ಭೌತಿಕ ದೃಷ್ಟಿಯೂ ಅದೆ; ಅಧ್ಯಾತ್ಮಿಕ ತೇಜವೂ ಅಡಗಿದೆ. ಪ್ರತಿಯೊಬ್ಬನು ದೈಹಿಕ ಶ್ರಮ ಮಾಡಲೇಬೇಕು. ಒಂದು ಸಮಾಜದಲ್ಲಿ ಎಲ್ಲ ತರದ ಕಾಯಕ (ಉದ್ಯೋಗ)ಗಳನ್ನು ಮಾಡುವ ವರಿರಬೇಕು; ಎಂದರೇನೆ ಆ ಸಮಾಜವು ಸ್ವಯಂಪೂರ್ಣ ಘಟಕವಾಗು ವದು. ಇದುವೆ ಸಮಾಜ ರಚನೆಯ ಆರ್ಥಿಕ ತಳಹದಿ. ಕಾಯಕಗಳಲ್ಲಿ

ಮೇಲು–ಕೀಳುಗಳಿಲ್ಲ. ಕಾಯಕಗಳಿಂದ ಕಲ್ಪಿತವಾದ ವರ್ಣಭೇದವನ್ನು ಕಿತ್ತೊಗೆದು ಸಮದೃಷ್ಟಿಯ ಬೀಜವನ್ನು ಬಿತ್ತಿದರೆ ಮಾತ್ರ ಸಮಾಜ ವೃಕ್ಷವು ವಿಸ್ತೀರ್ಣವಾಗಿ ಬೆಳೆದು, ಉತ್ತಮ ಫಲಗಳನ್ನು ಕೊಡುವದು. ಸಮಾಜದಲ್ಲಿ ಶಿಸ್ತು–ಸಂಘಟನೆಗಳು ನೆಲೆಗೊಳ್ಳುವವು. ಸಮಾಜ ಮಂದಿರವು ಭದ್ರವೂ, ಸುಂದರವೂ ಆಗುವದು. ಪರದೇಶಗಳಲ್ಲಿ ನಿರುದ್ಯೋಗಿಗಳಿಗೆ ಸರಕಾರವು (Dole) ಪರಿಹಾರ ಹಣ ಕೊಡುವದು. ಇದು ನಿರುದ್ಯೋಗ ಸಮಸ್ಯೆಯನ್ನು ಎದುರಿಸಲು ತಕ್ಕ ಉಪಾಯವಲ್ಲವೆಂದು ಗಾಂಧೀಜಿಯವರ ಖಂಡಿತ ಮತವಿತ್ತು. ಶಾಸನ ಸಭೆಯ ಸದಸ್ಯರ ಚುನಾವಣೆ ಸಮಯದಲ್ಲಿ ಈ ಪರಿಹಾರ ಹಣದ ದರವನ್ನು ಹೆಚ್ಚಿಸಬೇಕೆಂದು ಕೆಲವರು ಪ್ರಯತ್ನಿಸುವರೇ ಹೊರತು ದುಡಿದುಣ್ಣುವವರಾಗಬೇಕೆಂದು ಬಯಸುವದಿಲ್ಲ. ಈ ತರದ ಹೇಡಿ ಜೀವಿಗಳನ್ನು ತಯಾರಿಸುವದು ಗಾಂಧೀಜಿಯವರಿಗೆ ಸೇರುತ್ತಿದ್ದಿಲ್ಲ. ಇಂತಹ ಯೋಜನೆಯು ಹಿಂದುಸ್ತಾನದ ಪರಿಸ್ಥಿತಿಗೆ ಹೊಂದಿಕೆಯಾಗುವದಿಲ್ಲವೆಂದೂ, ಅಂತಹದು ಬೇಕಿಲ್ಲವೆಂದೂ ಅವರ ಸ್ಪಷ್ಟ ಅಭಿಪ್ರಾಯವಿತ್ತು. ಆಂತೆಯೇ ಹೊಸ ಸಮಾಜ ನಿರ್ಮಾಣ ಕಾರ್ಯದಲ್ಲಿ ಮೊದಲು ಮೆಟ್ಟಲು ಎಂದರೆ ಶ್ರಮಜೀವಿಗಳನ್ನು ತಯಾರಿಸುವದು. ಬಹುಕಾಲದಿಂದ ಬಂದ ವರ್ಣಭೇದದ ಪ್ರಭಾವದಿಂದಲೂ, ಪ್ರಚಲಿತ ಶಿಕ್ಷಣದ ಪರಿಣಾಮವಾಗಿ ಉಂಟಾದ ಮನೋದೌರ್ಬಲ್ಯದಿಂದಲೂ, ಇವರು ಈ ಕೆಲಸ ಮಾಡುವವರು, ಅವರು ಆ ಕೆಲಸ ಮಾಡುವವರು ಎಂಬ ಭೇದ ನೀತಿ ಇನ್ನೂ ಸಮಾಜದಲ್ಲಿ ತುಂಬಿದೆ. ಇದು ಅಳಿದ ಹೊರತು ಸಮಾಜಕ್ಕೆ ಹೊಸ ಸ್ವರೂಪ ಬರುವದು ಸಾಧ್ಯವಿಲ್ಲ. ಶ್ರಮಗೌರವ (Dignity of Labour) ತತ್ತ್ವವು ಬಳಿಕೆಯಲ್ಲಿ ಬರಬೇಕು. ಇದರ ಬಗೆಗೆ ಹೇಳಿಕೆ ಕೇಳಿಕೆಗಳು ಸಾಕು; ಕೃತಿ ಬೇಕು. ಸ್ವಾವಲಂಬಿ ವ್ಯಕ್ತಿಗಳ ನಿರ್ಮಾಣವೇ ಸ್ವಾವಲಂಬಿ ಸಮಾಜದ ಮೊದಲ ಹೆಜ್ಜೆ.

**ಸಾಮಾಜಿಕ ಸಮತೆ:**

"ಬೆವರು ಸುರಿಸಿ ಉಣ್ಣು" ಎಂಬುದು ಈ ಸಮಾಜದ ಆರ್ಥಿಕ ತಳಹದಿ. ಸಾಮಾಜಿಕ ಸಮತೆಯು ಅದರ ನೈತಿಕ ತಳಹದಿ. ಹುಟ್ಟಿನಿಂದಾಗಲಿ–ಧರ್ಮದಿದಾಗಲಿ, ಉದ್ಯೋಗಗಳಿಂದಾಗಲಿ ವಿಷಮತೆಯನ್ನು

ಕಲ್ಪಿಸುವದು ಅವ್ಯವಹಾರ್ಯ, "ಕರ್ಣದಲ್ಲಿ ಜನಿಸಿದವರುಂಟೇ" ಎಂದು ಬಸವಣ್ಣನವರು ಕೇಳಿದರು. ಮಾನವ ಮಾನವರಲ್ಲಿ ಭೇದವನ್ನು ಕಲ್ಪಿಸಿದವನು ಮಾನವನೇ! ದೇವರಲ್ಲ!" ಎಂದು ಗಾಂಧೀಜಿಯವರು ತಿಳಿಸಿದರು. ಈ ರೀತಿ ಹೊಸ ಸಮಾಜದ ವ್ಯಕ್ತಿಗಳು ವಿಚಾರವಾದಿಗಳು (Rationalist). ವಿವೇಕವು ಅವರ ಆಚರಣೆಯ ಒಳ ಹೊಳವು. ವ್ಯಕ್ತಿಗಳಲ್ಲಿ ದ್ವೇಷ ಸ್ಪರ್ಧೆ, ಸ್ವಾರ್ಥ ಇವು ಮಾಯವಾಗಿ, ಅವುಗಳ ಬದಲು ಪ್ರೇಮ, ಪರಸ್ಪರ ಸಹಕಾರ, ಪರೋಪಕಾರ ಬುದ್ಧಿ ಇವು ನೆಲೆಗೊಳ್ಳಬೇಕು. ಹೊಸ ಸಮಾಜದ ಪ್ರತಿಕ್ರಿಯೆಗಳೆಲ್ಲ ನೀತಿ ಪ್ರಧಾನ ಜೀವನಕ್ಕೆ ಅಂಟಿಕೊಂಡಿರಬೇಕು.

**ಸಮಾನ ಸುಸಂಧಿ:**

ಈ ಸಮಾಜದಲ್ಲಿ ಪ್ರತಿಯೊಬ್ಬನಿಗೂ ಬಾಳುವ, ಬೆಳೆಯುವ ದುಡಿಯುವ, ವಿಶ್ರಮಿಸುವ, ಶಿಕ್ಷಣ ಪಡೆಯುವ, ಔಷಧೋಪಚಾರ ಹೊಂದುವ ಇತ್ಯಾದಿ ನಾಗರಿಕನ ಹಕ್ಕುಗಳು ದೊರೆಯುವವು. ಸರಕಾರವು ಪ್ರಜೆಗಳ ಪಾಲನೆ, ಪೋಷಣೆ ಮಾಡಬೇಕು. ಸಕಲರಿಗೂ ಸಮಾನ ಸುಸಂಧಿಗಳನ್ನು (Equal opportunities for all) ಕಲ್ಪಿಸಿಕೊಡಬೇಕು. ಕೆಲವರು ಮಾತ್ರ ಮುಂದುವರಿಯಬೇಕು, ಹಿಂದುಳಿದವರು ಹಿಂದೆಯೇ ಇರಬೇಕು. ಎಂಬುದು ಶಾಶ್ವತ ನೀತಿಯಲ್ಲ. ತನ್ನ ಏಳಿಗೆಯ ಸೌಕರ್ಯಗಳನ್ನು ಉಪಯೋಗಿಸಿಕೊಳ್ಳುವ ಬುದ್ಧಿಯೂ ವ್ಯಕ್ತಿಯಲ್ಲಿ ಉಂಟಾಗುವಂತೆ ಜಾಗ್ರತಿ ಬೇಕು; ವಾತಾವರಣಬೇಕು. ಸರಕಾರದ ಲಕ್ಷ ಬೇಕು. ಬುದ್ಧಿ ಜೀವಿಗಳ, ಧನಿಕರ ಸಹಾನುಭೂತಿಯೂ ಬೇಕು; ಹೀಗಾದರೆ ಮಾತ್ರ ಪ್ರಜಾಪ್ರಭುತ್ವವು ಯಶಸ್ವಿಯಾಗುವದು.

**ರಾಜನೀತಿ:**

ಲಾರ್ಡ ಬ್ರೈಸ್ ಅವರು ತಮ್ಮ "ಆಧುನಿಕ ಪ್ರಜಾ ಪ್ರಭುತ್ವಗಳು" (Modern Democracies) ಎಂಬ ಗ್ರಂಥದಲ್ಲಿ "ಮಾನವನ ನೈತಿಕ ಮತ್ತು ಬೌದ್ಧಿಕ ಪ್ರಗತಿ ಎಷ್ಟೆಷ್ಟು ಆಗುತ್ತದೆಯೋ ಅಷ್ಟಷ್ಟು ಪ್ರಜಾಪ್ರಭುತ್ವದ ಪ್ರಗತಿ ಆಗುತ್ತದೆ" ಎಂದಿದ್ದಾರೆ.

"ಎಲ್ಲಿಯ ವರೆಗೆ ಪ್ರಜಾಪ್ರಭುತ್ವವು ಹಿಂಸಾ ಮೂಲವಾಗಿರುತ್ತದೆಯೋ ಅಲ್ಲಿಯ ವರೆಗೆ ಬಲಿಷ್ಠರದೇ ಬಾಳಾಗಿ, ದುರ್ಬಲರ ರಕ್ಷಣೆಯಾಗದು. ನಿಜವಾದ ಪ್ರಜಾಪ್ರಭುತ್ವದಲ್ಲಿ ಬಲಹೀನರಿಗೂ, ಸಿರಿವಂತರಿಗೂ, ಬಡವರಿಗೂ ಏಳಿಗೆಗೆ ಒಂದೇ ಸಮನಾದ ಅವಕಾಶವಿರುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ಹೆಸರಿಗೆ ಮಾತ್ರ ಪ್ರಜಾಪ್ರಭುತ್ವವಿದೆ. ಅವೆಲ್ಲ ಒಂದಲ್ಲ ಒಂದು ಬಗೆಯ ಸರ್ವಾಧಿಕಾರದಿಂದ ಕೂಡಿದ ಸಾಮ್ರಾಜ್ಯ ಶಾಹಿಯ ಸ್ವರೂಪವೇ ಆಗಿದೆ. ನಿಜವಾದ ರೀತಿಯಲ್ಲಿ ಪ್ರಜಾಪ್ರಭುತ್ವವೂ, ಹಿಂಸೆಯೂ ಜೊತೆಗೂಡಿ ಹೋಗಲಾರವು. ಈಗ ಹೆಸರಿಗೆ ಮಾತ್ರ ಪ್ರಜಾಭುತ್ವವೆನಿಸಿಕೊಂಡಿರುವ ರಾಷ್ಟ್ರಗಳು ಉಳಿದು ಬಾಳಬೇಕಾದರೆ ಅಹಿಂಸಾ ಮಾರ್ಗವನ್ನೇ ಅನುಸರಿಸಬೇಕು."

ಗಾಂಧೀಜಿ.

**ನಾಗರಿಕತೆ**:

ಪ್ರಜಾ ಪ್ರಭುತ್ವವು ಮಾನವ ಸಮಾಜಕ್ಕೆಲ್ಲ ಬೇಕು. ಪ್ರತಿಯೊಂದು ರಾಷ್ಟ್ರವು ಸಣ್ಣದಿರಲಿ, ದೊಡ್ಡದಿರಲಿ ಸ್ವತಂತ್ರವಾಗಿರಬೇಕು. ಬಲಿಷ್ಟರು ದುರ್ಬಲರನ್ನು ಸುಲಿಯಕೂಡದು. ಅಷ್ಟೇ ಅಲ್ಲ! ದುರ್ಬಲರನ್ನು ರಕ್ಷಿಸಬೇಕು. ಅದು ಅವರ ಕರ್ತವ್ಯ, ಇದುವೇ ಅಹಿಂಸೆಯ ದಿವ್ಯ ಸಂದೇಶ. ಮಹಾತ್ಮಾಜಿಯವರ ಮಹಾಮಂತ್ರ. ಭಾರತವು ಜಗತ್ತಿನಲ್ಲಿ ನವನಾಗರಿಕತೆಯನ್ನುಂಟು ಮಾಡಲು ಹೊರಟಿದೆ. ಇದು ಇನ್ನೊಂದು ದೇಶದವರ ಆಡಳಿತಕ್ಕೆ ಒಳಪಡುವದಿಲ್ಲ. ಇನ್ನೊಂದು ದೇಶವನ್ನು ತನ್ನ ಆಧೀನದಲ್ಲಿ ಇಟ್ಟುಕೊಳ್ಳಲೂ ಹವಣಿಸುವದಿಲ್ಲ. ವಿಶ್ವವೇ ವಿಶಾಲವಾದ ಕುಟುಂಬ. ಪ್ರತಿಯೊಬ್ಬನು ಜಗತ್ತಿನ ನಾಗರಿಕ. ಸ್ವಾತಂತ್ರ್ಯ ಪ್ರತಿಯೊಬ್ಬನ ಜನ್ಮ ಸಿದ್ಧ ಹಕ್ಕು. ಇದುವೇ ಹೊಸ ಜಗತ್ತಿನ ನಿರ್ಮಾಣದ ಕಾರ್ಯ. ಮಾನವತೆಯೇ ಜಗತ್ತಿನ ನೀತಿ. ಅದುವೇ ಜಗತ್ತಿನ ಶಾಂತಿಯ ಸೆಲೆ. ಮಾನವರೆಲ್ಲ ಒಂದೇ ದೇವರ ಮಕ್ಕಳು. ದೇವರ ದೃಷ್ಟಿಯಿಂದ ಎಲ್ಲರೂ ಸಮಾನರು. ಮಹಾತ್ಮಾಜಿಯವರ ಸಾಯಂಕಾಲದ ಪ್ರಾರ್ಥನೆಯ ಸ್ವರೂಪವೇ ಇದರ ನಿದರ್ಶನವಾಗಿತ್ತು. ಸರ್ವ ಧರ್ಮಗಳಲ್ಲಿ ಸಮಾನ ಗೌರವ ಎಂಬ ತತ್ವವನ್ನು ಆಚರಣೆಯಲ್ಲಿ ತಂದರೆ ಮಾತ್ರ ಆದರ್ಶ ಸಮಾಜ ಕಟ್ಟುವದು ಸುಲಭ ಸಾಧ್ಯವಿದೆ.

ಯಾವಾಗ ಧರ್ಮವು ಅಧೋಗತಿಗೆ ಇಳಿಯುವದೋ ಆಗ ನಾನು ಹುಟ್ಟುತ್ತೇನೆಂದು ಶ್ರೀ ಕೃಷ್ಣ ಪರಮಾತ್ಮನು ಗೀತೆಯಲ್ಲಿ ಹೇಳಿದುದುಂಟು. ಸದ್ಯದ ಜಗತ್ತು ಅವನತಿಯ ಪಾತಾಳ ಸೇರಿತು. ಮಾನವತೆ ಮಾಯವಾಯಿತು. ಸ್ವಾರ್ಥ, ಸ್ಪರ್ಧೆ, ಕೊಲೆ, ಸುಲಿಗೆಗಳು ಅಗ್ನಿಕುಂಡ ಹೂಡಿದವು. ಪ್ರಳಯ ಕಾಲವೊದಗಿತು. ಮಾನವ ಪ್ರಗತಿ ಪ್ರವಾಹವು ವಿಷ ಸಾಗರ ಸೇರಿತು. ಇಂಥ ಸಮಯದಲ್ಲಿ ಮಹಾತ್ಮಾಜಿಯವರು ಹೊಸ ಜಗತ್ತನ್ನೇ ನಿರ್ಮಿಸಲು ತಮ್ಮ ಹೊಸ ಸಂದೇಶ ಸಾರಿದರು. ಅದುವೇ ಆಕಾಶವಾಣಿ! ದೇವವಾಣಿ! ಮಹಾತ್ಮಾಜಿಯವರು ಯುಗ ಪುರುಷರು. ಹೊಸ ಯುಗವನ್ನು ನಿರ್ಮಿಸಿದರು. ಅಹಿಂಸೆಯು ಅವರ ಸುದರ್ಶನ ಚಕ್ರವು. ಸ್ವಾವಲಂಬನ, ಸ್ವಾತಂತ್ರ್ಯ, ಸಮಾನತೆ, ಜಗತ್ತಿನ ನಾಗರಿಕತೆ ಇವೇ ಶಾಂತಿಮಯ - ಕುರುಕ್ಷೇತ್ರದ ಕುರುಹುಗಳು. ಅವರು ಚಿತ್ರಿಸಿದ ಆದರ್ಶ ಸಮಾಜವು ಭೂಲೋಕ ಸ್ವರ್ಗವು.

---

## ೬. ಹಾಳು ಶಿಕ್ಷಣವೋ? . ಬಾಳು ಶಿಕ್ಷಣವೋ?

ಪ್ರಾಥಮಿಕ ಶಿಕ್ಷಣದಲ್ಲಿ ಅಪವ್ಯಯವಾಗಿದೆ; ಅದು ನಿರುಪಯುಕ್ತವಾಗಿದೆ; ಅಪಾಯಕರವೂ ಆಗಿದೆ; ಎಂದು ಗಾಂಧೀಜಿಯವರು ಸ್ಪಷ್ಟವಾಗಿ ಹೇಳಿದರು. ಶಿಕ್ಷಣ ತಜ್ಞರೂ ಈ ಮಾತನ್ನು ಮೇಲಿಂದ ಮೇಲೆ ಹೇಳಿದ್ದಾರೆ.

**ಅಪವ್ಯಯ:**

ಶ್ರೀ ಅನಾಥನಾಥ ಬಸು ಅವರು ತಮ್ಮ "ಆಧುನಿಕ ಹಿಂದುಸ್ತಾನದಲ್ಲಿಯ ಶಿಕ್ಷಣ" ಎಂಬ ಹೊತ್ತಿಗೆಯಲ್ಲಿ ಈ ಸಂಗತಿಯನ್ನು ಸ್ಪಷ್ಟಮಾಡಿದ್ದಾರೆ. ೧ನೆಯ ವರ್ಗದಲ್ಲಿ ದಾಖಲಾದ ೧೦೦ ಹುಡುಗರಲ್ಲಿ ೨೩ ಹುಡಗರು ೪ನೆಯ ವರ್ಗವನ್ನು ದಾಟಿದರು; ಮತ್ತು ೧೩ ಹುಡುಗರು ೫ನೆಯ ವರ್ಗದಲ್ಲಿ ಉಳಿದರೆಂದು ಅವರು ವಿವರಿಸಿದ್ದಾರೆ. ಹುಡುಗಿಯರ ಪ್ರಮಾಣವಂತೂ ತೀರ ಕಡಿಮೆಯಿದೆ. ಇದೇ ರೀತಿಯಾಗಿ ಅಂಕೆ ಸಂಖ್ಯೆಗಳ ಪರಿಶೀಲನೆಮಾಡಿ ಹುಡುಗರು ೧೦೦ಕ್ಕೆ ೨೭ರಷ್ಟು, ಹುಡುಗಿಯರು ೧೪ರಷ್ಟು, ೪ನೆಯ ಇಯತ್ತೆಯವರಿಗೆ ಮುಟ್ಟುವರೆಂದು ಶ್ರೀ ದಿನಕರ ದೇಸಾಯಿ ಅವರು ಅಭಿಪ್ರಾಯ ಕೊಟ್ಟಿದ್ದಾರೆ. ಶಾಲೆಗೆ ಸೇರಿದ ಮಕ್ಕಳು ಸಾಕ್ಷರರಾಗುವಷ್ಟು ಮಟ್ಟವನ್ನು ಕೂಡ ಮುಟ್ಟುವದಿಲ್ಲ. ಏಳು ವರುಷಗಳ ನಾಗರಿಕತೆಯ ಶಿಕ್ಷಣಾವಧಿಯನ್ನು ಪೂರ್ತಿ ಮಾಡುವದಂತೂ ದೂರವೇ ಉಳಿಯಿತು. ಶಾಲೆಗೆ ಹೋಗುವ ವಯಸ್ಸಿನ ಮಕ್ಕಳೆಲ್ಲರೂ ಶಾಲೆಗಳನ್ನು ಸೇರಲಿಲ್ಲ. ಶಾಲೆಗೆ ಸೇರಿದವರಲ್ಲಿ ೧೦೦ಕ್ಕೆ ೮೦ರಷ್ಟು ಮಕ್ಕಳು ನಡುವೆಯೇ ಶಾಲೆಬಿಟ್ಟು ನಿರಕ್ಷರರಾದರು. ಇದು ಪ್ರಾಥಮಿಕ ಶಿಕ್ಷಣದಲ್ಲಿಯ ಅಪವ್ಯಯವಲ್ಲದೆ ಮತ್ತೇನು?

**ನಿರುಪಯುಕ್ತತೆ:**

ಪ್ರಾಥಮಿಕ ಶಿಕ್ಷಣವು ಜೀವನೋಪಯೋಗಿಯಾಗಿ ಸಾಗಲಿಲ್ಲ. ಜೀವನದ ಸಮಸ್ಯೆಗಳನ್ನು ಎದುರಿಸಲು ಮಕ್ಕಳು ಸಿದ್ಧರಾಗಲಿಲ್ಲ. ಸುತ್ತಲಿನ ಪರಿಸ್ಥಿತಿಗೆ ಹೊಂದಿಕೆಯಾಗಿ ಶಿಕ್ಷಣವು ಸಾಗಲಿಲ್ಲ. ಬಾಳುವೆಯ ಅಗತ್ಯದ ಬೇಡಿಕೆಗಳನ್ನು ಪೂರೈಸಲಿಲ್ಲ. ಹೀಗೆ ಜೀವನದಿಂದ ಸಿಡಿದು ಬಿದ್ದ ಶಿಕ್ಷಣವು

ಜೀವನೋಪಯೋಗಿಯಾಗುವದು ಸಾಧ್ಯವೇ ಇಲ್ಲ. ಕೆಲವೊಂದು ವಿಷಯ ಗಳ ಜ್ಞಾನ ಮಾಡಿ ಕೊಡುವದೇ ವಿದ್ಯಾಭ್ಯಾಸ ಎಂಬ ಕಲ್ಪನೆಯು ಪುಸ್ತ ಕೀಯ ಜ್ಞಾನಕ್ಕೆ ಪಾಯ ಹಾಕಿತು. ಮಕ್ಕಳಿಗೆ ಎಷ್ಟು ಪುಸ್ತಕೀಯ ವಿದ್ಯೆ ಕೊಟ್ಟರೇನು? ತಮ್ಮ ಜೀವನದ ಮೂಲಭೂತ ಬೇಡಿಕೆಗಳನ್ನು ಪೂರೈಸಿ ಕೊಳ್ಳಲು ಸಮರ್ಥರನ್ನಾಗಿ ಮಾಡದಿದ್ದರೆ, ಅವರ ಜೀವನವು ವ್ಯರ್ಥವಾಗಿ ಹಾಳಾಗಬಹುದು; ಅವರು ಪರಾವಲಂಬಿಗಳಾಗುವರು. ಪರಾವಲಂಬಿ ಜೀವನವು ನಿಸ್ಸಾರ ಜೀವನವು; ನಿಷ್ಪ್ರಯೋಜಕ ಜೀವನವು. ಪ್ರಚಲಿತ ಶಿಕ್ಷಣವು ಪರಾವಲಂಬಿ ಪೀಳಿಗೆಯನ್ನೇ ತಯಾರಿಸುತ್ತದೆ. ಯಾವ ಪರೀಕ್ಷೆ ಪಾಸಾದರೇನು? ಯಾವ ಪದವಿ ದೊರಕಿಸಿದರೇನು? ಅದು ತನ್ನ ಕಾಲ ಮೇಲೆ ತಾನು ನಿಲ್ಲುವ ಸಾಮರ್ಥ್ಯವನ್ನು ವ್ಯಕ್ತಿಯಲ್ಲಿ ಉಂಟು ಮಾಡುವದೇ? ನೌಕರಿಗಾಗಿ ಪರರ ಮೋರೆ ನೋಡಬೇಕು. ನೌಕರಿ ದೊರೆತರೆ ಒಳಿತು; ಇಲ್ಲವಾದರೆ ಅವರ ಬಾಳು ಹಾಳು! ನೌಕರಿಗಾಗಿ ತರಬೇತು ಮಾಡುವದೇ ಹಿಂದಿಯ ಶಿಕ್ಷಣದ ಮೂಲ ಉದ್ದಿಶ್ಯವಾಗಿತ್ತು. ಆಂಗ್ಲರಿಗೂ ಜನತೆಗೂ ಈ ನೌಕರರೇ ಮಧ್ಯಸ್ಥಿಗಾರರು. ಮೊದಲು ಮ್ಯಾಟ್ರಿಕ್ ಪರೀಕ್ಷೆ ಪಾಸಾದ ವರಿಗೆ ಸಹ ಡೆ॥ ಕಲೆಕ್ಟರ ಸ್ಥಳಗಳು ದೊರೆತವು. ಅಂಥವರು ಹೆಚ್ಚಾದಂತೆ, ಪದವೀಧರರಿಗೆ ಮನ್ನಣೆ ದೊರೆಯಹತ್ತಿತು. ಅವರ ಸಂಖ್ಯೆಯೂ ಮೇರೆ ಮೀರಿದ ಮೇಲೆ ನಿರುದ್ಯೋಗ ಸಮಸ್ಯೆಯು ತಲೆಯೆತ್ತಿತು. ನಿರುದ್ಯೋಗದ ಹಾವಳಿಯು ಹೆಚ್ಚಾದಂತೆ, ನೌಕರಿಗಾಗಿ ತರಬೇತು ಮಾಡುವದು ವಿದ್ಯಾ ಪೀಠಗಳ ಮುಖ್ಯ ಉದ್ದೇಶವಲ್ಲವೆಂದು ಸರಕಾರವು ಕೂಗಹತ್ತಿತು. ಸಾಂಸ್ಕೃ ತಿಕ ಬೆಳವಣಿಗೆಯು ಉಚ್ಚ ಶಿಕ್ಷಣದ ಧ್ಯೇಯವೆಂದು ಸಾರಹತ್ತಿತು. ಈಗಿನ ಎಷ್ಟೋ ಪದವೀಧರರಲ್ಲಿ ನಿಜವಾದ ಸಾಂಸ್ಕೃತಿಕ ಜೀವನದ ಲಕ್ಷಣಗಳೂ ತೋರುವದಿಲ್ಲ. ಸ್ವಾವಲಂಬಿ ಜೀವನದ ಸ್ವಾರಸ್ಯವೂ ಅವರ ರಕ್ತನಾಳದಲ್ಲಿ ಸಮರಸವಾಗಿರುವದಿಲ್ಲ. ರೇಶನ್ನಿನ ಖಾತೆಯಲ್ಲಿ ಒಬ್ಬ ಪದವೀಧರನು, ಮ್ಯಾಟ್ರಿಕ್ ಪರೀಕ್ಷೆ ಪಾಸಾದವನು, ೪-೫ ನೆಯ ಇಯತ್ತೆಯ ವರೆಗೆ ಹಾಯ ಸ್ಕೂಲಿನಲ್ಲಿ ಕಲಿತವನು ಈ ಮೂವರೂ ಪಗಾರದ ಒಂದೇ ಸ್ಕೇಲಿನಲ್ಲಿ ಕೆಲಸ ಮಾಡಿದ್ದನ್ನು ನೋಡಿದರೆ ಪದವೀಧರರ ಪಿಶಾಚಿತನವು ಹೊರಬೀಳುವದು. ನಿರುದ್ಯೋಗ ಸಮಸ್ಯೆಯ ಕ್ರೌರ್ಯವು ವ್ಯಕ್ತವಾಗುವದು. ಯಾವ ಖಾತೆ

ಹೊಕ್ಕರೂ 'ಸದ್ಯಕ್ಕೆ ಸ್ಥಳವಿಲ್ಲ' ಎಂಬ ತಲೆಬರಹ ಓದಿದವನ ಹಣೆಬರಹ ವಾಗುವದು. ಇದನರಿತು ಶಿಕ್ಷಣವು ಹೆಚ್ಚು ಪ್ರಮಾಣದಲ್ಲಿ ಪ್ರಸಾರವಾಗಿದೆ ಯೆಂದು ಊಹಿಸಬಹುದು.

**ವಿದ್ಯಾಪ್ರಸಾರ:**

ಹಿಂದುಸ್ತಾನದ ಸಾಕ್ಷರತೆಯು ಪ್ರಮಾಣವು ಜಗತ್ತಿನ ಪ್ರಮುಖ ರಾಷ್ಟ್ರಗಳ ನಿರಕ್ಷರತೆಯು ಪ್ರಮಾಣಕ್ಕೆ ಸರಿಯಾಗುವದು.

**ಸಾಕ್ಷರತೆಯ ಪ್ರಮಾಣ**

| ದೇಶ | ೧೦೦ ಕ್ಕೆ. |
|---|---|
| ಇಂಗ್ಲಂಡ | ೯೪·೪ |
| ಜರ್ಮನಿ | ೯೯·೭ |
| ಜಪಾನ | ೯೯·೦ |
| ಅಮೇರಿಕಾ | ೯೫·೭ |
| ರಶಿಯಾ | ೯೯·೦ |
| ಹಿಂದುಸ್ತಾನ | ೧೬·೨ |

ನಮ್ಮ ದೇಶದಲ್ಲಿ ಓದು-ಬರೆಹ ಬಲ್ಲವರ ಸಂಖ್ಯೆಯ ಪ್ರಮಾಣ ಎಷ್ಟು ಕಡಿಮೆಯಾಗಿದೆಯೆಂಬುದಕ್ಕೆ ಮೇಲಿನ ಸಂಖ್ಯೆಗಳೇ ಸಾಕ್ಷಿಯಾಗಿವೆ.

**ಭಾರತದ ಸಾಕ್ಷರತೆಯ ಪ್ರಮಾಣ**

| ವರುಷ | ೧೦೦ ಕ್ಕೆ. |
|---|---|
| ೧೮೩೬ | ೫·೮ (೬) |
| ೧೮೯೨ | ೭·೦ |
| ೧೯೨೨ | ೮·೦ |
| ೧೯೩೨ | ೮·೦ |
| ೧೯೪೨ | ೧೬·೨ |

ಈ ಸಂಖ್ಯೆಗಳು ನಮ್ಮ ದೇಶದಲ್ಲಿ ಸಾಕ್ಷರತೆಯ ಪ್ರವಾಹವು ಎಷ್ಟು ಮಂದ ಗಾಮಿಯಾಗಿ ಸಾಗಿದೆ ಎಂಬದನ್ನು ತೋರಿಸುತ್ತವೆ. ಮೇಲಿನ ಎರಡೂ

ಸಂಗತಿಗಳಿಂದ ಹಿಂದುಸ್ತಾನದಲ್ಲಿ ಶಿಕ್ಷಣವು ಸಾಕಷ್ಟು ಭರದಿಂದ ಸಾಗಿಲ್ಲ ವೆಂದೂ, ಅತ್ಯಲ್ಪ ಪ್ರಮಾಣದಲ್ಲಿ ಸಾಗಿದೆ ಎಂದೂ ಸ್ಪಷ್ಟ. ಆದಾಗ್ಯೂ, ಕಲಿತವರ ಸಂಖ್ಯೆ ಬಹಳವಾಗಿದೆ ಎಂಬುದು ಹಳ್ಳಿಗರ ಮನೆಮಾತಾಗಿದೆ. ಇದರ ಕಾರಣವೇನು ? ಕೆಲ ಹಳ್ಳಿಗರು ತಮ್ಮ ಮನೆ-ಮಾರುಗಳನ್ನು ಹಾಳು ಮಾಡಿಕೊಂಡು ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಿದರು. ಅವರು ಪದವೀಧರರಾದರು. ಮುಂದೇನು ? ತಿಂಗಳಿಗೆ ೪೦ ರೂ. ವೇತನದ ನೌಕರಿ ದೊರೆತರೆ ಅವರ ಸೌಭಾಗ್ಯ ! ಇಲ್ಲವಾದರೆ, ಅವರ ದುರ್ಭಾಗ್ಯ ! ತಂದೆ ತಾಯಿಗಳಿಗೂ ಬುದ್ಧಿ ಬಂದಿತು. ಹೆಚ್ಚಿನ ಶಿಕ್ಷಣವು ಪ್ರಯೋಜನವಿಲ್ಲ ವೆಂದು ಮನಗಂಡರು. ಇಂಥ ತರುಣರನ್ನು ನೋಡಿದ ಹಳ್ಳಿಗರೆಲ್ಲ ಬೊಟ್ಟು ಕಚ್ಚಿದರು. ಶಿಕ್ಷಣದಲ್ಲಿ ನಿರುತ್ಸಾಹ ತಳೆಯಲಾರಂಭಿಸಿದರು.

**ಮೂಲ ದೋಷ:**

ಪ್ರಾಥಮಿಕ ಶಾಲಾ ಪ್ರಮಾಣ ಪತ್ರ ಪರೀಕ್ಷೆ, ಮ್ಯಾಟ್ರಿಕ್ ಪರೀಕ್ಷೆ ಇಲ್ಲವೆ ಪದವಿ ಪರೀಕ್ಷೆ ಪಾಸಾದ ಕೂಡಲೆ ನೌಕರಿಯನ್ನು ಸೇರಬೇಕೆಂದು ತರುಣನ ತಲೆಯಲ್ಲಿ ಸುಳಿದರೆ ಆಶ್ಚರ್ಯವಿಲ್ಲ. ' ಯಾಕಂದರೆ ನೌಕರರನ್ನೇ ತಯಾರಿಸುವ ಉದ್ದಿಶ್ಯದಿಂದ ಶಾಲೆ-ಕಾಲೇಜುಗಳು ಆರಂಭವಾದವು. ಅಂದಿ ನಿಂದ ಇಂದಿನ ವರೆಗೂ ಉದ್ದಿಶ್ಯಗಳು ಬದಲಾಗಲಿಲ್ಲ. ತರುಣರ ಮನೋ ವೃತ್ತಿಯೆಲ್ಲ ಅದೇ ಮಾರ್ಗದಲ್ಲಿ ಓಡಹತ್ತಿತು. ಆ ಧೋರಣವೇ ಸ್ಥಿರವಾಗಿ ಉಳಿಯಿತು. ಪರಿಸ್ಥಿತಿ ಬದಲಾದರೂ ಉದ್ದೇಶ ಬದಲಾಗಲಿಲ್ಲ. ಮನೋ ವೃತ್ತಿ ಬದಲಾಗಲಿಲ್ಲ. ಪರಿಸ್ಥಿತಿಗೆ ಹೊಂದಿಕೆಯಾಗಿ ಜೀವಿಸುವದು ಶಿಕ್ಷ ಣದ ಒಂದು ಉದ್ದೇಶವೆಂದು ತರುಣರ ಮನೋಭೂಮಿಕೆಯಲ್ಲಿ ಮೊಳಕೆ ಯೊಡೆಯಲಿಲ್ಲ. ನೌಕರಿ ಸಿಕ್ಕದಿದ್ದರೆ, ತಮ್ಮ ತಂದೆ-ತಾಯಿಗಳ ಉದ್ಯೋಗ ದಲ್ಲಿ ನೆರವಾಗಲಿಲ್ಲ. ಅದೇ ಉದ್ಯೋಗದಲ್ಲಿ ತೊಡಗಿ, ಬಾಳಿ ಬೆಳೆಯ ಬೇಕೆಂದು ಹಂಬಲಿಸುವದಂತೂ ದೂರವೇ ಉಳಿಯಿತು. ಅಲ್ಲದೆ ಅಂಥ ತರುಣರಲ್ಲಿ ಮನೋದೌರ್ಬಲ್ಯವೂ ಹೆಚ್ಚಾಗತೊಡಗಿತು. ಇದು ಕಡಿಮೆ, ಅದು ಹೆಚ್ಚು ಎಂಬ ತಾರತಮ್ಯ ಭಾವವು ಬಲವಾಗಿ ಬೆಳೆಯಿತು. ಗ್ರಾಮ ವಾಸ, ಗ್ರಾಮ ಉದ್ಯೋಗ ಇವು ತಲೆಬೇಸರಾದವು. ಇದರಿಂದ ತರುಣರ

ಬೆನ್ನೆಲುಬೇ ಮುರಿದಂತಾಯಿತು; ನಗರ ವಾಸನೆಗಳ ಬಲಿಗೆ ಸಿಕ್ಕರು. ದೇಹ ದಾರ್ಢ್ಯವು ಮಾಯವಾಯಿತು. ಆಯುಷ್ಯಮಾನವು ಕಡಿಮೆ ಯಾಯಿತು. ನಮ್ಮ ದೇಹ, ಬಲ, ನೀತಿ ಮುಂತಾದವುಗಳೆಲ್ಲ ಪಾಶ್ಚಾತ್ಯ ಸಂಸ್ಕೃತಿಯ ಮೋಹಕ್ಕೆ ಮೀಸಲಾದವು. ಕಲಿತವರ ಸಂಖ್ಯೆ ಕಡಿಮೆಯಿ ದ್ದರೂ, ನಿರುದ್ಯೋಗದ ಸಮಸ್ಯೆ ಎದುರಾಳಿಯಾಗಿದೆ. ತರುಣರ ಮನೋ ವೃತ್ತಿಯೇ ಬದಲಾಗಬೇಕು. ಇಂಗ್ಲಂಡ, ಅಮೇರಿಕಾ, ದೇಶಗಳಲ್ಲಿ ನಿರು ದ್ಯೋಗಿಗಳಿಗೆ ವೇತನ (Dole) ದೊರೆಯುತ್ತದೆ. ಈ ಪದ್ಧತಿಯಿಂದ ನಿರುದ್ಯೋಗ ಸಮಸ್ಯೆಯು ಒಗೆಹರಿಯುವದಿಲ್ಲ; ಯಾಕಂದರೆ ನಿರುದ್ಯೋಗಿಗ ಳಲ್ಲಿ ಆಲಸ್ಯವು ಬೆಳೆಯುತ್ತ ಹೋಗುವದೇ ಹೊರತು ಕಾರ್ಯ ಪ್ರವೃತ್ತಿ ಉಂಟಾಗುವದಿಲ್ಲ. ಕುಳಿತಲ್ಲಿಯೇ ಊಟ ದೊರೆತರೆ, ಅವನು ಸ್ಥಳಬಿಟ್ಟು ಹೋಗುವದೇ ಇಲ್ಲ. ಶಿಕ್ಷಣದ ದೃಷ್ಟಿಯಿಂದ ಈ ತರದ ಪದ್ಧತಿಯೂ ಒಳ್ಳೆ ತಲ್ಲ. ನಿರುದ್ಯೋಗ ಸಮಸ್ಯೆಯನ್ನು ಬಿಡಿಸಬೇಕಾದರೆ, ಅವರಿಗೆ ಉದ್ಯೋಗ ಹಚ್ಚಬೇಕೇ ಹೊರತು ಅವರಲ್ಲಿ ಭಿಕ್ಷಾವೃತ್ತಿ ಬೆಳೆಸುವದು ಯುಕ್ತವಲ್ಲ. ನಮ್ಮ ತರುಣರಲ್ಲಿ ಭಿಕ್ಷಾವೃತ್ತಿಯೂ ಬೇಡ, ಆಲಸ್ಯವೃತ್ತಿ ಯೂ ಬೇಡ; ಅವರು ಬೆವರು ಸುರಿಸಿ ಉಣ್ಣಲಿ, ಅಂಥ ಸಾಮರ್ಥ್ಯ ಉಂಟಾ ಗಲಿ, ಅಂಥ ಮನೋವೃತ್ತಿ ಬೆಳೆಯಲಿ ಎಂದು ಮಹಾತ್ಮಾಜಿಯವರ ಮನೀ ಷೆಯಾಗಿತ್ತು. ನಿಜವಾದ ಶಿಕ್ಷಣವು ಸ್ವಾವಲಂಬಿ ವ್ಯಕ್ತಿಗಳನ್ನು ತಯಾರಿಸ ಬೇಕು. ತರುಣರಲ್ಲಿ ಶ್ರಮ ಗೌರವತತ್ತ್ವವನ್ನು ಬಿಂಬಿಸಬೇಕು. ಸಮಾ ಜದ ಆರ್ಥಿಕ ತಳಗಲ್ಲೇ ಬಿಚ್ಚಿ ಹೋಗಿದೆ; ಹೊಸ ತಳಗಲ್ಲು ಹಾಕಿ, ಹೊಸ ಪೀಳಿಗೆಯು ಹೊಸ ಮಂದಿರವನ್ನು ಕಟ್ಟಬೇಕು. ಎಂದರೆ ಭಾರತದ ಸಂಸ್ಕೃತಿ ಮತ್ತೆ ತಲೆಯೆತ್ತುವದು. ಭಾರತೀಯರು ವೇಷ-ಮೋಹಗಳನ್ನು ಬಿಟ್ಟು ಕಾಯಾ ವಾಚಾ ಭಾರತೀಯರಂತೆಯೇ ತೋರಬೇಕು, ಹಾಗೆ ಜೀವಿಸ ಬೇಕು. ಪಾಶ್ಚಾತ್ಯ ಸಂಸ್ಕೃತಿಯ ಮೋಹ ತೊಲಗಿ, ಪೌರ್ವಾತ್ಯ ಸಂಸ್ಕೃತಿ ಯನ್ನು ಮೆಚ್ಚಬೇಕಾದರೆ, ಶಿಕ್ಷಣದಲ್ಲಿ ಉತ್ಪಾದಕ ಉದ್ಯಮಗಳಿಗೆ ಸ್ಥಾನ ಕೊಡಬೇಕು. ನಮ್ಮ ಜೀವನದ ಪ್ರಾಥಮಿಕ ಬೇಡಿಕೆಗಳನ್ನು ಪೂರೈಸುವ ಉದ್ಯಮಗಳೇ ಶಿಕ್ಷಣದ ವಾಹನಗಳಾಗಬೇಕು. ಇದುವೇ ಗಾಂಧೀಜಿಯ ವರು ತೋರಿಸಿದ ಪರಿಹಾರ ಮಾರ್ಗ.

## ಉದ್ಯಮ ಮೂಲ ಶಿಕ್ಷಣ:

ಇನ್ನೊಂದು ಪ್ರಶ್ನೆ ಇಲ್ಲಿ ಉಂಟಾಗಬಹುದು. ಸಾಮಾನ್ಯ ಶಿಕ್ಷಣದ ಜೊತೆಗೆ ಉದ್ಯಮ ಶಿಕ್ಷಣವನ್ನು ಕೊಡಬೇಕು. ಎಂದರೆ ಕೆಲವು ಉದ್ಯೋಗ ಗಳನ್ನು ಕಲಿಸಬೇಕು. ಮಕ್ಕಳು ಆ ಉದ್ಯೋಗದಲ್ಲಿ ಪ್ರವೀಣರಾಗಿ ಸ್ವಾವ ಲಂಬಿಗಳಾಗ ಬಲ್ಲರು. ಹೀಗೇಕೆ ಮಾಡಬಾರದೆಂದು ಕೇಳಬಹುದು. ಮಹಾ ತ್ಮಾಜಿಯವರ ದರ್ಶನದಲ್ಲಿ ಒಂದು ಮಹತ್ವದ ತತ್ವವು ಅಡಕವಾಗಿದೆ. ಉದ್ಯ ಮವು ಶಿಕ್ಷಣದ ಮಾಧ್ಯಮವು. ಉದ್ಯೋಗದ ದ್ವಾರಾ ಮಗುವಿನ ವಿಕಾಸ ವಾಗುವದು. ಇದುವೇ ಅನುಬಂಧ ತತ್ವದ ಸೂತ್ರವು. ನೂಲುವಾಗ ಮಗುವು ಎಷ್ಟೋ ಸಮಸ್ಯೆಗಳನ್ನು ಎದುರಿಸಬೇಕಾಗುವದು. ಅವುಗಳನ್ನು ಬಗೆ ಹರಿ ಸಲು ಆಲೋಚಿಸುವನು, ಹೊಸ ಅನುಭವಗಳನ್ನು ಪಡೆಯುವನು, ಸಂಸ್ಕಾರ ಹೊಂದುವನು. ಇದು ಶಿಕ್ಷಣವಲ್ಲವೇ ? ಹತ್ತಿಯನ್ನು ಆರೆದು, ಹಂಜಿಯನ್ನು ಮಾಡಿ, ನೂಲು ತೆಗೆದು, ಬಟ್ಟೆ ತಯಾರಿಸುವಷ್ಟರಲ್ಲಿ ಅನೇಕ ವಿಧಾನಗಳನ್ನು ದಾಟುವನು. ಆಗ ಸಾಮಾನ್ಯ ವಿಜ್ಞಾನ, ಇತಿಹಾಸ, ಭೂಗೋಲ ಇತ್ಯಾದಿ ವಿಷಯುಗಳ ಜ್ಞಾನವನ್ನು ಪಡೆಯುವನು. ಇದು ಕಲಿಯುವ ಸ್ವಾಭಾವಿಕ ಮಾರ್ಗವು, ಅನುಬಂಧ ತಂತ್ರವು. ಉದ್ಯೋಗವೇ ಜ್ಞಾನದ ಮೂಲವು. ಆದರಿಂದ ಮೂಲ ಶಿಕ್ಷಣವೆಂಬ ಹೆಸರು ಕೊಡಲಾಗಿದೆ.

## ಮೂರು ಮೂಲ ಉದ್ಯೋಗಗಳು:

ಉತ್ಪಾದಕ ಉದ್ಯಮವು ಶಿಕ್ಷಣದ ಮಾಧ್ಯಮವಾಗಬೇಕೆಂದು ಒಪ್ಪಿ ದಲ್ಲಿ, ಯಾವ ಉದ್ಯೋಗಗಳಿಗೆ ಸ್ಥಾನ ದೊರೆಯಬೇಕು ? ಹಿಂದುಸ್ತಾನವು ಹಳ್ಳಿಗಳ ನಾಡು. ಕೃಷಿಯು ಮೂಲ ಉದ್ಯೋಗವು. ೧೦೦ ಕ್ಕೆ ೮೦ ರಷ್ಟು ಜನರು ಕೃಷಿ ಕರ್ಮದಲ್ಲಿ ತೊಡಗಿರುವರು. ನಮ್ಮ ಶರೀರದ ಬೆಳೆಗೆಗೆ ಆಹಾರವು ಆವಶ್ಯವಾಗಿದೆ. ಇದು ಮೂಲ ಬೇಡಿಕೆ. ಈ ಉದ್ಯಮವು ಮೂಲ ಉದ್ಯೋಗ ವಾಗಬೇಕು. ಎರಡನೆಯದು ಬಟ್ಟೆ. ಮನುಷ್ಯನ ಮಾನ ರಕ್ಷಣೆಯ ಹೊದಿ ಕೆಯೇ ಬಟ್ಟೆ. ಹತ್ತಿಯನ್ನು ಬಟ್ಟೆಯನ್ನಾಗಿ ಪರಿವರ್ತಿಸುವ ವಿಧಾನಗಳೆಲ್ಲ ಮಕ್ಕಳಿಗೆ ಗೊತ್ತಿರಬೇಡವೇ ? ಮೂರನೆಯದು ಆಶ್ರಯ. ಬಿಸಿಲು, ಗಾಳಿ, ಮಳೆ, ಚಳಿಗಳಿಂದ ರಕ್ಷಿಸಲು ಮನುಷ್ಯನಿಗೆ ಮನೆ ಬೇಕು. ಈ ಮೂಲ

ಉದ್ಯೋಗಗಳು ಮಾನವ ಪ್ರಗತಿಯ ಪ್ರವಾಹವನ್ನು ಚಿತ್ರಿಸುವವು. ಅತಿ ಪ್ರಾಚೀನಕಾಲದಲ್ಲಿ ಮಾನವನು ಹೇಗಿದ್ದ, ಹೇಗೆ ಬದಲಿಸುತ್ತ ಸಾಗಿದ, ಇಂದು ಅವನು ಯಾವ ಪರಿಸ್ಥಿತಿಯಲ್ಲಿರುವನು? ಎಂಬುದನ್ನು ತಿಳಿಸುವವು. ಆದರಿಂದ ಅವು ಜ್ಞಾನದ ವಾಹಕಗಳು. ಜೀವನದ ಪ್ರಾಥಮಿಕ ಬೇಡಿಕೆಗಳು ಮೂರು; ಅನ್ನ, ಅರಿವೆ, ಆಸರ. ಅವುಗಳನ್ನು ಪೂರೈಸುವ ಉದ್ಯಮಗಳೇ ಮೂಲ ಉದ್ಯೋಗಗಳು. ಅವು ಯಾವವೆಂದರೆ:

೧. ಕೈ ತೋಟದ ಕೆಲಸ--- ಕೃಷಿಕರ್ಮ,

೨. ನೂಲುವದು—ನೇಯುವದು,

೩. ಕಾಗದ ಹಾಗೂ ರಟ್ಟಿನ ಕೈ ಕೆಲಸ— ಕಟ್ಟಿಗೆ ಹಾಗೂ ಬೆತ್ತದ ಕೆಲಸ.

ಮುಂಬಯಿ ಸರಕಾರದವರು ಈ ಮೂರು ಉದ್ಯೋಗಗಳನ್ನು ಆರಿಸಿದ್ದಾರೆ. ಪ್ರತಿಯೊಂದು ಸಾಲೆಯಲ್ಲಿಯೂ ಈ ಮೂರು ಉದ್ಯೋಗಗಳು ನಡೆಯುವವೋ ಎಂದು ಕೇಳಬಹುದು. ಒಕ್ಕಲತನದ ಸಾಲೆಗಳನ್ನು ಹೆಚ್ಚಾಗಿ ತೆರೆಯಬೇಕಾದರೆ, ಅನೇಕ ಸೌಕರ್ಯಗಳು ಬೇಕು. ಮೊದಲು ಭೂಮಿ ಬೇಕು. ನೀರಿನ ಪೂರೈಕೆಯಿರಬೇಕು. ಸಾಧನ ಸಾಮುಗ್ರಿಗಳು ಬೇಕು. ದನಕರುಗಳು ಬೇಕು. ಇವೆಲ್ಲ ಸವಲತ್ತುಗಳುಳ್ಳ ದೊಡ್ಡ ಶಾಲೆಗಳಲ್ಲಿ ಮಾತ್ರ ಒಕ್ಕಲುತನ ಉದ್ಯೋಗವನ್ನು ಸೇರಿಸಬಹುದು. ಸಾಕಷ್ಟು ಪ್ರಾಯೋಗಿಕ ಸಲಕರಣೆಗಳಿಲ್ಲದೆ ಕೃಷಿ ಉದ್ಯಮವನ್ನು ಶಾಸ್ತ್ರಬದ್ಧವಾಗಿ ಕಲಿಸುವದು ಸಾಧ್ಯವೂ ಇಲ್ಲ. ಅನುಕೂಲತೆಗಳನ್ನು ನೋಡಿ ಕೆಲವು ಸಾಲೆಗಳನ್ನು ಆರಿಸಬೇಕಾಗುವದು. ನೂಲುವ ಉದ್ಯೋಗವನ್ನು ಹೆಚ್ಚು ಸಾಲೆಗಳಲ್ಲಿ ಸುರುವು ಮಾಡುವದು ಸುಲಭ ಸಾಧ್ಯವಾಗಿದೆ. ಬಹಳ ಸಾಮಾನುಗಳು ಬೇಕಾಗುವದಿಲ್ಲ. ಬೇಕಾದ ಸಾಮಾನುಗಳಿಗೆ ಬೆಲೆ ಬಹಳ ಬೀಳುವದಿಲ್ಲ. ಅಲ್ಲದೆ, ಅನೇಕ ಹಳ್ಳಿಗಳಲ್ಲಿ ನೇಕಾರಿಕೆಯು ಈಗಲೂ ನಡೆಯುತ್ತಿದೆ. ಪ್ರತ್ಯಕ್ಷ ನಿರೀಕ್ಷಣೆಯಿಂದಲೂ ಸಾಲೆಯ ಕೆಲಸವನ್ನು ಸುಧಾರಿಸಬಹುದು. ಈ ಉದ್ಯೋಗಕ್ಕೆ ಬೇಕಾದ ಕಚ್ಚಾ ಮಾಲೆಂದರೆ ಹತ್ತಿ. ಅದು ಬಹಳ ಹಳ್ಳಿಗಳಲ್ಲಿ ದೊರೆಯುತ್ತದೆ. ಬೆಳೆಯುವ ಭಾಗಗಳಿಂದ ಹತ್ತಿಯನ್ನು ತರಿಸಿಕೊಳ್ಳುವದು ಕಠಿಣವಲ್ಲ. ಈ ಕಾರಣಗಳ ಮೂಲಕ ನೂಲುವ ನೇಯುವ ಉದ್ಯೋಗಗಳ

ಸಾಲೆಗಳು ಹೆಚ್ಚಾಗುವ ಸಂಭವವಿದೆ. ಮೂರನೆಯ ಉದ್ಯೋಗವು ಬಡಿಗ ತನ. ಇದು ಸಹ ಜೀವನಾವಶ್ಯಕ ಅನೇಕ ವಸ್ತುಗಳನ್ನು ತಯಾರಿಸಿಕೊಡು ವದು; ಅಲ್ಲದೆ, ಜೀವನವನ್ನು ಹಗುರಾಗಿಯೂ ಸುಖಮಯವಾಗಿಯೂ ಮಾಡಲು ಸಹಾಯಕವಾಗಿದೆ.ಅವಕ್ಕೆ ಬೇಕಾಗುವ ಕಚ್ಚಾ ವಸ್ತುಗಳೆಂದರೆ:– ಕಾಗದ, ಬಣ್ಣ, ಕಟ್ಟಿಗೆ, ಚಿತ್ರ ಇತ್ಯಾದಿ. ಇದಕ್ಕೆ ಎಲ್ಲೆಡೆಗಳಲ್ಲಿಯೂ ತಕ್ಕ ಸೌಕರ್ಯಗಳಿಲ್ಲ. ಬಡಿಗತನವನ್ನು ಶಾಸ್ತ್ರೀಕ್ತವಾಗಿ ಕಲಿಸಬೇಕಾದರೆ, ಅನೇಕ ಉಪಕರಣಗಳೂ ಬೇಕು. ಸ್ಥಳವೂ ಹೆಚ್ಚು ಬೇಕು. ಈ ಕಾರಣಗಳ ಮೂಲಕ ಈ ಉದ್ಯೋಗವನ್ನು ನಿರ್ದಿಷ್ಟ ಸಾಲೆಗಳಲ್ಲಿ ಮಾತ್ರ ಸುರುವು ಮಾಡುವದು ಸಾಧ್ಯವಿದೆ. ಮೂಲ ಉದ್ಯೋಗಗಳು ಮೂರು ಎಂದು ಸರಕಾರದವರು ಆರಿಸಿದರೂ, ಮೂರೂ ಉದ್ಯೋಗಗಳನ್ನು ಎಲ್ಲ ಸಾಲೆಗಳಲ್ಲಿ ಸುರುವು ಮಾಡುವದು ಸಾಧ್ಯವೂ ಇಲ್ಲ; ಇಷ್ಟವೂ ಅಲ್ಲ. ಒಂದು ಸಾಲೆಯಲ್ಲಿ ಮೂಲ ಉದ್ಯೋಗವು ಒಂದೇ ಇರತಕ್ಕದ್ದು. ಇತರ ಉದ್ಯಮಗಳು ಉಪ ಉದ್ಯಮಗಳ ಸ್ಥಾನವನ್ನು ಪಡೆಯುವವು; ಎಂದರೆ ಕೆಲಮಟ್ಟಿಗೆ ಮಾತ್ರ ಅವುಗಳಿಗೆ ಲಕ್ಷ್ಯ ಪೂರೈಸಲಾಗುವದು. ಹಳ್ಳಿಯ ಕೈಗಾರಿಕೆಗಳ ಮುಖಾಂತರ ನಮ್ಮ ಮಕ್ಕಳಿಗೆ ಸಾಮಾನ್ಯ ಶಿಕ್ಷಣ ದೊರೆಯಬೇಕೆಂದು ಗಾಂಧೀಜಿಯವರು ಹೇಳಿದ್ದಾರೆ. ಆ ಹಳ್ಳಿಗಳಲ್ಲಿ ನಡೆಯುತ್ತಿರುವ ಪೂರಕ ಉದ್ಯೋಗಗಳನ್ನು ಸಾಲೆಗಳಲ್ಲಿ ಉಪ ಉದ್ಯೋಗಗಳನ್ನಾಗಿ ಸೇರಿಸಲು ಅವಕಾಶವಿದೆ. ಹಾಳು ಶಿಕ್ಷಣದ ಗೋಳನ್ನು ಮನಗಂಡು ಮಹಾತ್ಮರು ಬಾಳು ಶಿಕ್ಷಣದ ತಿರುಳನ್ನು ತಿಳಿಸಿದ್ದಾರೆ.

**ಹಳೆ-ಹೊಸ ವಿಚಾರಗಳ ತಿಕ್ಕಾಟ:**

ಇನ್ನು ಮೇಲೆ, ನಮಗೆ ಹಾಳು ಶಿಕ್ಷಣವೇ ಬೇಕೆ? ಬಾಳು ಶಿಕ್ಷಣವು ಬೇಕೆ? ಜೀವನವನ್ನು ಹಾಳು ಮಾಡುವ ಶಿಕ್ಷಣವು ಹಳೆಯದು, ಜೀವನ ವನ್ನು ಸುಂದರವಾಗಿ ಹೆಣೆಯುವ ಶಿಕ್ಷಣವು ಹೊಸತು. ಶ್ರೀ ದಿವಾಕರ ರಂಗರಾಯರ ಶಬ್ದಗಳಲ್ಲಿ ಹೇಳುವದಾದರೆ, "ಶಿಕ್ಷಣವೆಂದರೆ ಸಂಸ್ಕಾರ. ........ನಮ್ಮ ದೇಹ, ಮನ, ನೀತಿ, ಆತ್ಮ ಇವುಗಳಲ್ಲಿ ಮಾರ್ಪಾಡುಗಳಾಗಿ ನಾವು ಮುಂದರಿದರೆ, ಪ್ರಗತಿ ಹೊಂದಿದರೆ, ಅದು ಒಳ್ಳೇ ಸಂಸ್ಕಾರ, ಒಳ್ಳೇ

ಶಿಕ್ಷಣ. ಇಲ್ಲದಿದ್ದರೆ, ಅದು ಕಾಡು, ಕೀಳು ಶಿಕ್ಷಣ." ಬಾಳಿನಿಂದ ಬಿಚ್ಚಿ ಹೋಗಿ, ಹೊತ್ತಿಗೆಯ ಹುಳವಾಗಿ, ತಾಂತ್ರಿಕ ಜ್ಞಾನವಿಲ್ಲದ ನಿಷ್ಕ್ರಿಯ ಶಿಕ್ಷಣವನ್ನು ಪಡೆಯುವದು ಮರಣಕ್ಕಿಂತ ಕೀಳೆಂದು ಸ್ವಾಮಿ ವಿವೇಕಾನಂದರೂ ಕೂಗಿದರು. ಹಳೆ ಹೊಸ ವಿಚಾರಗಳ ತಾಕಲಾಟದ ತುಲನೆಯನ್ನು ಕೆಳಗಿನಂತೆ ತೋರಿಸಬಹುದು.:

| ಹಳೆಯದು | ಹೊಸತು: |
|---|---|
| (೧) ಶಿಕ್ಷಣವು ಕೆಲಜನರಿಗೆ ಮಾತ್ರ ಅವಶ್ಯ | (೧) ಶಿಕ್ಷಣವು ಸರ್ವರಿಗೂ ಆಗತ್ಯ |
| (೨) ಪಟ್ಟಣಿಗರ ಕಡೆಗೆ ಲಕ್ಷ್ಯ | (೨) ಗ್ರಾಮನಿಷ್ಠ ಶಿಕ್ಷಣ |
| (೩) ಪುಸ್ತಕೀಯ ವಿದ್ಯೆಗೆ ಪ್ರಾಧಾನ್ಯ | (೩) ವೃತ್ತಿ ಮೂಲ ಶಿಕ್ಷಣ |
| (೪) ನೌಕರಿಗಾಗಿ ವಿದ್ಯೆ | (೪) ನಾಗರಿಕತೆಗಾಗಿ ಶಿಕ್ಷಣ |
| (೫) ಕಲಿತವರಿಗೂ ಇತರರಿಗೂ ಕೃತ್ರಿಮ ಅಂತರ | (೫) ಸೇವಾಬುದ್ಧಿ, ಶ್ರಮ, ಗೌರವ, ಶ್ರಮ ಜೀವಿಗಳಲ್ಲಿ ಪ್ರೇಮ |
| (೬) ಪರಪುಷ್ಟ ಜೀವನ | (೬) ನವಜೀವನ (ಸ್ವಾವಲಂಬಿ ಜೀವನ) |
| (೭) ಕೃತ್ರಿಮ ಶಿಕ್ಷಣ | (೭) ಜೀವನ ಸನ್ನಿವೇಶಗಳ ಮುಖಾಂತರ ಶಿಕ್ಷಣ |
| (೮) ನಿರ್ಜೀವ ಶಿಕ್ಷಣ (ನಿಷ್ಕ್ರಿಯ ಶಿಕ್ಷಣ) | (೮) ಸಜೀವ ಶಿಕ್ಷಣ (ಕ್ರಿಯಾತ್ಮಕ ಶಿಕ್ಷಣ) |
| (೯) ಪರೀಕ್ಷೆಗಳ ಪಾಶ | (೯) ಪ್ರಾತ್ಯಕ್ಷಿಕ ಅಥವಾ ಪ್ರಾಯೋಗಿಕ ಶಿಕ್ಷಣ |
| (೧೦) ನಿರುದ್ಯೋಗ | (೧೦) ಕೈಗಾರಿಕೆಗಳಿಗೆ ಉತ್ತೇಜನ |

| | |
|---|---|
| (೧೧) ವಿಷಯ ಪದ್ಧತಿ | (೧೧) ಸಮವಾಯ ಪದ್ಧತಿ |
| (೧೨) ಪಾಶ್ಚಾತ್ಯ ಸಂಸ್ಕೃತಿಯ ಮೇಲ್ಮೆ | (೧೨) ಭಾರತ ಸಂಸ್ಕೃತಿಗಳ ಪುನರುಜ್ಜೀವನ |
| (೧೩) ಯಾಂತ್ರಿಕ ಜೀವನ | (೧೩) ಕಲಾಜೀವನ |
| (೧೪) ದಾಸ್ಯರಾಷ್ಟ್ರದ ಶಿಕ್ಷಣ | (೧೪) ಸ್ವತಂತ್ರ ಭಾರತದ ಶಿಕ್ಷಣ |
| (೧೫) ಹಾಳು ಶಿಕ್ಷಣ | (೧೫) ಬಾಳು ಶಿಕ್ಷಣ |

"ಹೊಸ ಶಿಕ್ಷಣವು ಹೆಸರಿಗೆ ತಕ್ಕದ್ದಾಗಬೇಕಾದರೆ, ನಮ್ಮಲ್ಲಿದ್ದ ನಿರುತ್ಸಾಹವು ಹೋಗಿ ಉತ್ಸಾಹವು ಉಂಟಾಗಬೇಕು. ದಾರಿದ್ರ್ಯದ ಸ್ಥಳದಲ್ಲಿ ಅನ್ನವು ನಿರ್ಮಾಣವಾಗಬೇಕು; ನಿರುದ್ಯೋಗದ ಎಡೆಯಲ್ಲಿ ಉದ್ಯೋಗವು ಬೇರೂರಬೇಕು; ಜಗಳಗಳು ಮಾಯವಾಗಿ ಐಕ್ಯವು ನೆಲೆಗೊಳ್ಳಬೇಕು: ನಮ್ಮ ಚಿಕ್ಕ ಮಕ್ಕಳು ಒಂದು ಉದ್ಯೋಗವನ್ನು ಚನ್ನಾಗಿ ಕಲಿತು ಅದರ ಮುಖಾಂತರ ಓದು-ಬರೆಹದ ಪರಿಚಯವನ್ನು ಮಾಡಿಕೊಳ್ಳಲು ಸಮರ್ಥರಾಗಬೇಕು."

**ಗಾಂಧೀಜಿ**

# ೭. ಸಾಮುದಾಯಿಕ ಜೀವನ

ಹೊಸ ಸಮಾಜ ರಚನೆಯು ಮೂಲ ಶಿಕ್ಷಣದ ಆದರ್ಶವೆಂದು ಹಿಂದೆ ಹೇಳಿದೆ. ಈ ಆದರ್ಶವನ್ನು ಮುಟ್ಟುವದು ಮಗುವಿಗೆ ವೈಯಕ್ತಿಕವಾಗಿ ಶಿಕ್ಷಣ ಕೊಡುವುದರಿಂದ ಸಾಧ್ಯವಿಲ್ಲ. ಹಾಗೆ ಮಾಡುವುದು ಸ್ವಾಭಾವಿಕವೂ ಅಲ್ಲ. ಮಗುವನ್ನು ಮಕ್ಕಳ ಸಮಾಜದಲ್ಲಿಯೇ ಬೆಳೆಯಿಸಬೇಕು. ಇದು ಅತ್ಯಗತ್ಯವು.

**ಮೂಲ ದೋಷ:**

ಸದ್ಯದ ಶಿಕ್ಷಣ ಪದ್ಧತಿಯಿಂದ ಜೀವನವು ಎರಡು ಭಾಗವಾಗಿ ಹೋಗಿದೆ. ವಿದ್ಯಾಭ್ಯಾಸದ ಅವಧಿ ಮೊದಲ ಜೀವನದ್ದು, ಸಮಾಜ ಜೀವನ ಎರಡನೆಯದು. ಮೊದಲ ಜೀವನದ ಅವಧಿಯಲ್ಲಿ ಮಕ್ಕಳು ಓದು, ಬರೆಹ ಕಲಿಯಬೇಕು; ಗಣಿತ, ಇತಿಹಾಸ, ಭೂಗೋಲ, ಸಾಹಿತ್ಯ, ಕಲೆಗಳನ್ನು ಅಭ್ಯಸಿಸಬೇಕು. ವಿದ್ಯಾಭ್ಯಾಸ ಮುಗಿದ ಮೇಲೆ, ಅವರು ಸಮಾಜ ಜೀವನದಲ್ಲಿ ಕಾಲಿಡಬೇಕು. ಇದು ತಾರ್ಕಿಕ ವಿಚಾರ ಸರಣಿಯೇ ಹೊರತು ವಾಸ್ತವತೆಯ ಚಿತ್ರವಲ್ಲ. ಇದುವೇ ಮೂಲ ದೋಷ. ಸುಮಾರು ೧೫-೨೦ ವರುಷಗಳ ವರೆಗೆ ಓದಿನಲ್ಲಿ ಮಗ್ನರಾಗಿದ್ದ ಮಕ್ಕಳು ಮುಂದಿನ ಜೀವನದ ಗಾಳಿಗೋಪುರ ಕಟ್ಟುವರು. **ಆಚಾರ್ಯ ವಿನೋಬಾ** ಅವರ ಶಬ್ದಗಳಲ್ಲಿ ಹೇಳುವದಾದರೆ:

“ನಾನು ಶಿವಾಜಿಯಾಗಿ ವೀರ ಸೇವೆ ಮಾಡುತ್ತೇನೆ, ವಾಲ್ಮೀಕಿಯಂತೆ ಕವಿಯಾಗುತ್ತೇನೆ. ನ್ಯೂಟನ್‌ನಂತೆ ಸಂಶೋಧನೆ ಮಾಡುತ್ತೇನೆ ಎಂದು ಯೋಚಿಸುತ್ತಾನೆ........ಗೃಹಕೃತ್ಯದ ಆಲೋಚನೆಯಲ್ಲಿ ಬಿದ್ದು, ಹೊಟ್ಟೆಯ ಪ್ರಶ್ನೆ ಎದುರಿಗೆ ನಿಂತೊಡನೆ ಮನುಷ್ಯ ಬಹಳ ದೀನನಾಗುತ್ತಾನೆ.

ಜೀವನದ ಹೊಣೆಯ ಚಿಂತೆ ಮಕ್ಕಳಿಗೆ ಬಂದರೆ ಅವರ ಜೀವನ ಬಾಡುವುದೆಂದು ಅನೇಕರ ಮತ. ಜೀವನದ ಹೊಣೆಯ ಚಿಂತನದಿಂದ

ಜೀವನ ಬಾಡುವುದಾದರೆ, ಅಂತಹ ಜೀವನ ಜೀವನವೇ ಅಲ್ಲ........ಜೀವನವು ಭಯಂಕರವಾದರೆ, ಕೇವಲ ಕಲಹವಾದರೆ, ಮಕ್ಕಳಿಗೆ ಅದರಲ್ಲಿ ಪ್ರವೇಶ ಕೊಡಲು ಅವಕಾಶ ಕೊಡಬಾರದು; ನಾವೂ ಬದುಕಬಾರದು. ಅದು ಅನುಭವಯೋಗ್ಯವಾದರೆ, ಮಕ್ಕಳು ಅದರಲ್ಲಿ ಪ್ರವೇಶಿಸಲಿ. ಜೀವನವಿಲ್ಲದೆ ಶಿಕ್ಷಣ ದೊರೆಯಲಾರದು. ಭಗವದ್ಗೀತೆಯಂಥ ಅಕ್ಷಯ, ಅದ್ಭುತ ಶಿಕ್ಷಣ ಅರ್ಜುನನಿಗೆ ಕುರುಕ್ಷೇತ್ರದಲ್ಲಿಯೇ ಆಯಿತು. ಹಾಗೆಯೇ ಜೀವನ ಕ್ಷೇತ್ರದಲ್ಲಿ ನಮಗೆ ಜ್ಞಾನೋದಯವಾಗಬೇಕು. ಜೀವನ ಕ್ಷೇತ್ರದಲ್ಲಿ ಮಾತ್ರ ಶಿಕ್ಷಣ ದೊರೆಯಬಲ್ಲದು.

ಕರ್ತವ್ಯದ ಇದುರಿನಲ್ಲಿ ಅರ್ಜುನನಿಗೆ ಅನೇಕ ಸಂಶಯಗ್ರಸ್ತ ಪ್ರಶ್ನೆಗಳು ಉದ್ಭವವಾದವು. ಅವಕ್ಕೆ ಉತ್ತರ ಕೊಡಲು ಭಗವದ್ಗೀತೆಯ ಉಪದೇಶ ವಾಯಿತು. ಇದಕ್ಕೆ ಶಿಕ್ಷಣವೆಂದು ಹೆಸರು.................

ಮೊದಲು ಭಗವದ್ಗೀತೆಯಲ್ಲಿ ತರಬೇತು ಮಾಡಿ, ನಂತರ ಅರ್ಜುನನನ್ನು ಕುರುಕ್ಷೇತ್ರಕ್ಕೆ ತಳ್ಳಲಿಲ್ಲ. ಆದ್ದರಿಂದಲೇ ಅರ್ಜುನನು ಗೀತೆಯನ್ನು ಜೀರ್ಣಿಸಿಕೊಂಡ. ನಾವು ಜೀವನ ಸಿದ್ಧತೆಯ ಜ್ಞಾನವನ್ನು ಜೀವನದಿಂದ ಪ್ರತ್ಯೇಕಿಸಿದ್ದೇವೆ. ಇಂದಿನ ಶಿಕ್ಷಣ ಪದ್ಧತಿಯಿಂದ ಸಿದ್ಧವಾಗುವದು ಸಾವೇ."

ಪ್ರೌಢ ಜೀವನಕ್ಕೆ ಮಕ್ಕಳನ್ನು ಅಣಿಮಾಡಬೇಕೆಂಬ ತತ್ತ್ವವು ಮಾನ್ಯವಾಗಿದೆ. ಆದರೆ ಈ ಕಾರ್ಯವು ಶಾಬ್ದಿಕ ಬೋಧೆಯಿಂದ ಸಾಗಿದೆ; ಮಕ್ಕಳ ಪ್ರತ್ಯಕ್ಷ ಜೀವನ ಸನ್ನಿವೇಶಗಳ ಮುಖಾಂತರ ಸಾಗಬೇಕಾಗಿದೆ. ಮೂಲ ಶಿಕ್ಷಣ ಯೋಜನೆಯಲ್ಲಿ ಇದು ಅತ್ಯಂತ ಮಹತ್ವವಾದ ಅಂಗವು.

**ಜೀವಿಕೆಯು ಕಲೆ :**

ಜೀವಿಕೆಯು ಒಂದು ಕಲೆ. ಯಾವುದಾದರೊಂದು ಕಲೆಯನ್ನು ಸಾಧಿಸುವದು ಬರೀ ಓದಿನಿಂದ ಸಾಧ್ಯವಿಲ್ಲ. ನಮ್ಮ ದೇಹವು ನೀರಿನ ಮೇಲೆ ತೇಲ ಬಲ್ಲುದು ಎಂದು ಆರ್ಕಿಮಿಡಿಸ್‌ನ ಸಿದ್ಧಾಂತವನ್ನು ಓದಿ ತಿಳಿದು ಕೊಳ್ಳಬಹುದು; ಈಸುವ ಜನರನ್ನು ನೋಡಿಯಾದರೂ ನಾವು ಈ ತತ್ತ್ವವನ್ನು ತಿಳಕೊಳ್ಳಬಹುದು. ಇಷ್ಟರಿಂದಲೇ ನಾವು ಒಮ್ಮೆಲೆ ನೀರಲ್ಲಿ

ಬೀಳಲಾರೆವು. ನಿಧಾನವಾಗಿ ನೀರಲ್ಲಿ ಬಿದ್ದು, ಅನುಭವ ಗಳಿಸಿ, ಈಸುವ ಕಲೆಯನ್ನು ಕ್ರಮೇಣ ಸಾಧಿಸಬೇಕಾಗುವದು. ಜೀವಿಕೆಯ ಕಲೆಯನ್ನು ಸ್ವೈವಶ ಮಾಡಿಕೊಳ್ಳುವದೂ ಅದರಂತೆಯೇ. ಅನುಭವವೇ ಈ ಕಲೆಯ ಸಾಧನದ ಸೂತ್ರವು.

ಅಮೇರಿಕೆಯ ಶಿಕ್ಷಣ ತಜ್ಞ ಜಾನ್ ಡ್ಯೂಯಿ ಅವರು ಇದೇ ವಿಚಾರ ವನ್ನು ಮುಂಡಿಸಿದ್ದಾರೆ. ಅವರು ಮೂರು ಮಾತುಗಳನ್ನು ಸ್ಪಷ್ಟ ಮಾಡಿರು ವರು.

೧. ಪ್ರತಿಯೊಬ್ಬ ವ್ಯಕ್ತಿಯು ಆತ್ಮಗೌರವ, ಸ್ವಾವಲಂಬನ ಮತ್ತು ಕುಶಲ ಕೆಲಸಗಳನ್ನು ತೋರಿಸುವವನಾಗಬೇಕು. ತನ್ನ ಹಾಗು ಅವನ ಮೇಲೆ ಅವಲಂಬಿಸಿದವರ ಉದರ ಪೋಷಣೆ ಮಾಡುವವನಾಗಬೇಕು. ಅವನ ಕೆಲಸದ ಅರಿವು ಅವನಿಗೆ ಉಂಟಾಗಬೇಕು.

೨. ಒಬ್ಬನ ಕೆಲಸವು ಇತರರ ಕೆಲಸದ ಮೇಲೆ ಪರಿಣಮಿಸುವ ದೆಂಬ ಅರಿವು ಪ್ರತಿಯೊಬ್ಬನಲ್ಲಿ ಉಂಟಾಗಬೇಕು.

೩. ಈಗಿನ ಉದ್ಯೋಗದ ಕ್ರಿಯೆಗಳು ಹಾಗು ಪದ್ಧತಿಗಳು ನಿಸರ್ಗ ಹಾಗೂ ಸಮಾಜ ವಿಜ್ಞಾನಗಳ ಅಭ್ಯಾಸದ ಮೇಲೆ ನಿಂತಿವೆ ಇದನ್ನೂ ತಿಳಿಯಬೇಕು.

ನಮ್ಮ ಮನೆಯಲ್ಲಿ ಉಪಯೋಗಿಸುವ ಅನೇಕ ವಸ್ತುಗಳ ಬಗೆಗೆ ಸರಿ ಯಾಗಿ ತಿಳಿದುಕೊಳ್ಳಬೇಕಾದರೆ, ವಿವಿಧ ವಿಜ್ಞಾನಗಳಲ್ಲಿ ಪರಿಜ್ಞಾನ ಬೇಕಾ ಗುವದು. ಈಗಿನ ಸಾಮಾಜಿಕ ಜೀವನವು ಅಷ್ಟು ಕ್ಲಿಷ್ಟವಾಗಿದೆ. ಅದ ರಿಂದ ಮಗುವು ಸಮಾಜಜೀವಿಯಾಗಿ ಬೆಳೆಯುವದು ಅಗತ್ಯವಿದೆ. “ಬಡಿಗ ತನ, ಕಮ್ಮಾರಿಕೆ, ನೇಯ್ಗೆ, ಹೊಲಿಗೆ, ಅಡಿಗೆ ಇವು ಜೀವನದ ಹಾಗೂ ಶಿಕ್ಷಣದ ಪದ್ಧತಿಗಳಾಗಬೇಕು. ಅವು ಕಲಿಯತಕ್ಕ ವಿಷಯಗಳು ಮಾತ್ರ ಅಲ್ಲ..............ಶಾಲೆಯು ಸಾಮುದಾಯಿಕ ಜೀವನದ ಜೀತನ ಸ್ವರೂ ಪವಾಗಬೇಕು. ಅದು ಕೇವಲ ಪಾಠ ವಿಷಯಗಳನ್ನು ಕಲಿಸತಕ್ಕ ಸ್ಥಳ ವಲ್ಲ” **ಜಾನ್ ಡ್ಯೂಯಿ.**

ಇದೇ ವಿಚಾರವು ಮೂಲ ಶಿಕ್ಷಣ ಯೋಜನೆಯ ತಳಹದಿಯಾಗಿದೆ.

**ಸಾಮುದಾಯಿಕ ಜೀವನದ ತತ್ತ್ವಗಳು:**

ಶಾಲೆಯು ಮಕ್ಕಳ ಸಮಾಜದ ಸ್ವರೂಪವು. ಬಾಲಕನು ಒಂಟಿಗನಾಗಿ ಬೆಳೆಯಲು ಬಯಸುವದಿಲ್ಲ. ತನ್ನ ಗೆಳೆಯರೊಡನೆ ಕೂಡುವನು; ಕೂಡಿ ಆಡುವನು; ಆಡಿ ಅನುಭವ ಗಳಿಸುವನು; ಬೆಳೆಯುವನು. ಇದು ನಿಸರ್ಗ ನಿಯಮವು.

**೧. ಕರ್ತ್ತವ್ಯದ ಅರಿವು:**

ಮಗುವು ಸ್ವಭಾವತಃ ಸಂಘಜೀವಿ. ಸಂಘ ಪ್ರವೃತ್ತಿಯು ಒಂದು ಹುಟ್ಟು ಗುಣವು. ಬಾಲಕನು ಸಮಾಜದಲ್ಲಿ ಒಂಟಿಯಾಗಿ ಬಾಳಲಾರ; ತಾನು ಸಮಾಜದ ಒಂದು ಘಟಕ ಎಂಬ ಅರಿವು ಅವನಿಗೆ ಉಂಟಾಗಬೇಕು. ಸಮಾಜದ ಹಿತವನ್ನು ಬಯಸುವದು ತನ್ನ ಕರ್ತ್ತವ್ಯವೆಂದು ಅವನು ತಿಳಿಯ ಬೇಕು. ಅನುಭವ ಹಾಗು ಪ್ರಯೋಗಗಳ ಮುಖಾಂತರ ಅವನಲ್ಲಿ ಈ ಅರಿವು ಉಂಟಾಗಬೇಕು. ಇದು ಸಾಮುದಾಯಿಕ ಜೀವನದ ಮೊದಲ ನೆಯ ಶಿಕ್ಷಣ.

**ಒಕ್ಕಟ್ಟಿನ ಬಲ:**

ಮಕ್ಕಳು ಸಮೂಹದಲ್ಲಿ ಬಾಳಿ ಬೆಳೆಯುವರು; ಆದರೆ ಅವರು ಹೇಗೆ ಬೆಳೆಯಬೇಕೆಂಬುದು ನಮ್ಮ ಸಮಸ್ಯೆ. ಒಮ್ಮುಖದಿಂದ ಓಡುವಂತೆ ಅವರು ಬೆಳೆಯಬೇಕು. ಅವರಲ್ಲಿ ಪರಸ್ಪರ ಪ್ರೇಮ, ಬಂಧುತ್ವ, ಒಕ್ಕಟ್ಟು ಇವು ಉಂಟಾಗಬೇಕು. ಎಳೆತನದಲ್ಲಿಯೇ ಈ ಗುಣಗಳು ಅವರಲ್ಲಿ ಹುಟ್ಟಿ ಬೆಳೆ ಯದಿದ್ದರೆ, ಸಮಾಜಕ್ಕೆ ಒಂದು ಆಘಾತವೇಸರಿ! ಕೂಡಿ ಇರುವುದೂ ಒಂದು ಕಲೆ. ತಕ್ಕ ವಾತಾವರಣವನ್ನುಂಟು ಮಾಡಿ, ಮಕ್ಕಳಿಗೆ ಈ ಕಲೆ ಕೈವಶ ವಾಗುವಂತೆ ಮಾಡಬೇಕು. "ಕೂಡಿ ಬಾಳುವ ಕಲೆಯು ಪೋಷಕ, ವಿಧಾ ಯಕ, ಕ್ರಿಯಾತ್ಮಕವಾದುದು. ಕೂಡಿ ಬಾಳುವ ಅಸಾಮರ್ಥ್ಯವು ಕಲೆ, ವಿಜ್ಞಾನ, ಧರ್ಮ,–ಸತ್ಯ ಹಾಗು ಶಾಶ್ವತ ಮೂಲ್ಯವನ್ನೆಲ್ಲ ನಾಶ ಮಾಡು ವದು." **ಡಬ್ಲು. ಎಮ್. ರಾಯಬರ್ನ.** ಅದರಿಂದ ಕೂಡಿ ಬಾಳುವ ಕಲೆಯು ಮಾನವ ಜಾತಿಗೆ ಅಗತ್ಯವಾದುದು. ಈ ಪಾಠ ಶಾಲೆಗಳಲ್ಲಿ ದೊರೆಯಲಿಲ್ಲ; ಪ್ರತ್ಯಕ್ಷ ಜೀವನದಲ್ಲಿ ಅದು ಬೆರೆಯಲಿಲ್ಲ. ಅಲ್ಲದೆ, ಹಿಂದು ಸ್ತಾನದಲ್ಲಿ ಜಾತೀಯ ಸಂಸ್ಥೆಗಳು ಹುಟ್ಟಿದವು. ಈ ಕಾರಣಗಳ ಮೂಲಕ

ಪರಸ್ಪರ ಪ್ರೇಷಾಸೂಯೆಗಳು, ಕೊಲೆ–ಸುಲಿಗೆಗಳು ಅಮಾನುಷ ರೀತಿಯಲ್ಲಿ ವ್ಯಕ್ತವಾದುವು. ಇದರಿಂದ ರಾಷ್ಟ್ರಕ್ಕೆ ದೊಡ್ಡ ಪೆಟ್ಟು ಬಿದ್ದಿತು. ಶಾಬ್ದಿಕ ಬೋಧೆಯು ಇವಕ್ಕೆ ಪರಿಹಾರವಲ್ಲ. ಕೂಡಿ ಬಾಳುವ ತತ್ತ್ವವು ಎಳೆಯ ಮಕ್ಕಳ ರಕ್ತನಾಳದಲ್ಲಿ ಸೇರಬೇಕು. ಅದು ನಾಡಿನ ನಾಡಿ ಎಂಬ ಅರಿವು ಅವರಲ್ಲಿ ಉಂಟಾಗಬೇಕು. ಮಕ್ಕಳಲ್ಲಿ ಸಾಮಾಜಿಕ ಜೀವನದ ಕಲ್ಪನೆ ಬೇರೂರಬೇಕು. ಶಾಲೆಯ ವಾತಾವರಣದಲ್ಲಿ ತಕ್ಕ ಬದಲಾವಣೆಯಾಗ ಬೇಕು, ಜಾತೀಯ ಶಾಲೆಗಳು ಅಳಿಯಬೇಕು. ಹರಿಜನರಿಗಾಗಿ, ಲಮಾಣಿ ಜನರಿಗಾಗಿ, ಮುಸಲ್ಮಾನರಿಗಾಗಿ ಪ್ರತ್ಯೇಕ ಸಾಲೆಗಳ ಏರ್ಪಾಡು ಮಾಡಿದ್ದ ರಿಂದ ಸಮಾಜದ ಒಕ್ಕಟ್ಟು ಸಡಿಲಾಯಿತು; ಇಕ್ಕಟ್ಟು ಬಿಕ್ಕಟ್ಟುಗಳು ತಲೆ ಯೆತ್ತಿದವು. ಧನಿಕ–ಬಡವ, ಕುಲವಂತ ಕುಲಹೀನ, ಸ್ಪೃಶ್ಯ–ಅಸ್ಪೃಶ್ಯ ಈ ದ್ವಂದಗಳು ಮಾಯವಾಗಿ, ಸಾಮಾಜಿಕ ಸಮತೆ ಸಾಲೆಯ ವಾತಾವರ ಣದಲ್ಲಿ ಕಂಡು ಬರಬೇಕು. ಸಿರಿವಂತರ ಹಾಗೂ ಬಡವರ ಮಕ್ಕಳು, ಅಧಿ ಕಾರಿಗಳ ಹಾಗು ಕೂಲಿಕಾರರ ಮಕ್ಕಳು ಹೆಗಲಿಗೆ ಹೆಗಲು ಹಚ್ಚಿ ಶಾಲೆ ಯಲ್ಲಿ ಕೆಲಸ ಮಾಡಬೇಕು. ಕೂಡ್ರುವ ಸ್ಥಳದಲ್ಲಿ, ಮಾಡುವ ಕೆಲಸದಲ್ಲಿ, ಕುಡಿಯುವ ನೀರಿನಲ್ಲಿ ಯಾವ ಭೇದವೂ ಇರಕೂಡದು. ಎಲ್ಲ ಮಕ್ಕಳನ್ನೂ ಶಿಕ್ಷಕರು ಸಮದೃಷ್ಟಿಯಿಂದ ನೋಡಬೇಕು. ಶಾಲೆಯ ಸಾಮಾಜಿಕ ಜೀವ ನದಲ್ಲಿ ಇದು ಅತ್ಯಂತ ಮಹತ್ವವಾದುದು. ಮೂಲಶಿಕ್ಷಣ ಸಾಲೆಗಳಲ್ಲಿ ಯಾವದೇ ತರದ ಭೇದ ಭಾವವಿಲ್ಲ.

**(೩) ಸಹಕಾರ :**

ಕೂಡಿಬಾಳುವ ಕಲೆಯು ಸಾಮುದಾಯಿಕ ಜೀವನದ ಸೊಬಗು; ಅದು ಮಕ್ಕಳಲ್ಲಿ ಬೆಳೆಯಬೇಕಾದರೆ, ಅವರಲ್ಲಿ ಕೂಡಿ ಕೆಲಸಮಾಡುವ ಪ್ರೇರಣೆ ಉಂಟಾಗಬೇಕು; ಪರಸ್ಪರ ಸಹಕಾರ ಬೆಳೆಯಬೇಕು; ರಚನಾತ್ಮಕ ವಿಚಾರವು ಅರಳಬೇಕು. ಸಾಲೆಯು ಒಂದು ಸಾಹಕಾರಿಕ ಸಂಸ್ಥೆಯಾಗ ಬೇಕು. ಮಕ್ಕಳಲ್ಲಿ ಸಹಕಾರ ಹುಟ್ಟುವ ಬಗೆ ಹೇಗೆ? ಅದು ಬರುವುದು ಓದಿನಿಂದಲ್ಲ, ರೂಢಿಯಿಂದ. ಈ ರೂಢಿ ಮೊದಲು ಹಿರಿಯರಲ್ಲಿ ಬೇಕು. ಮನೆಯಲ್ಲಿ ಹಿರಿಯರು ಸಹಕಾರದಿಂದ ನಡೆದರೆ, ಕಿರಿಯರು ಅದನ್ನು ಅನುಸರಿಸುವರು. ಅದರಂತೆ ಶಾಲೆಯಲ್ಲಿ ಶಿಕ್ಷಕರೊಳಗೆ ಪರಸ್ಪರ

ಸಹಕಾರ ಒಡೆದು ಕಾಣಬೇಕು; ಎಂದರೆ ಮಕ್ಕಳಲ್ಲಿ ಸಹಕಾರ ಪ್ರವೃತ್ತಿ ಒಡಮೂಡುವದು. ಸಾಹಕಾರಿಕ ವಿಚಾರವನ್ನು ಬೆಳೆಯಿಸಲಿಕ್ಕೆ ಸಂಧಿ ಬೇಕು. ಮೂಲ ಶಿಕ್ಷಣ ಸಾಲೆಗಳಲ್ಲಿ ಮಕ್ಕಳಿಗೆ ಅನೇಕ ಸಾಹಕಾರಿಕ ಚಟುವಟಿಕೆಗಳನ್ನು ಕೊಡಲಾಗುವದು. ಅವರು ಯಾವುದೊಂದು ಗುಂಪಿನಲ್ಲಿ ಸೇರಿ ಕೆಲಸ ಮಾಡುವರು. ಉದ್ಯೋಗದ, ಸಾಮಾಜಿಕ, ನೈಸರ್ಗಿಕ ಚಟುವಟಿಕೆಗಳು ಅನುಬಂಧದ ಸಾಧನಗಳು. ಈ ಚಟುವಟಿಕೆಗಳನ್ನು ಮಕ್ಕಳು ಅನೇಕಸಲ ಸಾಮೂಹಿಕವಾಗಿ ಮಾಡುವರು. ಪಾಲಕರ ದಿನ, ಮಕ್ಕಳ ದಿನ, ಶಾಲೆಯ ವಾರ್ಷಿಕೋತ್ಸವ, ಗಾಂಧೀ ಜಯಂತಿ, ಕ್ರೈಸ್ತನ ದಿನ ಮುಂತಾದ ದಿನಾಚರಣೆಯನ್ನು ಮಾಡುವಾಗ, ಬಾಲಕರಲ್ಲಿ ಗುಂಪುಗಳನ್ನು ಮಾಡಿ, ಬೇರೆ ಬೇರೆ ಕೆಲಸಗಳ ಹೊಣೆ ಹಂಚಿ ಕೊಡಬೇಕು. ಎಲ್ಲ ಗುಂಪಿನವರೂ ಸರಿಯಾಗಿ ಕೆಲಸ ಮಾಡಿದರೆ ಮಾತ್ರ, ಒಟ್ಟು ಕೆಲಸವು ಒಳ್ಳೆಯದಾಗುವದೆಂಬ ಭಾವನೆಯು ಬೆಳೆಯಬೇಕು. ಸರಳತನ, ಸಹಕಾರ, ಶಿಸ್ತು, ಸೇವಾಭಾವನೆ ಈ ಸದ್ಗುಣಗಳು ನೆಲೆಸಲು ಅನುಕೂಲವಾಗುವದು. ಕೆಲವರು ಮುಂದಾಳುಗಳಾಗಿ, ಉಳಿದವರು ಅನುಯಾಯಿಗಳಾಗಿ ಕೆಲಸ ಮಾಡಬೇಕಾಗುವದು. ಕೆಲವರಿಗೆ ಮುಂದಾಳುತನದ ತರಬೇತು ದೊರೆಯುವದು. ಉಳಿದವರು ನಾಯಕನ ಮಾತಿಗೆ ಬೆಲೆ ಕೊಡಲು ಕಲಿಯುವರು. ಇದು ಪ್ರಜಾತಂತ್ರ ಪರಿಚಯದ ಮೊದಲ ಹೆಜ್ಜೆ.

**(೪) ಆಡಳಿತದ ಹೊಣೆ:**

ಸಾಮುದಾಯಿಕ ಜೀವನದಲ್ಲಿ ಮಕ್ಕಳ ಆಡಳಿತಕ್ಕೆ ಪ್ರಾಧಾನ್ಯವಿರಬೇಕು. ಅವರ ವಸತಿಗೃಹ, ಅವರ ಭೋಜನಾಲಯ, ಅವರ ಶಾಲೆ, ಅವರ ತೋಟ ಇವುಗಳ ಮೇಲ್ವಿಚಾರಣೆಯನ್ನು ಅವರೇ ಮಾಡಬೇಕು. ಅವರಲ್ಲಿ ನಾಯಕರನ್ನು ಆರಿಸಬೇಕು. ನಾಯಕರಿಂದ ಕೂಡಿದ ಒಂದು ಸಂಘ ನಿರ್ಮಾಣವಾಗಬೇಕು; ಅದಕ್ಕೆ ಮಕ್ಕಳ ಮಂತ್ರಿಮಂಡಲ ಎಂದು ಹೆಸರು ಕೊಡಬಹುದು. ತಮ್ಮ ನಾಯಕರನ್ನು ತಾವೇ ಆರಿಸಿಕೊಳ್ಳಬೇಕು. ಗುರುಗಳು ಸಲಹೆ ಕೊಡಬಹುದು; ಆದರೆ ಇಂಥವರನ್ನೇ ಮಂತ್ರಿಮಂಡಲದಲ್ಲಿ ಸೇರಿಸಬೇಕೆಂದು ಅವರು ಮಕ್ಕಳಿಗೆ ಒತ್ತಾಯ ಮಾಡಬಾರದು. ಮಕ್ಕಳು ಉತ್ಸಾಹದಿಂದ ಕೆಲಸ ಮಾಡಲು ಪ್ರೋತ್ಸಾಹ ಕೊಡಬೇಕು.

ಅವರಿಗೆ ಜೋಡಣೆಗಾರಿಕೆಯ ಮಹತ್ವವು ತಿಳಿಯುವಂತೆ ಮಾಡಬೇಕು. ಆಡಳಿತದ ಅಡೆ ತಡೆಗಳನ್ನು ಅವರು ಅರಿಯಬೇಕು. ಆಡಳಿತವು ಸುಸೂತ್ರ ಸಾಗಬೇಕಾದರೆ, ಎಂಥ ಸಾಮಾಜಿಕ ಜೀವನ ಬೇಕೆಂಬುದನ್ನು ಅನುಭವ ದಿಂದ ಅವರು ಕಲಿಯಬೇಕು. ಸಾಮುದಾಯಿಕ ಜೀವನದ ಪ್ರತ್ಯಕ್ಷ ಪ್ರಯೋಗವೇ ಸಾಲೆಯಲ್ಲಿ ನಡೆಯಬೇಕು.

ಸೇವಾಗ್ರಾಮದಲ್ಲಿ ಮಕ್ಕಳ ಮಾತೆಯೆಂದು ಹೆಸರಾದ **ಶ್ರೀಮತಿ ಆಶಾದೇವಿ** ಅವರ ಮಾರ್ಗದರ್ಶನದಲ್ಲಿ ಒಂದು ಮೂಲ ಶಿಕ್ಷಣ ಸಾಲೆಯು ನಡೆಯುವದು. ಅದಕ್ಕೆ **ಆನಂದ ನಿಕೇತನ** ಎಂದು ಹೆಸರು. ಅಲ್ಲಿ ಪ್ರಜಾ ತಂತ್ರದ ಪ್ರಯೋಗವಿದೆ. ತಿಂಗಳಿಗೊಮ್ಮೆ ಮಕ್ಕಳು ತಮ್ಮ ಮಂತ್ರಿ ಮಂಡಲ ರಚಿಸುವರು. ಇದರ ಸಾಧಾರಣ ಸಭೆ (Genral Assembly) ತಿಂಗಳಿಗೆ ಎರಡುಸಲ ಸೇರುವದು. ಮಂತ್ರಿಗಳು ತಮ್ಮ ಕಾರ್ಯ ವಿಭಾಗದ ವರದಿಗಳನ್ನು ಸಾಧಾರಣ ಸಭೆಯಲ್ಲಿ ಮಂಡಿಸುವರು. ಅವುಗಳ ಬಗೆಗೆ ಚರ್ಚೆ ನಡೆಯುವದು. ಕಡೆಗೆ ಅವುಗಳನ್ನು ಸ್ವೀಕರಿಸುವರು. ಈ ಕಾರ್ಯ ಒಬ್ಬ ಗುರೂಜಿಯ ಹಿರಿತನದಲ್ಲಿ ನಡೆಸುವರು. ಇಂಥ ಸಭೆ ಸೇರಿದಾಗ, ನಾನು ಪ್ರತ್ಯಕ್ಷ ನಿರೀಕ್ಷಕನಾಗಿ ಭಾಗ ವಹಿಸಿದ್ದೇನೆ. ಮಕ್ಕಳು ಉತ್ಸಾಹದಿಂದ ಈ ಸಭೆಯ ಕಾರ್ಯ ಕಲಾಪಗಳಲ್ಲಿ ಭಾಗವಹಿಸುವರು. ಒಮ್ಮೊಮ್ಮೆ ಬಹಳ ಕುಶಲ ಪ್ರಶ್ನೆಗಳನ್ನು ಕೆಲ ಬಾಲಕರು ಕೇಳುವರು. ತುರುಸಿನಿಂದ ಪ್ರಶ್ನೆಗಳ ಸುರಿ ಮಳೆ ನಡೆದಾಗ, ನಿರೀಕ್ಷಕರಿಗೆ ದಂಗು ಬಡೆಯುವದು. ಇಂಥ ಸಭೆ ಗಳನ್ನು ಹೇಗೆ ನಡೆಯಿಸಬೇಕೆಂಬುದರ ವಿಧಾನವು ಮಕ್ಕಳಿಗೆ ಗೊತ್ತಾಗು ವದು. ಮುಖ್ಯಮಂತ್ರಿಯು ಆಗಾಗ ಮಂತ್ರಿಗಳ ಸಭೆ (Cabinet) ಕರೆ ಯುವನು. ಸದಸ್ಯರು ಸೂಚನೆಯ ಪುಸ್ತಕದಲ್ಲಿ ಬರೆದ ಸೂಚನೆಗಳ ಬಗೆಗೆ ಪರಶೀಲನೆ ಮಾಡುವರು. ಇದು ಇಡೀ ಶಾಲೆಗೆ ಸಂಬಂಧಿಸಿದ ಮಂತ್ರಿ ಮಂಡಲ. ಇದಲ್ಲದೆ, ವರ್ಗದ ಮಂತ್ರಿಮಂಡಲಗಳೂ ಉಂಟು. ಅವು ಆ ಆ ವರ್ಗಗಳ ಗುರೂಜಿಯವರ ಮಾರ್ಗದರ್ಶನದಲ್ಲಿ ನಡೆಯುವವು. ಆನಂದ ನಿಕೇತನವು ವಸತಿಗೃಹವುಳ್ಳ ಸಾಲೆ. ಅದು ಹಗಲು ಸಾಲೆ ಮಾತ್ರವಲ್ಲ. ಅದರಿಂದ ಸಾಮುದಾಯಿಕ ಜೀವನವೇ ಮಕ್ಕಳ ಶಿಕ್ಷಣದ ಸಾಧನವಾಗಿದೆ. ಅಲ್ಲಿ ಜೀವನ ಬೇರೆ, ಶಿಕ್ಷಣ ಬೇರೆ ಎಂದು ಮಕ್ಕಳಿಗೆ ಎನಿಸುವದೇ ಇಲ್ಲ.

ವಸತಿ ಗೃಹದ ಸ್ವಚ್ಛತೆ, ಸುತ್ತುಮುತ್ತಲಿನ ಸ್ಥಳದ ಸ್ವಚ್ಛತೆ, ಮೂತ್ರಿ ಪಾಯಖಾನೆಗಳ ಸ್ವಚ್ಛತೆ, ಭೋಜನಾಲಯದ ಸ್ವಚ್ಛತೆ, ಅಡಿಗೆ ತಯಾರಿಸುವದು, ಅಡಿಗೆ ಸಾಮಾನುಗಳ ಜತನ, ಭೋಜನದ ವೆಚ್ಚ ತಯಾರಿಸುವದು, ಪೇಟೆಯಿಂದ ಸಾಮಾನುಗಳನ್ನು ತರುವದು, ಕಾಳು ಹಸನ ಮಾಡುವದು, ಅಡಿಗೆ ನೀಡುವದು, ಸಾಮೂಹಿಕ ಪ್ರಾರ್ಥನೆ ನಡೆಸುವದು ಇತ್ಯಾದಿ ಕೆಲಸಗಳನ್ನು ಮಕ್ಕಳೇ ಮಾಡುವರು. ವರ್ಗದಲ್ಲಿ ನೂಲುವ ನೇಯುವ, ತೋಟದಲ್ಲಿ ಮಡಿ ಮಾಡುವ, ನೀರು ಹಾಕುವ ಕೆಲಸಗಳನ್ನು ಮಾಡುವರು. ಪ್ರತಿಯೊಂದು ಧರ್ಮದ ಮುಖ್ಯ ಹಬ್ಬಗಳನ್ನು ಎಲ್ಲರೂ ಕೂಡಿ ಆಚರಿಸುವರು. ಅದರಿಂದ ಮಕ್ಕಳಲ್ಲಿ ಧಾರ್ಮಿಕ ದೃಷ್ಟಿಯು ವಿಶಾಲವಾಗುವದು; ಪರಧರ್ಮ ಸಹಿಷ್ಣುತೆ ಅವರಲ್ಲಿ ಹುಟ್ಟುವದು; ಎಲ್ಲರೂ ಒಬ್ಬನೇ ದೇವರ ಮಕ್ಕಳೆಂಬ ಭಾವನೆಯು ಅವರಲ್ಲಿ ಹುಟ್ಟಿ ಬೆಳೆಯುವದು. ಕ್ರಿಯಾತ್ಮಕ ಚಿತ್ರ ಕಲೆಯಲ್ಲಿ (Creative Art) ಮಕ್ಕಳನ್ನು ತರಬೇತು ಮಾಡಲಾಗುವದು. ಹಳ್ಳಿಯ ಹಾಡು, ಹಳ್ಳಿಯ ಕುಣಿತ ( Folk Songs, Folk Dance ) ಇವುಗಳನ್ನು ಮಕ್ಕಳಿಗೆ ಕಲಿಸುವ ಯೋಜನೆಯದೆ. ಪ್ರವಾಸ, ಪ್ರದರ್ಶನಗಳನ್ನು ಏರ್ಪಾಡು ಮಾಡುವ ಯೋಜನೆಯು ಅದೆ. (First Aid) ಪ್ರಥಮ ಚಿಕಿತ್ಸೆಯಲ್ಲಿ ತರಬೇತು ಹೊಂದುವರು. ಹೀಗೆ ಆನಂದ ನಿಕೇತನದಲ್ಲಿ ಮಕ್ಕಳಿಗೆ ಅನೇಕ ವಿಧವಾಗಿ ಚಟುವಟಿಕೆಗಳು ದೊರೆಯುವವು. ಈ ಎಲ್ಲ ಚಟುವಟಿಕೆಗಳು ಅಭ್ಯಾಸ ವಿಷಯದ ಸಾಧನಗಳು. ಇವೆಲ್ಲ ಚಟುವಟಿಕೆಗಳನ್ನು ಯಶಸ್ವಿಯಾಗಿ ನಡೆಸಲು ಅಗತ್ಯವಿದ್ದ ವಿಭಾಗಗಳನ್ನು ಮಾಡಿ, ಮಕ್ಕಳು ಮಂತ್ರಿ ಮಂಡಲ ರಚಿಸುವರು.

ಆನಂದ ನಿಕೇತನದಲ್ಲಿ ನ್ಯಾಯ ಮಂಡಲವೂ(Court of Justice) ಉಂಟು. ಮಕ್ಕಳ ತಪ್ಪುಗಳನ್ನು ಈ ನ್ಯಾಯ ಮಂಡಲವು ವಿಚಾರಿಸುವದು. ತಪ್ಪುಗಾರರನ್ನು ಸುಧಾರಿಸುವ ಬಗೆಗೆ ಯೋಜನೆಗಳನ್ನು ಕಲ್ಪಿಸಿಕೊಡುವದು. ಈ ಮಂಡಲವು ಶಿಕ್ಷಿಸುವದರಲ್ಲಿ (Punishment) ನಂಬುವದಿಲ್ಲ. ಶಿಕ್ಷೆ ಮಾಡುವದರಿಂದ ಕೆಟ್ಟ ಚಟವನ್ನು ನಿಲ್ಲಿಸಬಹುದು; ಆದರೆ ಒಳ್ಳೆಯ ಚಟಗಳನ್ನು ಬೆಳೆಯಿಸಲು ಸಹಾಯಕವಾಗುವದಿಲ್ಲ. ನ್ಯಾಯಮಂಡಲದ ಸದಸ್ಯರು ಮಕ್ಕಳ ಪ್ರತಿನಿಧಿಗಳೇ ಇರುವರು; ಒಬ್ಬ

ಗುರೂಜಿಯನ್ನು ಸಹ ಅರಿಸಿ ಕೊಳ್ಳಬಹುದು; ಅವರಿಂದ ಯೋಗ್ಯ ಸಲಹೆ ಸಿಗುವದು.

ಮೇಲೆ ಹೇಳಿದ ಮಾದರಿಯ ಮೇಲೆ ಸಾಮುದಾಯಿಕ ಜೀವನವನ್ನು ನಡೆಯಿಸಬೇಕು; ಎಂದರೆ ಅದು ಜೀವನ ಶಿಕ್ಷಣದ ಪ್ರತ್ಯಕ್ಷ ಪ್ರಯೋಗವೆಂದು ಮನವರಿಕೆ ಯಾಗುವದು. ಆನಂದ ನಿಕೇತನವು ಓದು-ಬರೆಹ ಮಾತ್ರ ಕಲಿಸುವ ಮನೆಯಲ್ಲ; ಸಂಗೀತ, ಚಿತ್ರಕಲೆ, ನೃತ್ಯಗಳನ್ನು ಮಾತ್ರ ಕಲಿಸುವ ಕಲಾಭವನವಲ್ಲ; ನೂಲುವ, ನೇಯುವ, ಉದ್ಯೋಗಗಳನ್ನು ಕಲಿಸುವ ಔದ್ಯೋಗಿಕ ಸಾಲೆಯಲ್ಲ; ಹಬ್ಬ–ಹುಣ್ಣಿವೆಗಳನ್ನು ಮಾತ್ರ ಆಚರಿಸುವ ಧರ್ಮ ಪೀಠವಲ್ಲ; ಆನಂದ ನಿಕೇತನವು ಜೀವನ ಕ್ಷೇತ್ರವು. ಸಾಮುದಾಯಿಕ ಜೀವನವು ಅಲ್ಲಿಯ ಶಿಕ್ಷಣದ ಜೀವಾಳವು; ಅದುವೇ ನಿಜವಾದ ಶಿಕ್ಷಣದ ನೈಜ ಸ್ವರೂಪವು.

**೫. ಕ್ರಿಯಾತ್ಮಕ ಶಿಸ್ತು:**

ಮೂಲ ಶಿಕ್ಷಣ ಯೋಜನೆಯಲ್ಲಿ ಸಾಮುದಾಯಿಕ ಜೀವನಕ್ಕೂ, ಸಾಮಾಜಿಕ ಕಾರ್ಯಗಳಿಗೂ ಅಗ್ರಸ್ಥಾನ ಕೊಡಲಾಗಿವೆ. ಮಕ್ಕಳು ಸ್ವಾವಲಂಬಿ ವ್ಯಕ್ತಿಗಳೂ, ಒಳ್ಳೆಯ ನಾಗರಿಕರೂ, ಪ್ರಜಾತಂತ್ರ ಪರಿಚಯವುಳ್ಳವರೂ, ರಾಷ್ಟ್ರೀಯ ಮನೋವೃತ್ತಿಯುಳ್ಳವರೂ, ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ಪ್ರೇಮಿಗಳೂ, ಶ್ರಮಜೀವಿಗಳೂ, ಬುದ್ಧಿಜೀವಿಗಳೂ, ಪ್ರಭಾವಶಾಲಿಗಳೂ ಆಗುವರು. ಇಂತಹ ವ್ಯಕ್ತಿಗಳಲ್ಲಿ ಕ್ರಿಯಾತ್ಮಕ ಶಿಸ್ತು ( Creative Discipline ) ಹುಟ್ಟಿ ಬೆಳೆಯುವದು. ಈ ಶಿಸ್ತು ಅಂತಃಪ್ರೇರಣೆಯಿಂದ ಹುಟ್ಟಿದುದು; ಹೊರಗಿನ ಒತ್ತಾಯದಿಂದಾಗಲಿ, ಅಂಜಿಕೆಯಿಂದಾಗಲಿ ಬಂದುದು ಅಲ್ಲ. ಇದಕ್ಕೆ ಸ್ವಶಿಸ್ತು ( Self Discipline ) ಎಂದೂ ಕರೆಯಬಹುದು.

ಸಾಮುದಾಯಿಕ ಜೀವನದ ಐದು ತತ್ವಗಳನ್ನು ರೆ. ರಾಯಬರ್ನ ಅವರು ವಿವರಿಸಿದ್ದಾರೆ. ಅವು ಯಾವವೆಂದರೆ :—

(೧) ಕರ್ತವ್ಯದಕ್ಷತೆ, (೨) ಕೂಡಿ ಬಾಳುವ ಕಲೆ, (೩) ಪರಸ್ಪರ ಸಹ ಕಾರ, (೪) ಕ್ರಿಯಾತ್ಮಕ ಕೆಲಸದಲ್ಲಿ ಪ್ರೇಮ, (೫) ಕ್ರಿಯಾತ್ಮಕ ಶಿಸ್ತು.

ಈ ತತ್ವಗಳ ಬಗೆಗೂ, ಆನಂದ ನಿಕೇತನದ ಪ್ರಯೋಗದ ಬಗೆಗೂ ಪರಿಚಯ ಮಾಡಿಕೊಡಲಾಗಿದೆ. ಈ ಐದೂ ತತ್ವಗಳು ಆನಂದ ನಿಕೇತನದಲ್ಲಿ ಯೋಜಿಸಿದ ಸಾಮುದಾಯಿಕ ಜೀವನದಲ್ಲಿ ಎಷ್ಟು ಸ್ವಾರಸ್ಯವಾಗಿ ಹೆಣೆಯಲ್ಪಟ್ಟಿವೆ ಎಂಬುದನ್ನು ಮೇಲೆ ವಿವರಿಸಿದೆ. ಸಾಂಘಿಕ ಜೀವನದ ಫಲವಾಗಿ ಮಕ್ಕಳಿಗೆ ಸಂಘ ಪ್ರವೃತ್ತಿ, ರಚನಾ, ಕುತೂಹಲ, ಆತ್ಮ ಪ್ರೌಢಿಮೆ, ಸಂಗ್ರಹ, ವಿಧೇಯ ಮೊದಲಾದ ಸಹಜ ಪ್ರವೃತ್ತಿಗಳು ಸದ್ವೃತ್ತಿಗಳಾಗಿ ಪರಿಣಮಿಸುವಂತೆ ಸನ್ನಿವೇಶಗಳು ದೊರೆಯುವವು. ಈ ಶೈಕ್ಷಣಿಕ ಲಾಭವನ್ನು ಶಿಕ್ಷಕರು ಮರೆಯಕೂಡದು. ಈ ಮಾದರಿಯ ಸಾಮುದಾಯಿಕ ಜೀವನವನ್ನು ಶಿಕ್ಷಕರ ಶಿಕ್ಷಣಶಾಲೆಯ ( Training College ) ದಲ್ಲಿ ಅಗತ್ಯವಾಗಿ ಏರ್ಪಡಿಸಬೇಕು; ಎಂದರೆ ಶಿಕ್ಷಕರಿಗೆ ಹೊಸ ಶಿಕ್ಷಣದ ಯೋಜನೆಯಲ್ಲಿ ಆಸ್ಥೆಯಿಂದ ದುಡಿಯುವ ಮನೋವೃತ್ತಿಯು ಉಂಟಾಗುವದು. ಈ ಯೋಜನೆಯನ್ನು ಮುಂಬಯಿ ಸರಕಾರದವರು ಈಗಾಗಲೇ ಕೈಕೊಂಡುದು ಸ್ತುತ್ಯವಾಗಿದೆ.

---

# ೮. ಧಾರ್ಮಿಕ ಶಿಕ್ಷಣ

ಹಿಂದುಸ್ಥಾನವು ಅನೇಕ ಧರ್ಮಗಳ ನಾಡು. ಹಿಂದುಸ್ಥಾನದಲ್ಲಿ ಅನೇಕ ಪರಕೀಯರು ಬಂದು ನೆಲಸಿದರು. ಅವರು ತಮ್ಮ ಧರ್ಮ ಪ್ರಸಾರವನ್ನು ಮಾಡಿದರು. ಅಂತೆಯೇ, ಹಿಂದು, ಮುಸಲ್ಮಾನ, ಕ್ರಿಶ್ಚಿಯನ್, ಯೆಹೂದಿ, ಫಾರ್ಸಿ ಹೀಗೆ ಬೇರೆ ಬೇರೆ ಧಾರ್ಮಿಕ ಗುಂಪುಗಳಿಗೆ ಸೇರಿದ ಜನರು ನಮ್ಮ ನಾಡಿನಲ್ಲಿ ನೆಲೆಸಿದ್ದಾರೆ. ನಮ್ಮವರು ಪರಕೀಯರಿಗೆ ಅನೇಕ ರೀತಿಯಿಂದ ಆಶ್ರಯ ಕೊಟ್ಟು, ಪರಧರ್ಮಗಳನ್ನೂ ಇಲ್ಲಿ ಉಳಿಸಿದ್ದಾರೆ. ಇದು ಭಾರತೀಯ ಸಂಸ್ಕೃತಿಯ ವಿಶಾಲ ದೃಷ್ಟಿ.

**ಸಾರ್ವಜನಿಕ ಶತ್ರು ನಂಬರು ಒಂದು:**

ಈಗ ಅನೇಕ ಮತ, ಪಂಥ, ಪಕ್ಷ, ಪಂಗಡಗಳು ಹುಟ್ಟಿವೆ, ಆಗಾಗ ಪರಸ್ಪರ ಮಾತ್ಸರ್ಯವು ಹೊರಹೊಮ್ಮಿ, ನಾಡಿನ ಒಕ್ಕಟ್ಟಿಗೆ ಪೆಟ್ಟುಕೊಟ್ಟಿದೆ. ಸ್ವತಂತ್ರ ಹಿಂದುಸ್ಥಾನವು ಭಾರತೀಯ ಸಂಸ್ಕೃತಿಯ ವಿಶಾಲ ದೃಷ್ಟಿಯನ್ನು ಪೋಷಿಸುವದು ಅಗತ್ಯವು. ಇಂಥ ಸಮಯದಲ್ಲಿ ಧಾರ್ಮಿಕ ಶಿಕ್ಷಣವನ್ನು ಕೊಡುವದು ಸಮಂಜಸವಾದೀತೇ? ಶಾಲೆಗಳಲ್ಲಿ ಈ ಕಾರ್ಯವು ನಾಡಿನ ಹಿತದ ದೃಷ್ಟಿಯಿಂದ ಸಾಗೀತೇ? ಎಂಬ ಶಂಕೆಗಳು ಉದ್ಭವಿಸುವವು. ಯಾವುದೊಂದು ವಿಶಿಷ್ಟ ಧರ್ಮದ ಬಗೆಗೆ ಹೇಳಲು ಅವಕಾಶಕೊಟ್ಟರೆ, ನಮ್ಮ ಸಾಲೆಗಳು ರಾಷ್ಟ್ರೀಯತೆಯಿಂದ ದೂರ ಉಳಿಯುವವು. ಧಾರ್ಮಿಕ ದುರಭಿಮಾನವು ನಮ್ಮ ಮಕ್ಕಳಲ್ಲಿ ಹುಟ್ಟಿ ಬೆಳೆಯುವದು. ಅದರಿಂದ ಈ ತರದ ಧಾರ್ಮಿಕ ಶಿಕ್ಷಣವು ನಾಡಿನ ವೈರಿ ನಂಬರು ಒಂದು ಆಗುವದು ಖಂಡಿತ.

"ಅವರ ಧರ್ಮವು ಇನ್ನೊಂದು ಧರ್ಮಕ್ಕಿಂತ ಹೆಚ್ಚಿನದೆಂದೂ ಅಥವಾ ಅದೇ ನಿಜವಾದ ಧರ್ಮವೆಂದೂ ಮಕ್ಕಳಿಗೆ ಕಲಿಸಿದರೆ, ಬೇರೆ ಬೇರೆ ಧರ್ಮಗಳ ಮಕ್ಕಳಲ್ಲಿ ಸ್ನೇಹಭಾವ ಬೆಳೆಯಲು ಗಂಡಾಂತರವಿದೆ ಎಂದು ನಾನು ಮನ್ನಿಸುತ್ತೇನೆ............ನೀತಿಶಾಸ್ತ್ರದ ಮೂಲ ತತ್ತ್ವಗಳು ಎಲ್ಲ ಧರ್ಮಗಳಿಗೂ ಸಾಮಾನ್ಯವಾಗಿವೆ."

**ಗಾಂಧೀಜಿ.**

## ಡಾ. ಝಾಕೀರ ಹುಸೇನ ಅವರ ಅಭಿಪ್ರಾಯ:

"ಧರ್ಮಗಳ ಬೋಧೆಯನ್ನು ವರ್ಧಾ ಶಿಕ್ಷಣದ ಯೋಜನೆಯಿಂದ ನಾವು ತೆಗೆದುಹಾಕಿದ್ದೇವೆ. ಇಂದಿಗೆ ಧರ್ಮಗಳು ಕಲಿಸಲ್ಪಟ್ಟಂತೆ, ಅವು ಸಂಘಟನೆಗೆ ಸಜ್ಜುಗೊಳಿಸದೆ ಕಲಹಕ್ಕೆ ಕಾರಣವಾಗುವವೆಂಬ ಭಯವಿದೆ; ಆದರೆ ಇನ್ನೊಂದು ರೀತಿಯಿಂದ ಎಲ್ಲ ಧರ್ಮಗಳಲ್ಲಿ ಸಾಮಾನ್ಯವಾದ ತತ್ತ್ವಗಳು ಎಲ್ಲ ಮಕ್ಕಳಿಗೆ ಕಲಿಸಲ್ಪಡಬೇಕೆಂದು ನನ್ನ ಮತ. ಈ ತತ್ತ್ವಗಳು ಶಬ್ದಗಳಿಂದ ಅಥವಾ ಪುಸ್ತಕಗಳಿಂದ ಕಲಿಸಲ್ಪಡಲಾರವು. ಶಿಕ್ಷಕನ ನಿತ್ಯಜೀವನದ ಮೂಲಕವೇ ಮಕ್ಕಳು ಈ ತತ್ತ್ವಗಳನ್ನು ಕಲಿಯುತ್ತಾರೆ. ಶಿಕ್ಷಕನು ತಾನೇ ಸತ್ಯ, ನ್ಯಾಯ, ಮಾರ್ಗಗಳಿಗನುಗುಣವಾಗಿ ಆಚರಿಸಿದರೆ ಮಾತ್ರ ಸತ್ಯ, ನ್ಯಾಯ ಇವು ಎಲ್ಲ ಧರ್ಮಗಳ ತಳಗಲ್ಲುಗಳಾಗಿವೆ ಎಂಬುದನ್ನು ಮಕ್ಕಳು ಕಲಿಯುತ್ತಾರೆ."

೭-೧೪ ವಯಸ್ಸಿನ ಮಕ್ಕಳಿಗೆ "ಎಲ್ಲ ಧರ್ಮಗಳಲ್ಲಿ ಸಮಾನ ಗೌರವ" ಎಂಬ ತತ್ತ್ವವನ್ನು ಕಲಿಸುವದು ಸಾಧ್ಯವಿದೆಯೇ ಎಂದು ಮಹಾತ್ಮಾಜಿಯವರಿಗೆ ಕೇಳಿದಾಗ, ಅವರು—"ಅಹುದು! ನಾನು ಹಾಗೆ ತಿಳಿಯುತ್ತೇನೆ. ಎಲ್ಲ ಧರ್ಮಗಳ ಮೂಲ ತತ್ತ್ವಗಳು ಒಂದೇ: ನಮ್ಮ ಧರ್ಮದಲ್ಲಿ ಅಭಿಮಾನ, ಪ್ರೇಮ ಇದ್ದಂತೆ, ಇತರ ಧರ್ಮಗಳಲ್ಲಿಯೂ ತೋರಿಸಬೇಕೆಂಬ ತತ್ತ್ವವು ಸುಲಭವಾಗಿದೆ. ೭-೧೪ ವಯಸ್ಸಿನ ಹುಡುಗರು ಇದನ್ನು ಸುಲಭವಾಗಿ ತಿಳಿಯಬಲ್ಲರು, ಆಚರಿಸಬಲ್ಲರು; ಆದರೆ ಶಿಕ್ಷಕನಲ್ಲಿ ಈ ಶ್ರದ್ಧೆಯು ಇರಲಿಕ್ಕೇಬೇಕೆಂಬುದು ಮೊದಲ ಮಾತು."

ಧರ್ಮದ ನಿಜವಾದ ಮರ್ಮವನ್ನು ತಿಳಿಯುವ ಒಂದು ಹೊಸ ದೃಷ್ಟಿ ನಮ್ಮ ಮಕ್ಕಳಲ್ಲಿ ಬೇಕು. ಮೂಲ ಶಿಕ್ಷಣ ಅಭ್ಯಾಸ ಪತ್ರಿಕೆಯಲ್ಲಿ ಬುದ್ಧ, ಕ್ರೈಸ್ತ ಮಹಮ್ಮದ ಪೈಗಂಬರ ಮೊದಲಾದ ಧಾರ್ಮಿಕ ಪುರುಷರ ಕಥೆಗಳನ್ನು ಸೇರಿಸಲಾಗಿದೆ. ೩ನೇ ಇಯತ್ತೆಯಿಂದ ೭ನೇ ಇಯತ್ತೆಯವರೆಗೆ ಇಂಥ ವಿಷಯಗಳನ್ನು ಕಲಿಸಲಾಗುವದು. ಜಗತ್ತಿನ ಪ್ರಮುಖ ಧರ್ಮಗಳ ಮುಖ್ಯ ತತ್ತ್ವಗಳನ್ನು ೭ನೇ ಇಯತ್ತೆಯಲ್ಲಿ ತಿಳಿಸಿಕೊಡಲಾಗುವದು. ಸಮಾಜ ವಿಜ್ಞಾನದಲ್ಲಿ ಬೇರೆ ಬೇರೆ ಧರ್ಮಗಳ ಸಾಂಸ್ಕೃತಿಕ ಹೆಜ್ಜೆಗಳನ್ನು ಕಲಿಸಲಾಗುವದು ಮಕ್ಕಳನ್ನು ವಿಶ್ವಧರ್ಮದ ಕಡೆಗೆ ಒಯ್ಯುವ ದೃಷ್ಟಿಯಿಂದ ಧಾರ್ಮಿಕ

ಶಿಕ್ಷಣ ಕೊಡಲಾಗುವದು. ಪ್ರತಿಯೊಂದು ಧರ್ಮದ ಮಹಾಪುರುಷರ ಪುಣ್ಯ ತಿಥಿಗಳನ್ನು ಸಾಲೆಗಳಲ್ಲಿ ಎಲ್ಲರೂ ಕೂಡಿ ಆಚರಿಸುವ ಯೋಜನೆಯೂ ಇದೆ. ಅಕಬರನು 'ದಿನ್ ಇಲಾಹಿ' ಎಂಬ ಹೊಸ ಧರ್ಮ ಸ್ಥಾಪಿಸಲು ಯತ್ನಿಸಿದನು. ಮೂಲ ಶಿಕ್ಷಣ ಯೋಜನೆಯಲ್ಲಿಯೂ ಅಂತಹ ದೃಷ್ಟಿ ಇದೆಯೇ ಎಂದು ಕೇಳುವರು. ಜಗತ್ತಿನಲ್ಲಿ ಉದಯಿಸಿದ ಎಲ್ಲ ಧರ್ಮಗಳು ಸತ್ಯ, ಅಹಿಂಸೆ, ನ್ಯಾಯ ಈ ತತ್ತ್ವಗಳ ಮೇಲೆಯೇ ನಿಂತಿವೆ ಎಂದು ತೋರಿಸುವುದು ಮುಖ್ಯವಾಗಿದಿಯೇ ಹೊರತು ಹೊಸದೊಂದು ಧರ್ಮವನ್ನು ಹುಟ್ಟಿಸುವ ಕಲ್ಪನೆಯು ಇದರಲ್ಲಿ ಇಲ್ಲ. ಹೊಸ ಧರ್ಮಕ್ಕೆ ಗಾಂಧೀ ಧರ್ಮ ಎಂದು ಕರೆಯಬಹುದು; ಆದರೆ ಅದೊಂದು ಹೊಸ ಪಂಥವಲ್ಲ; ಹೊಸ ದೃಷ್ಟಿ.

**ಮಾನವ ಧರ್ಮ:**

ಗಾಂಧೀ ಧರ್ಮ ಯಾವುದೆಂದು ಅನೇಕರು ಅನೇಕ ರೀತಿಯಾಗಿ ಅರ್ಥ ಮಾಡುವರು. ರಾಮನಾಮದಲ್ಲಿ ಪರಮ ಪರಿಹಾರವಿದೆಯೆಂದು ಗಾಂಧೀಜಿಯವರು ಹೇಳುತ್ತಿದ್ದರು. ನೂಲುವಾಗಲೂ ಪ್ರತಿಯೊಂದು ಎಳೆಯಲ್ಲಿ ಶ್ರೀ ರಾಮನನ್ನು ಕಾಣುತ್ತೇನೆಂದು ಅವರು ಅನ್ನುತ್ತಿದ್ದರು. ರಾಮರಾಜ್ಯವನ್ನು ಕಟ್ಟಲು ಬಯಸಿದರು. ಆದರಿಂದ ಅವರು ರಾಮಭಕ್ತರೆಂದು ತಟ್ಟನೆ ಹೇಳಬಹುದು. ರಾಮಭಕ್ತರು ಅಹುದು. ಗಾಂಧೀಜಿಯವರ ರಾಮನೆಂದರೆ ಸತ್ಯಾಗ್ರಹಿ, ವಚನ ಪಾಲಕ, ತ್ಯಾಗವೀರ, ಭ್ರಾತೃಪ್ರೇಮಿ, ಜನಸೇವಕ, ಆದರ್ಶ ವ್ಯಕ್ತಿ, ವೈಷ್ಣವ ಸಂಪ್ರದಾಯಗಳಲ್ಲಿ ಬಾಳಿ ಬೆಳೆದವರಾದುದರಿಂದ ರಾಮನಾಮ ಭಜಿಸುವರೇ ಹೊರತು, ರಾಮನು ಹೆಚ್ಚಿನವನೆಂದೂ, ರಹೀಮನು ಕಡಿಮೆಯವನೆಂದೂ ಎಂಬ ಭಾವನೆಯಿಂದಲ್ಲ.

ನಾನು ಸೇವಾಗ್ರಾಮದಲ್ಲಿದ್ದಾಗ ಗಾಂಧೀಜಿಯವರ ಪ್ರಾರ್ಥನೆಯಲ್ಲಿ ಭಾಗವಹಿಸಿದ್ದೇನೆ. ಪರಿಶುದ್ಧ ವಾತಾವರಣದಲ್ಲಿ ಶುದ್ಧ ವಿಚಾರಗಳು ಹೇಗೆ ಅರಳುವವೆಂಬುದನ್ನು ಅನುಭವದಿಂದಲೇ ಸವಿಯಬೇಕು. ಪ್ರಾರ್ಥನೆಯನ್ನು ರಾಷ್ಟ್ರೀಕರಣ ಮಾಡಲಾಗಿದೆ. ಒಬ್ಬರು ಗೀತೋಕ್ತಿಗಳನ್ನು ಅನ್ನುವರು. ನಂತರ ಕುರಾಣದ ಸೂತ್ರಗಳನ್ನು ಇನ್ನೊಬ್ಬರು ಪಠಿಸುವರು. ಬೈಬಲ್ಲದ ಶ್ಲೋಕಗಳನ್ನು ಮತ್ತೊಬ್ಬರು ಪಠಿಸುವರು. ಹೀಗೆ ಅವರ ಸಮಾಜದಲ್ಲಿ ಯಾವ ಯಾವ ಧರ್ಮಗಳ ಜನರು ಸೇರುವರೋ ಅವರವರಿಗೆ

ತಮ್ಮ ಧರ್ಮದ ಸೂತ್ರಗಳನ್ನು ಭಜಿಸಲು ಪೂರ್ಣ ಸ್ವಾತಂತ್ರ್ಯವಿದೆ. ಅಲ್ಲದೆ ಒಂದು ಧರ್ಮದವರು ತಮ್ಮ ಪ್ರಾರ್ಥನೆಯ ಮಂತ್ರಗಳನ್ನು ಅನ್ನುವಾಗ ಇನ್ನೊಂದು ಧರ್ಮದವರೂ ಅವುಗಳನ್ನು ಶಾಂತ ರೀತಿಯಿಂದ ಅನ್ನುವರು; ಆಸ್ಥೆಯಿಂದ ಭಾಗವಹಿಸುವರು. ಇದರಿಂದ ಜನರಲ್ಲಿ ಪರಧರ್ಮ ಸಹಿಷ್ಣುತೆ ಉಂಟಾಗಿ, ಎಲ್ಲ ಧರ್ಮಗಳಿಗೆ ಸಮ ಗೌರವ ಕೊಡಬೇಕೆಂಬುದೇ ಮನವರಿಕೆ ಯಾಗುವದು.

'ಅಹಿಂಸಾ ಪರಮೋ ಧರ್ಮಃ' ಎಂಬುದನ್ನು ಗಾಂಧೀಜಿಯವರು ನಂಬಿದರು. ಸತ್ಯವೇ ದೇವರೆಂದು ಪ್ರತಿಪಾದಿಸಿದರು. ರಾಷ್ಟ್ರಧ್ವಜದಲ್ಲಿ ರಾಟೆಯ ಬದಲು ಅಶೋಕನ ಚಕ್ರವನ್ನು ಹಾಕಲೂ, ಅಶೋಕನ ರಾಜ ಮುದ್ರೆಯನ್ನು ಭಾರತದ ರಾಜಮುದ್ರೆಯನ್ನಾಗಿ ಮಾಡಲೂ ಒಪ್ಪಿಗೆ ಕೊಟ್ಟರು. ಈ ಸಂಗತಿಗಳಿಂದ ಗಾಂಧೀಜಿಯವರು ಬುದ್ಧನ ಅವತಾರ ವೆಂದು ಕೆಲವರು ತಿಳಿಯುವರು. ಒಂದು ಕೆನ್ನೆಯ ಮೇಲೆ ಯಾರಾದರೂ ಹೊಡೆದರೆ, ಇನ್ನೊಂದು ಕೆನ್ನೆಯನ್ನು ಕೊಡು; ಬೆವರು ಸುರಿಸಿ, ನಿನ್ನ ರೊಟ್ಟೀ ತಿನ್ನು; ಸತ್ಯಕ್ಕಾಗಿ ಪ್ರಾಣಾರ್ಪಣೆ ಮಾಡು; ಭೂಸ್ವರ್ಗ ಪ್ರಸ್ಥಾಪಿಸಲು ಹೆಣಗು—ಎಂದು ಮುಂತಾಗಿ ಮಹಾತ್ಮಾಜಿಯವರು ಬೋಧಿ ಸಿದರು. ಆದರಿಂದ ಗಾಂಧೀಜಿಯವರು ಕ್ರೈಸ್ತನ ಅವತಾರವೆಂದೂ ಕೆಲವರು ತಿಳಿಯುವರು. ದಯವೇ ಧರ್ಮದ ಮೂಲ. ದಯವಿಲ್ಲದ ಯಾವ ಧರ್ಮವೂ ಇಲ್ಲ. ಎಲ್ಲ ಪ್ರಾಣಿಗಳಲ್ಲಿ ದಯೆ ತೋರಿಸಬೇಕು. ದೇವರ ಸೃಷ್ಟಿಯಲ್ಲಿ ಎಲ್ಲರೂ ಒಂದೇ. ಸಕಲ ಜೀವಾತ್ಮರಿಗೆ ಲೇಸನೇ ಬಯಸು ವನು ದೇವರು. ದಾರಿದ್ರ್ಯ ದೂರಾಗಬೇಕಾದರೆ ಪ್ರತಿಯೊಬ್ಬನು ದುಡಿದುಣ್ಣ ಬೇಕು; ಅರ್ಥಾತ್ ಕಾಯಕ ಮಾಡಬೇಕು. ಕಾಯಕವೇ ಕೈಲಾಸ. ಕಾಯಕದಿಂದ ಮೇಲು ಕೀಳುಗಳು ಬರುವದಿಲ್ಲ. ಶ್ರಮ ಗೌರವ ತತ್ತ್ವ ವನ್ನು ಅರಿಯಬೇಕು. ಸತ್ಯವೇ ಸ್ವರ್ಗ, ಅಸತ್ಯವೇ ನರಕ. ದೇವನೊಬ್ಬ, ನಾಮ ಹಲವು! ಹೀಗೆ ಗಾಂಧೀಜಿಯವರು ಬೋಧಿಸಿದರು. ಆದರಿಂದ ಅವರು ಬಸವಣ್ಣನ ಅವತಾರವೆಂದು ಕೆಲವರು ತಿಳಿಯುವರು.

ಮೇಲಿನ ಸಂಗತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿದರೆ ಗಾಂಧಿ ಯವರ ಧರ್ಮವು ಒಂದು ವಿಶಿಷ್ಟ ಜಾತಿಗೆ ಸಂಬಂಧಿಸಿಲ್ಲ. ಯಾವುದೊಂದು

ಪಂಥಕ್ಕೆ ಅಂಟಿಕೊಂಡಿಲ್ಲ. ಅವರು ಬೋಧಿಸಿದುದು ಮಾನವ ಧರ್ಮ. ಯಾವ ಧರ್ಮದವರೇ ಇರಲಿ, ಗಾಂಧಿಯವರು ನಮ್ಮವರು ಎಂದು ಹೆಮ್ಮೆಯಿಂದ ಹೇಳುವ ಕಾಲ ಈಗ ಬಂದಿದೆ. ಅಂತೆಯೇ ಅವರ ಜನ್ಮೋತ್ಸವವನ್ನು ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿಯೂ ಆಚರಿಸುವರು. ಇಡೀ ಜಗತ್ತು ಗಾಂಧಿಯವರ ಶಾಂತಿ ಮಂತ್ರವನ್ನು ಜಪಿಸಬೇಕಾಗಿದೆ. ಅವರೇ ಇಂದಿನ ಜಗತ್ತಿನ ನಾಯಕರು. ಮಾನವ ರಕ್ಷಣೆಯೇ ಅವರ ಶಾಂತಿಯ ಸಂದೇಶ. ಮಾನವ ಧರ್ಮವೇ ಅವರ ನಿಜವಾದ ಧರ್ಮ.

## ಶಾಲೆಯಲ್ಲಿ ಯಾವ ಧರ್ಮದ ಬೋಧೆ ಬೇಕು?

ವರ್ಧಾ ಯೋಜನೆಯಲ್ಲಿ ಧಾರ್ಮಿಕ ಶಿಕ್ಷಣಕ್ಕೆ ತಕ್ಕ ಸ್ಥಾನ ಕೊಟ್ಟಿಲ್ಲವೆಂದು ಕೆಲವರು ಆಕ್ಷೇಪಿಸಿದ್ದಾರೆ. ಶಾಲೆಗಳಲ್ಲಿ ಯಾವ ಧರ್ಮದ ಬಗೆಗೆ ಬೋಧಿಸಬೇಕೆಂಬುದು ಜಟಿಲ ಸಮಸ್ಯೆ. ನಿಜವಾಗಿ ನೋಡಿದರೆ, ಮಕ್ಕಳಿಗೆ ಯಾವುದೋಂದು ಧರ್ಮದ ಪರಿಚಯ ಮಾಡಿಕೊಟ್ಟರೆ ಸಾಲದು. ಎಲ್ಲ ಜಾತಿ, ಮತ, ಪಂಥ ಪಕ್ಷ-ಪಂಗಡಗಳ ಮಕ್ಕಳು ನಮ್ಮ ಶಾಲೆಗಳಲ್ಲಿರುತ್ತಾರೆ. ಅವರಿಗೆ ಬೇಕಾದುದು ವಿಶ್ವಧರ್ಮ. ಅವರಲ್ಲಿ ಬೆಳೆಯಬೇಕಾದುದು ವಿಶಾಲ ದೃಷ್ಟಿ. ಪ್ರತಿಯೊಂದು ಧರ್ಮದ ಮೂಲ ಸೂತ್ರಗಳು ಒಂದೇ.

ತಮ್ಮ ಹುಟ್ಟು ದಿನದ ಪ್ರಾರ್ಥನೋತ್ತರ ಭಾಷಣದಲ್ಲಿ ದೇವರ ದೃಷ್ಟಿಯಿಂದ ಎಲ್ಲರೂ ಒಂದೇ ಎಂದು ಗಾಂಧಿಯವರು ಬೋಧಿಸಿದರು. "ದೇವರನ್ನು ಹೇಗೆ ಪೂಜಿಸಿದರೂ ಅಷ್ಟೇ! ಯಾವ ಹೆಸರಿನಿಂದ ಕರೆದರೂ ಒಂದೇ. ವಾಯು, ಸೂರ್ಯ ಇವು ಎಲ್ಲರಿಗೂ ಒಂದೇ. ಮೋಡಗಳು ಸರ್ವರಿಗೂ ಮಳೆಗರೆಯುತ್ತವೆ. ಅವು ಭೇದ ಮಾಡುವದಿಲ್ಲ. ಅಯೋಗ್ಯ ಮಾನವನೊಬ್ಬನೇ ಮನುಷ್ಯ ಮನುಷ್ಯರಲ್ಲಿ ಭೇದ ಕಲ್ಪಿಸುತ್ತಾನೆ" ಎಂದು ಮುಂತಾಗಿ ಅವರು ಬಿತ್ತರಿಸಿದರು. ರಾಮರಹೀಮರೆಂದರೆ ಒಂದೇ ಎಂದು ಗುರು ನಾನಕರು ಬೋಧಿಸಲಿಲ್ಲವೇ? "ದೇವನೊಬ್ಬ, ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ. ಇನ್ನೊಂದಕ್ಕೆರಗಿದರೆ ಕಿವಿ ಮೂಗು ಕೊಯ್ಯುವ ಕೂಡಲಸಂಗಮದೇವ" ಎಂದು ಬಸವಣ್ಣನವರು ಖಂಡ ತುಂಡವಾಗಿ ತಿಳಿಹೇಳಲಿಲ್ಲವೇ? 'ಸರ್ವ ಧರ್ಮಗಳಲ್ಲಿ ಸಮ ಗೌರವ' ಎಂಬ

ತತ್ತ್ವವು ನಮ್ಮ ಮಕ್ಕಳಲ್ಲಿ ಪ್ರತಿಬಿಂಬಿಸಬೇಕಾಗಿದೆ. ಅದು ಹುಟ್ಟುವುದು ಶಾಲೆಯಲ್ಲಿಯೇ. ಈ ಬೀಜ ಬಿತ್ತುವ ಹದಗಾಲವೆಂದರೆ ಎಳೆಯ ವಯಸ್ಸು. ಎಲ್ಲ ಜಾತಿಯ ಮಕ್ಕಳು ಒಂದೆಡೆ ಸೇರಿ, ಕೂಡಿ, ಆಡಿ, ನಕ್ಕು ನಲಿಯುವ ತಾಣವೆಂದರೆ ಶಾಲೆ. ಶಾಲೆ ಇಂಥ ಧರ್ಮಸೀಠವಾಗಬೇಕು. ನಿಜವಾದ ಧರ್ಮದ ಮರ್ಮವು ಮಕ್ಕಳ ಹೃನ್ಮಂದಿರದಲ್ಲಿ ನೆಲೆಸಬೇಕು. ಅಂಥ ಸನ್ನಿವೇಶಗಳು ಶಾಲೆಗಳಲ್ಲಿ ಬಹುವಾಗಿ ದೊರೆಯಬೇಕು. ಗಾಂಧೀಜಿಯವರ ಸಾಮೂಹಿಕ ಪ್ರಾರ್ಥನೆಯು ಇಂತಹ ಸನ್ನಿವೇಶಗಳಲ್ಲಿ ಒಂದು. ಆದರಿಂದ ಮೂಲ ಶಿಕ್ಷಣ ಸಾಲೆಗಳಲ್ಲಿ ಸಾಮೂಹಿಕ ಪ್ರಾರ್ಥನೆ (Community Prayer) ಯನ್ನು ಸೇರಿಸಲಾಗಿದೆ. ಈ ಸನ್ನಿವೇಶವನ್ನು ಶಿಕ್ಷಕರು ಶ್ರದ್ಧೆಯಿಂದ ಬಳಸಬೇಕು. ಸಾಮುದಾಯಿಕ ಜೀವನದಲ್ಲಿ ಈ ಸನ್ನಿವೇಶವು ಮಹತ್ವವಾದ ಅಂಗವು. "ಅನೇಕ ಸಾಂಸ್ಕೃತಿಕ ಹಾಗು ಧಾರ್ಮಿಕ ಗುಂಪುಗಳ ಪ್ರತ್ಯೇಕ ವೈಶಿಷ್ಟ್ಯ ವನು ಆದರಿಸಬೇಕು ಮತ್ತು ಭಾರತ ಜೀವನದ ರಾಷ್ಟ್ರೀಯ ಜಾಳಿಗೆಯನ್ನು ಗಟ್ಟಿಯಾಗಿ ಹೆಣೆಯಲು ಹವಣಿಸಬೇಕು. ಪ್ರತಿಯೊಂದು ಗುಂಪಿನಲ್ಲ ವಿಶೇಷ ಹಾಗು ಮಹತ್ವವಾದುದನ್ನು ಬೆಳೆಯಿಸಬೇಕೆನ್ನುತ್ತೇನೆ; ಅದೇ ಪ್ರಸಂಗದಲ್ಲಿ ಭೇದಗಳನ್ನು ಕಲಹ ಪ್ರಸಂಗಗಳೆಂದು ಎಣಿಸದೆ ವಿಶಾಲ ಹೃದ ಯದಲ್ಲಿದ್ದ ಸಹನಶೀಲ ಭಾವವನ್ನು ಹೆಚ್ಚಿಸಬೇಕೆನ್ನುತ್ತೇನೆ. ಸೌಂದರ್ಯೋ ಪಾಸಕ ತೋಟಗನಿಗೆ ಈ ವಿಚಾರವನ್ನು ಹೋಲಿಸುತ್ತೇನೆ. ತರತರದ ಹೂವುಗಳನ್ನು ಒಂದೇ ಸಾಮಾನ್ಯ ಜಾತಿಯನ್ನಾಗಿ ಪರಿವರ್ತಿಸಲು ಅವನು ಯತ್ನಿಸದೆ, ವಿವಿಧ ಬಣ್ಣಗಳಿಂದ ವಸಂತ ಕಾಲದ ಸೌಂದರ್ಯವನ್ನು ಅವನು ಕಾಣುತ್ತಾನೆ."

**ಡಾ. ಝಾಕೀರ ಹುಸೇನ**

**ಮುಂದಿನ ಸಮಸ್ಯೆ:**

ಭಾರತದಲ್ಲಿ ಉದಯವಾದ ಇಲ್ಲವೆ ಹಬ್ಬಿದ ಎಲ್ಲ ಧರ್ಮಗಳೂ ಬೆಳೆಯ ಬೇಕು. ಅವುಗಳ ವೈಶಿಷ್ಟ್ಯವನ್ನು ಉಳಿಸಬೇಕು. ಅವು ಪರಸ್ಪರ ಪೋಷಕ ವಾಗುವಂತೆ ಹಬ್ಬಿಸಬೇಕು. ಅವುಗಳನ್ನು ಕಿತ್ತೊಗೆದು ಒಂದೇ ಧರ್ಮವನ್ನು ಸ್ಥಾಪಿಸುವ ಹವ್ಯಾಸವು ಅವ್ಯವಹಾರ್ಯವು. ಅದರಿಂದ ಗಾಂಧೀಜಿಯವರು ಈ ಗೊಡೆವೆಗೆ ಹೋಗಲಿಲ್ಲ. ಧಾರ್ಮಿಕ ಸ್ವಾತಂತ್ರ್ಯವೂ ಬೇಕು;

ವಿಚಾರ ಸ್ವಾತಂತ್ರ್ಯವೂ ಬೇಕು. ನಮ್ಮ ಮಕ್ಕಳು ವಿಚಾರವಾದಿ (Rationalist) ಗಳಾಗಿ ಬೆಳೆಯಬೇಕು. ಇದು ಮುಂದಿನ ನಮ್ಮ ಸಮಸ್ಯೆ. ಇದರ ಪರಿಹಾರವೆಂದರೆ ಗಾಂಧೀಜಿಯವರು ಬೋಧಿಸಿದ ಮಾನವ ಧರ್ಮ.

**ವ್ಯವಹಾರಿಕ ಧರ್ಮ:**

ಮಾನವ ಧರ್ಮವೆಂದರೆ ಮಾನವತೆಗೆ ಮಹತ್ವವನ್ನು ಕೊಟ್ಟ ಧರ್ಮವು. ವಿಶ್ವವನ್ನು ಒಂದೇ ಸೂತ್ರದಲ್ಲಿ ಹೆಣೆಯುವ ಧರ್ಮವು. ಬಂಧುತ್ವವನ್ನು ಬೆಳೆಯಿಸುವ ಧರ್ಮವು. ಪ್ರೇಮ ಜಗತ್ತನ್ನು ನಿರ್ಮಿಸುವ ಧರ್ಮವು. ಈ ಧರ್ಮವು ಹೊತ್ತಿಗೆಯಲ್ಲಿ ಬರೆದಿಡುವದು ಅಲ್ಲ, ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದುದು. ಇದು ಕೇವಲ ತಾತ್ತ್ವಿಕವಾದುದಲ್ಲ; ವ್ಯವಹಾರ್ಯವಾದುದು.

"ನಾನು ವ್ಯಾವಹಾರಿಕ ಧರ್ಮ—ಸ್ವಾವಲಂಬನ ಧರ್ಮ—ವನ್ನು ಕಲಿಸುತ್ತೇನೆ" **ಗಾಂಧೀಜಿ.** ಕರ್ಮ (ಕಾಯಕ)ವೇ ಧರ್ಮ ಎಂಬುದು ಗಾಂಧೀಜಿಯವರ ಜೀವನದ ಮರ್ಮವಾಗಿತ್ತು. "ನೀವು ಸಂಧ್ಯಾವಂದನವನ್ನು ಮಾಡುವಿರೇನು?" ಎಂದು ಒಬ್ಬರು ಗಾಂಧೀಜಿಯವರಿಗೆ ಕೇಳಿದಾಗ, "ನಾನು ಪ್ರತಿನಿಮಿಷವೂ ಸಂಧ್ಯಾವಂದನ ಮಾಡುತ್ತೇನೆ" ಎಂದು ಗಾಂಧೀಜಿ ಉತ್ತರ ಕೊಟ್ಟರು. ಅವರು ಯಾವದೊಂದು ಕೆಲಸವನ್ನು ಏಕಾಗ್ರತೆಯಿಂದ ಮಾಡುತ್ತಿದ್ದರು. ದೇವರ ಧ್ಯಾನ ಮಾಡುತ್ತಲೇ ಅವರು ಕಾರ್ಯದಲ್ಲಿ ತೊಡಗುತ್ತಿದ್ದರು. ಅವರು ಸ್ವಾವಲಂಬಿಯಾಗಿ ಬಾಳಿದರು. ಅದರಿಂದ ಅವರು ಕಾಯಕ ಧರ್ಮ—ಸ್ವಾವಲಂಬನ ಧರ್ಮವನ್ನೇ ಬೋಧಿಸಿದರು. ಸೇವಾಗ್ರಾಮದಲ್ಲಿ ಯಾವುದೊಂದು ಪುಣ್ಯತಿಥಿಯನ್ನು ಆಚರಿಸುವಾಗ ಸಾಮುದಾಯಿಕ ನೂಲುವ (Community Spinning) ಕಾರ್ಯ ಕ್ರಮವನ್ನು ಕೈಕೊಳ್ಳುವರು. ಮೂಲ ಶಿಕ್ಷಣ ಸಾಲೆಗಳಲ್ಲಿಯೂ ಈ ಕಾರ್ಯಕ್ರಮ ಉಂಟು. ಈ ಕಾರ್ಯ ಕ್ರಮಕ್ಕೆ ಧಾರ್ಮಿಕ ಸ್ವರೂಪ ಕೊಡಲಾಗಿದೆ. ಅದಕ್ಕೆ ಸೂತ್ರ ಯಜ್ಞ ಎಂದು ಕರೆಯುವರು.

**ಸೂತ್ರ ಯಜ್ಞ:**

ಯಜ್ಞವೆಂದ ಕೂಡಲೆ ಭಯಪಡುವ ಕಾರಣವಿಲ್ಲ. ಕುರಿಕೋಣಗಳನ್ನು ಬಲಿಕೊಡುವ ಕಾಲವು ಮಾಯವಾಗುತ್ತಿದೆ. ವೇದ ಕಾಲದಿಂದಲೂ

ರೂಢವಾಗಿದ್ದ ಈ ಹಿಂಸಾ ಕೃತಿಯು ಗಾಂಧೀಯುಗದಲ್ಲಿ ಸಾಧ್ಯವಿಲ್ಲ. ಸತ್ಯ ಅಹಿಂಸೆಗಳ ಸಾಕಾರಮೂರ್ತಿಯಾದ ಮಹಾತ್ಮಜಿಯವರು ಯಜ್ಞವೆಂಬ ಶಬ್ದವನ್ನು ಬಳಸಿದರು. ಯಜ್ಞವೆಂದರೆ ಪೂಜಾ ವಿಧಿ ಎಂದು ಸಾಮಾನ್ಯ ವಾಗಿ ಅರ್ಥ ಮಾಡಿಕೊಳ್ಳಬಹುದು. ಕೊಡ ನೀರು ಸುರುವಿ, ಬಂಡಿ ಬಿಲ್ವ ಪತ್ರಹಾಕಿ, ಗಣ ಗಣ ಗಂಟೆ ಬಾರಿಸಿ, ಗುಣು ಗುಣು ಮಾಡುತ್ತ ಕಾಲ ಕಳೆಯುವ ಪೂಜಾವಿಧಿ ಗಾಂಧೀಜಿಯವರ ಶಬ್ದ ಕೋಶದಲ್ಲಿ ಸಿಗುವದಿಲ್ಲ. ಅವರಿಗೆ ಬೇಕಾದುದು ಕಾಯಕ. ಅವರು ಬೋಧಿಸಿದುದು ಕಾಯಕವೇ ಪೂಜೆ. ಅಂಥ ಪೂಜೆಯೇ ಧರ್ಮ. ಸತ್ಯವೇ ಧರ್ಮ. ಸತ್ಯವೇ ದೇವರು. ಅಹಿಂಸೆಯೇ ಆತನ ಸಾಕ್ಷಾತ್ಕಾರ, ಅಹಿಂಸಾ ಕೃತಿಯೇ ಸತ್ಯ ಶೋಧನದ ಸಾಧನ.

ಸೂತ್ರ ಯಜ್ಞವೆಂದರೆ ಸಾಮೂಹಿಕ ನೂಲುವದು. ನೂಲುವದು ಕಾಯಕ. ಮನುಷ್ಯನ ಮರ್ಯಾದೆ ಮುಚ್ಚುವದು ಬಟ್ಟೆ. ಅದನ್ನು ತಯಾ ರಿಸುವ ವಿಧಿ ಪ್ರತಿಯೊಬ್ಬರಿಗೆ ಗೊತ್ತಿರುವುದು ಒಳ್ಳೆಯದು. ಬಟ್ಟೆಯ ಬಾಬಿನಲ್ಲಿ ಪರಾವಲಂಬಿಯಾದರೆ, 'ಮರ್ಯಾದೆಗೆ ಕುಂದು ಬರುವ ಕಾಲ ಬಂದೀತು ಎಂಬುದು ಗಾಂಧೀಜಿಯವರ ದೂರ ದೃಷ್ಟಿ. ಅದರಿಂದ ವಸ್ತ್ರ ಸ್ವಾವಲಂಬನ ತತ್ತ್ವವನ್ನು ಅವರು ಬೋಧಿಸಿದರು. ಪ್ರತಿಯೊಬ್ಬನು ತನಗೆ ಬೇಕಾದ ಬಟ್ಟೆಯನ್ನು ತಾನೇ ತಯಾರಿಸಿಕೊಳ್ಳಬೇಕೆಂದು ಅರ್ಥ ಮಾಡಿ ಕೊಳ್ಳಬಹುದು. ಆದರೆ ಇದು ಸಾಧ್ಯವೇ ಎಂದು ಪ್ರಶ್ನಿಸಬಹುದು. ಪ್ರತಿ ಯೊಬ್ಬನು ಪ್ರತಿ ದಿನ ಅರ್ಧ ಗಂಟೆಯ ವರೆಗಾದರೂ ರಾಟಿಯಿಂದ ನೂಲು ತೆಗೆದರೆ ಸಾಕು. ಒಬ್ಬ ಮನುಷ್ಯನಿಗೆ ವರ್ಷಕ್ಕೆ ಸರಾಸರಿ ಮಾನದಿಂದ ೨೦ ಗಜ ಅರಿವೆ ಬೇಕೆಂದು ಅಂದಾಜು ಮಾಡಿದರೆ, ಅಷ್ಟು ಬಟ್ಟೆಗೆ ಬೇಕಾ ಗುವ ನೂಲನ್ನು ಪ್ರತಿಯೊಬ್ಬನು ತೆಗೆಯಲೇಬೇಕು. ದಿನದಲ್ಲಿ ಒಂದು ಅರ್ಧ ಗಂಟೆಯನ್ನಾದರೂ ಮೀಸಲಿರಿಸಿ ಈ ಕಾರ್ಯ ಮಾಡಿದರೆ ವಸ್ತ್ರ ಸ್ವಾವ ಲಂಬನ ತತ್ತ್ವಕ್ಕೆ ಮಾನ್ಯ ಮಾಡಿದಂತಾಗುವದು. ಇದು ಅಸಾಧ್ಯವಿಲ್ಲ. ಮನವಿದ್ದಲ್ಲಿ ಮಾರ್ಗವಿದೆ. ಮನಸ್ಸು ಬೇಕು. ಕಾಯಕದಲ್ಲಿ ಶ್ರದ್ಧೆ ಬೇಕು.

ಸೇವಾಗ್ರಾಮದಲ್ಲಿ ಸೂತ್ರ ಯಜ್ಞಕ್ಕೆ ಮೌನ ಕತಾಯಿ ಎಂದೂ ಸಂಬೋಧಿಸುತ್ತಾರೆ. ನೂಲುವಾಗ ಶಾಂತ ವಾತಾವರಣವು ಬೇಕು. ಶಾಂತ ವಾತಾವರಣದಲ್ಲಿ ಏಕಾಗ್ರತೆ ಹೆಚ್ಚುವದು. ಏಕಾಗ್ರತೆ ಪರಮಾತ್ಮನ ದರ್ಶನದ ಪರಮ ಸಾಧನ. ಯಾವ ಧರ್ಮಕ್ಕೆ ಅಂಟಿಕೊಂಡರೂ ಏಕಾಗ್ರತೆಯೇ ಪರಶಿವನಲ್ಲಿ ತಾದಾತ್ಮ್ಯ ಹೊಂದುವ ದಿವ್ಯ ಸಾಧನವು. ಅದನ್ನು ಸಾಧಿಸಲು ದಿನವೂ ಯತ್ನಿಸಬೇಕು. 'ಮನವೆಂಬ ಮರ್ಕಟವ ತಡೆಯಲಾರೆನು ದೇವಾ' ಎಂದು ಕವಿಗಳು ಹಾಡಿದ್ದಾರೆ. ಅತ್ತಿತ್ತ ಅಲೆದಾಡುವದು ಮಂಗನ ಸ್ವಭಾವ. ಮಂಗನಂತೆ ಮನಸ್ಸು ಒಂದೆಡೆ ನಿಲ್ಲುವದಿಲ್ಲ. ಮನಸ್ಸನ್ನು ನಿಯಂತ್ರಿಸುವ ಹತೋಟಿಯು ವ್ಯಕ್ತಿಯಲ್ಲಿ ಇಲ್ಲದಿದ್ದರೆ, ಮನುಷ್ಯನು ಮಂಗನ ಅವಸ್ಥೆಗೆ ತಿರುಗುಪ್ಪು ಕೊಡಬೇಕಾಗುವದು; ವಿಚಾರ ಶೂನ್ಯನಾಗಬಹುದು; ವಿವೇಕ ವಿಹೀನನಾಗಬಹುದು. ಕಾರಣ ಚಿಕ್ಕ ಮಕ್ಕಳಿರುವಾಗಲೇ ಏಕಾಗ್ರತೆಯನ್ನು ಬೆಳೆಸಲು ಯತ್ನಿಸುವದು ಒಳ್ಳೆಯದು. ವಿವೇಕ ಮೂಲ್ಯ ಶಿಕ್ಷಣ ಬೇಕೆಂದು ಬರಟ್ರಾಂಡ ರಸೆಲ್ಲರು ಕೂಗುತ್ತಾರೆ. ಮಹಾತ್ಮಾಜಿಯವರ ಶಿಕ್ಷಣ ಯೋಜನೆಯಲ್ಲಿ ಸೂತ್ರ ಯಜ್ಞಕ್ಕೆ ಮಹತ್ವದ ಸ್ಥಾನವಿದೆ. ಅದುವೇ ನಿಜವಾದ ಧಾರ್ಮಿಕ ಶಿಕ್ಷಣ.

ಸೂತ್ರ ಯಜ್ಞವು ಅಂತಹ ಸನ್ನಿವೇಶಗಳಲ್ಲೊಂದು. ಸೂತ್ರಯಜ್ಞ ಸಮಯದಲ್ಲಿ ಶ್ರೀಮಂತ, ಬಡವ, ಬ್ರಾಹ್ಮಣ, ಮಾದಿಗ, ಅಧಿಕಾರಿ, ಕೂಲಿಯವ, ಹೀಗೆ ಯಾವದೇ ತರದ ಭೇದಭಾವವಿಲ್ಲ. ಎಲ್ಲರೂ ಒಂದೇ ದರ್ಜೆಯ ಸ್ಥಾನಗಳಲ್ಲಿ ಕುಳಿತು ಕರ್ಮಯೋಗ ಮಾಡುವರು. ಆರ್ಥಿಕ ವಿಷಮತೆ, ಸಾಮಾಜಿಕ ಅನೈಕ್ಯತೆ, ರಾಜಕೀಯ ಅರಾಜಕತೆ ಇವೆಲ್ಲವೂ ಇಂದಿನ ಸಮಾಜದ ಅನಿಷ್ಟಗಳು. ಇವುಗಳನ್ನು ದೂರ ಮಾಡಬೇಕೆಂಬುವೇ ಜಗದ್ವಂದ್ಯ ಗಾಂಧೀಜಿಯವರ ಬೋಧೆ. ಅವರೇ ನಮ್ಮ ಬಾಳಿನ ಬೆಳಕು, ನಮ್ಮ ನಾಡಿನ ಉಸಿರು. ಹೊಸ ಜಗತ್ತಿನ ನಿರ್ದೇಶಕ. ಅದು ಕಾರಣ ಸೂತ್ರಯಜ್ಞದ ವ್ಯಾಪಕ ಸ್ವರೂಪವನ್ನರಿಯಬೇಕು.

ಸೂತ್ರಯಜ್ಞವು ಸ್ವಾವಲಂಬನ ಧರ್ಮವನ್ನು ಬೋಧಿಸುವದು. ಅದು ವ್ಯಾವಹಾರಿಕ ಧರ್ಮವು. ಅದರಲ್ಲಿ ಹೊಸ ಸಮಾಜದ ಬೆಳಕು ಇದೆ.

ಸಾಮುದಾಯಿಕ ಜೀವನದ ರಹಸ್ಯವಿದೆ. ಒಟ್ಟಾರೆ, ಗಾಂಧೀಜಿಯವರು ಹೇಳಿದ ಧಾರ್ಮಿಕ ಶಿಕ್ಷಣವು ಹೊಸ ಜೀವನವನ್ನುಂಟು ಮಾಡುವದು ಅದುವೇ ಮೂಲ ಶಿಕ್ಷಣದಲ್ಲಿ ತೋರಿಸಿದ ಹೊಸ ಧರ್ಮ, ಹೊಸ ಜೀವನ, ಹೊಸ ಶಿಕ್ಷಣ.

ಇದರಲ್ಲಿ ಸಾಮೂಹಿಕ ಪ್ರಾರ್ಥನೆಯನ್ನು ರಾಷ್ಟ್ರೀಕರಣ ಮಾಡಲಾಗಿದೆ. ವಸ್ತ್ರ ಸ್ವಾವಲಂಬನ ತತ್ವವನ್ನು ಸ್ವಾರಸ್ಯವಾಗಿ ಸೇರಿಸಲಾಗಿದೆ. ಸಾಮಾಜಿಕ ಹಬ್ಬಗಳಿಗೆ ವ್ಯಾಪಕ ಸ್ವರೂಪ ಕೊಡಲಾಗಿದೆ. ಧರ್ಮ, ಜೀವನ, ಶಿಕ್ಷಣಗಳ ಸಂಗಮ ತೋರಿಸಲಾಗಿದೆ.

---

# ೯. ಶೀಲ ಶಿಕ್ಷಣ

ಶೀಲ ಸಂವರ್ಧನೆ ಮಾಡುವುದು ಶಿಕ್ಷಣದ ಮಹತ್ವದ ಕಾರ್ಯ. ನಮ್ಮ ಶಾಲೆಗಳು ಕೇವಲ ಓದು ಬರೆಹಗಳನ್ನು ಕಲಿಸುವ ಮನೆಗಳಲ್ಲ. ಮಕ್ಕಳ ಬೌದ್ಧಿಕ ಬೆಳವಣಿಗೆ ಮಾಡುವುದು ಶಿಕ್ಷಣದ ಮುಖ್ಯ ಕೆಲಸವೆಂದು ತಿಳಿದು, ನಮ್ಮ ಶಾಲೆಗಳು ವಿದ್ಯೆ ಮಾರುವ ಅಂಗಡಿಗಳಾಗಿವೆ. ಇದು ತಪ್ಪು ಕಲ್ಪನೆ. ಎಷ್ಟು ಬುದ್ಧಿವಂತನಾದರೇನು ? ಮಗುವು ಒಳ್ಳೆಯವನಾಗಿ ಬೆಳೆಯದಿದ್ದರೆ, ಅವನ ಬುದ್ಧಿಯಿಂದ ಏನು ಪ್ರಯೋಜನ? ಇರುವಿಕೆಯ ಸೌಂದರ್ಯವನ್ನು ತೋರಿಸುವುದು ಶೀಲವೇ. ಇವನು ಒಳ್ಳೆಯವನು, ಅವನು ಕೆಟ್ಟವನು, ಇವನು ಮಿತ್ರನು, ಅವನು ಶತ್ರುವು, ಇವನು ಉಪಕಾರಿಯು, ಅವನು ಅಪಕಾರಿಯು ಎಂದು ನಿರ್ಣಯಿಸುವದು ಯಾತರಿಂದ? ವ್ಯಕ್ತಿಯ ವರ್ತನೆಯ ಮೇಲಿಂದ ಅಲ್ಲವೇ ? ನಡತೆ ಜೀವನದ ಸೊಬಗು, ಆದರಿಂದ ಮೂಲ ಶಿಕ್ಷಣವು ಮಕ್ಕಳ ನಡತೆಯನ್ನು ತಿದ್ದುವದಕ್ಕೆ ಮಹತ್ವ ಕೊಟ್ಟಿದೆ. ಅಲ್ಲದೆ ಮಗುವಿನ ಶರೀರ, ಬುದ್ಧಿ, ನೀತಿಗಳ ಸಮುದಾಯ ವಿಕಾಸ ತತ್ವವನು ಒಪ್ಪಿದೆ.

**ನಡತೆ ತಿದ್ದುವ ಬಗೆ :**

ನಮ್ಮ ಮನಸ್ಸಿನಲ್ಲಿ ಒಳ್ಳೆಯ ವಿಚಾರಗಳು ಹುಟ್ಟಿದರೆ, ನಾವು ಒಳ್ಳೆಯವರಾಗುತ್ತೇವೆ. ನಮ್ಮಲ್ಲಿ ಕೆಟ್ಟ ವಿಚಾರಗಳೇ ಬೆಳೆಯುತ್ತ ಹೋದರೆ ನಾವು ಅನಾಗರಿಕರಾಗುತ್ತೇವೆ; ಬುದ್ಧಿಯ ದುರುಪಯೋಗ ಮಾಡುತ್ತೇವೆ: ವಿವೇಕಹೀನರಾಗುತ್ತೇವೆ; ಸಾಮಾನ್ಯ ಪ್ರಾಣಿಗಳ ಮಟ್ಟಕ್ಕೆ ಇಳಿಯುತ್ತೇವೆ. ಒಟ್ಟಿನಲ್ಲಿ, ನಮ್ಮಲ್ಲಿ ಉದಯಿಸುವ ವಿಚಾರಗಳೇ ನಮ್ಮನ್ನು ಉನ್ನತ ಮಟ್ಟಕ್ಕೆ ಇಲ್ಲವೆ ಕೀಳು ಮಟ್ಟಕ್ಕೆ ಒಯ್ಯುವವು. ಶೀಲ ಸಂವರ್ಧನೆಯ ಮಾರ್ಗದಲ್ಲಿ ವಿಚಾರ ಪ್ರಭಾವಕ್ಕೆ ಅಗ್ರಸ್ಥಾನವಿದೆ. ಆದರಿಂದ ಮಕ್ಕಳಲ್ಲಿ ಒಳ್ಳೆಯ ವಿಚಾರಗಳು ಹುಟ್ಟುವಂತೆ ಸನ್ನಿವೇಶಗಳನ್ನು ಕಲ್ಪಿಸಿಕೊಡಬೇಕು. ಇದು ಮೊದಲ ಕೆಲಸ. ಕೃತಿಗೆ ವಿಚಾರವೇ ಮೂಲ.

ಹೇಗೆ ವಿಚಾರ ಹುಟ್ಟುವದೋ ಹಾಗೆ ಕೃತಿ ಹೊರಬೀಳುವದು. ಮಕ್ಕಳಲ್ಲಿ ಒಳ್ಳೆಯ ವಿಚಾರ ಹುಟ್ಟಬೇಕು; ಅವರಿಂದ ಒಳ್ಳೆಯ ಕಾರ್ಯ ಆಗಬೇಕು. ಹೀಗೆ ಪ್ರೇರಣೆಯುಂಟಾಗುವ ಬಗೆ ಯಾವುದು ?

ಶಾಲೆಗಳಲ್ಲಿ ನೀತಿಯ ಮಾತುಗಳನ್ನು ಬರೆದ ಪಟಗಳನ್ನು ತೂಗ ಹಾಕುವ ಇಲ್ಲವೆ ಗೋಡೆಗಳ ಮೇಲೆ ಬರೆಯುವ ರೂಢಿ ಉಂಟು. ಮೇಲಿಂದ ಮೇಲೆ ಆ ಮಾತುಗಳು ಮಕ್ಕಳ ಕಣ್ಮುಂದೆ ಬೀಳುವವು. ಅದ ರಿಂದ ಒಳ್ಳೆಯ ಪ್ರೇರಣೆಗಳು ಉಂಟಾಗುವ ಸಂಭವವಿದೆ. ಆದರೆ ಅಷ್ಟು ಮಾಡಿದರೆ ಕೆಲಸ ತೀರಲಿಲ್ಲ. ಆ ಮಾತುಗಳಂತೆ ಗುರುಗಳೂ ಹಿರಿಯ ಬಾಲಕರೂ ನಡೆಯಬೇಕು. ಅದರ ಪರಿಣಾಮವು ಕಿರಿಯ ಬಾಲಕರ ಮೇಲೆ ಆಗುವದು. ತಕ್ಕ ವಾತಾವರಣವೇ ಇಲ್ಲದಿದ್ದರೆ ಆ ಪಟಗಳು ಅಂದಕ್ಕಾಗಿ ಮಾತ್ರ ಉಳಿಯುವವು. ಮಕ್ಕಳಿಗೆ ಕೆಲವು ಕತೆಗಳನ್ನು ಹೇಳಿ ನೀತಿಯ ಮಾತುಗಳನ್ನು ಕಲಿಸುವ ರೂಢಿಯು ಉಂಟು. ಇದರಿಂದಲೂ ಸಾಕಷ್ಟು ಪರಿಣಾಮ ಆಗುವದಿಲ್ಲ. "ನರಿಯು ಕಾಗೆಗೆ ಹೇಗೆ ಠಕ್ಕಿಸಿತು?" ಎಂಬ ಕತೆಯನ್ನು ಹೇಳಿ ಪರರಿಗೆ ಮೋಸ ಮಾಡಬಾರದು, ಎಂಬ ಮಾತನ್ನು ಕಲಿಸುವ ಹಂಬಲ ಬಹಳ. ಆ ಕತೆ ಓದಿದಾಗ ಇಲ್ಲವೆ ಕೇಳಿದಾಗ ಮಕ್ಕಳ ಮೇಲೆ ಸ್ವಲ್ಪ ಪರಿಣಾಮವಾಗಬಹುದು. ಆದರೆ ಅದು ಬಹುಕಾಲ ಉಳಿಯ ಲಿಕ್ಕಿಲ್ಲ. ಇಂಥ ಕತೆಗಳು ಮಕ್ಕಳ ಮನರಂಜನೆಗೆ ಹಾಗು ಬುದ್ಧಿ ಪ್ರಬೋದ ನೆಗೆ ಹೆಚ್ಚು ಅನುಕೂಲ. ನೀತಿಯ ಮಾತು ಅಪ್ರತ್ಯಕ್ಷವಾಗಿ ಅವರಿಗೆ ಪರಿ ಣಮಿಸಬೇಕು. ಅದರಿಂದ ಮಕ್ಕಳ ಇರುವಿಕೆಯ ಸನ್ನಿವೇಶಗಳನ್ನೇ ಆರಿಸಿ, ಹಾಗೆ ತಪ್ಪುದಾರಿ ತುಳಿಯುವದು ಒಳಿತಲ್ಲವೆಂದು ಅವರ ನಿತ್ಯಜೀವನ ನಿರೀ ಕ್ಷಿಸುತ್ತ ತೋರಿಸಬೇಕು. ಅವರ ದೋಷಗಳನ್ನು ಪರಿಯಾಯದಿಂದ ದೂರ ಮಾಡಲಿಕ್ಕೆ ಯತ್ನಿಸಬೇಕು. ಶಾಬ್ದಿಕ ಬೋಧೆಯಿಂದ ನೀತಿ ಉಂಟಾಗುವ ದಿಲ್ಲ; ಪ್ರಾಸಂಗಿಕ ನಿರೀಕ್ಷಣೆಯಿಂದ ಅದು ಸಾಧ್ಯ. ಶೀಲ ಪೋಷಣೆಗೆ ಅದುವೇ ತಕ್ಕ ಹದಗಾಲ. ಇಂಥ ಸಮಯದಲ್ಲಿ ಮಕ್ಕಳಲ್ಲಿ ಒಳ್ಳೆಯ ಚಟಗಳು ನೆಲೆ ಗೊಳ್ಳುವಂತೆ ಮಾಡಬೇಕು.

**ಚಟಗಳು ಹೇಗೆ ನೆಲಿಸುವವು?:**

ಮನುಷ್ಯನಲ್ಲಿ ಹುಟ್ಟುಗುಣಗಳಾಗಿ ಸೇರಿದ ಸಹಜ ಪ್ರವೃತ್ತಿಗಳೇ

(Instincts) ಚಟಗಳ ಮೂಲ ದ್ರವ್ಯಗಳು. ಈ ಪ್ರವೃತ್ತಿಗಳು ಮನುಷ್ಯ ನನ್ನು ಒಳ್ಳೆಯ ಇಲ್ಲವೆ ಕೆಟ್ಟ ಮಾರ್ಗಗಳಿಗೆ ಹಚ್ಚುವವು. ಒಬ್ಬ ಬಾಲಕನು ಪುಸ್ತಕಗಳನ್ನು ಕದಿಯುವನು. ಕಳವು ಮಾಡುವದು ಕೆಟ್ಟ ಕೃತಿ. ಇದೊಂದು ಕೆಟ್ಟಚಟ. ಆದರೆ ಅವನು ಕಳವು ಏಕೆ ಮಾಡುವನು? ಕಾರಣವನ್ನು ತಿಳಿಯು ಬೇಕಾದರೆ, ಈ ಚಟದ ಮೂಲ ದ್ರವ್ಯ ಯಾವದು? ಎಂಬುದನ್ನು ಗೊತ್ತು ಹಚ್ಚಬೇಕು. ಒಡೆತನ ಪ್ರವೃತ್ತಿಯು ಒಂದು ಹುಟ್ಟುಗುಣ. ಬಾಲಕನ ಹತ್ತಿರ ತನ್ನ ಪುಸ್ತಕಗಳಿಲ್ಲದಿದ್ದರೆ, ಇತರರ ಪುಸ್ತಕಗಳನ್ನು ಕದಿಯಲಾರಂಭಿ ಸುವನು. ಈ ಸಂಧಿಯನ್ನು ಸಾಧಿಸಿ, ಆ ಬಾಲಕನಿಗೆ ಸಹಾನುಭೂತಿಯಿಂದ ತಿಳಿಹೇಳಬೇಕು. ಅವನ ಪಾಲಕರಿಗೆ ತಿಳಿಸಿ, ಪುಸ್ತಕ ಕೊಡಿಸುವಂತೆ ಮಾಡ ಬೇಕು. ಹಾಗೆ ಮಾಡದಿದ್ದಲ್ಲಿ ಆ ಹುಡುಗನಿಗೆ ಕದಿಯುವ ಚಟವೇ ನೆಲಸು ವದು; ಯಾಕಂದರೆ ಕಳವು ಮಾಡುವದರಿಂದ ಅಹಿತವದೆ, ಎಂದು ಯಾವ ಪ್ರಸಂಗದಲ್ಲಿಯೂ ಅವನಿಗೆ ತಿಳಿಯಲಿಲ್ಲ. ಮುಂದೆ ಅವನು ಒಬ್ಬ ದೊಡ್ಡ ಕಳ್ಳನೇ ಆಗಬಹುದು; ಅವನಿಂದ ಸಮಾಜಕ್ಕೆ ಅಹಿತವಾಗುವದು ನಿಶ್ಚಿತ. ಮೊದಲು ಪುಸ್ತಕಬೇಕೆಂದು ಕಳವು ಮಾಡತೊಡಗಿದನು. ಆಗ ಒಡೆತನ ಪ್ರವೃತ್ತಿ ಕಾರಣವಾಯಿತು. ಮುಂದೆ ಸಂಗ್ರಹ ಪ್ರವೃತ್ತಿ ನೆರವಾಯಿತು. ಕಳವು ಮಾಡಿದ ವಸ್ತುಗಳನ್ನು ಅವನು ಸಂಗ್ರಹಿಸತೊಡಗಿದನು. ಹೀಗೆ ಸಂಗ್ರಹಿಸಿದಂತೆ ಅವನ ಆನಂದ ಹೆಚ್ಚುವದು. ಅವನು ಪುನಃ ಅದೇ ಕೆಲಸ ಮಾಡುವನು. ಒಮ್ಮೆ ಅವನ ಕಳವು ಹೊರಬಿದ್ದು, ಶಿಕ್ಷೆ ಅನುಭವಿಸಲು ಜೇಲಿಗೆ ಹೋಗುವ ಪ್ರಸಂಗ ಬಂದಾಗ, ಅವನಿಗೆ ದುಃಖವಾಗುವದು. ಆಗ ಅವನಿಗೆ ಪಶ್ಚಾತ್ತಾಪವಾಗುವದು. ಇನ್ನು ಮುಂದೆ ಕಳವು ಮಾಡಬಾರ ದೆಂದು ಅವನಿಗೆ ಅನಿಸುವದು. ಈಗ ಹೇಯ ಪ್ರವೃತ್ತಿ ಒಡ ಮೂಡುವದು. ಕಳವು ಮಾಡುವದು ಹೇಯವಾದುದು ಎಂದು ತಿಳಿದಾಗ ಅವನು ಸನ್ಮಾ ರ್ಗಕ್ಕೆ ಹತ್ತುವನು. ಒಂದು ಪ್ರವೃತ್ತಿಯು ಬಾಲಕನನ್ನು ದುರ್ಮಾರ್ಗಕ್ಕೆ ಹಚ್ಚಿದರೆ ಅದನ್ನು ಪರಿವರ್ತಿಸಿ, ಇನ್ನೊಂದು ಪ್ರವೃತ್ತಿಯ ಪ್ರವಾಹದ ಗುಂಟ ಹರಿಸಬೇಕು; ಎಂದರೆ ಮೂಲ ಪ್ರವೃತ್ತಿಗೆ ಉದಾತ್ತತೆ (Sublimation) ಉಂಟಾಗುವದು. ಸಹಜ ಪ್ರವೃತ್ತಿಗಳು ಶೀಲ ಕಟ್ಟಡದ ಇಟ್ಟಂಗಿಗಳು, ಕೀಳು ಮಾರ್ಗಕ್ಕೆ ಒಯ್ಯುವ ಪ್ರವೃತ್ತಿಗಳನ್ನು ಒಳ್ಳೆಯ ಮಾರ್ಗಕ್ಕೆ

ತಿರುಗಿಸುವದೇ ಶಿಕ್ಷಕನ ಮಹತ್ವದ ಕಾರ್ಯ. ಇದುವೇ ಮಕ್ಕಳ ನಡತೆ ತಿದ್ದುವ ಹೆದ್ದಾರಿ. ದುರ್ನಡತೆಗೆ ಹಚ್ಚುವ ಪ್ರವೃತ್ತಿಗಳನ್ನು ಶೀಘ್ರವೇ ತಡೆದು, ರೂಪಾಂತರಿಸಬೇಕು. ಅವು ಬಲಿತ ಮೇಲೆ, ರೂಪಾಂತರಿಸುವದು ಕಷ್ಟವಾಗುವದು. ಕೆಟ್ಟ ಚಟಗಳು ಬಲಿತವೆಂದರೆ, ಅವುಗಳನ್ನು ಬಿಡುವದು ಕಠಿಣವೆನಿಸಬಹುದು; ಆದರೆ ಅಸಾಧ್ಯವಲ್ಲ. ಕೆಟ್ಟ ಚಟಗಳ ದುಷ್ಪರಿಣಾಮ ತಿಳಿದಾಗ, ಅವುಗಳನ್ನು ಬಿಡಿಸಲು ನಿಶ್ಚಯಿಸಬಹುದು; ಆದರೆ ದೃಢನಿಶ್ಚಯ ಇಲ್ಲವೆ ಇಚ್ಛಾಶಕ್ತಿ (Will power) ಪ್ರಬಲವಾಗಿರಬೇಕು. ಇದು ಎಳೆಯ ವಯಸ್ಸಿನಲ್ಲಿ ಸಾಧ್ಯವಿಲ್ಲ. ಅದರಿಂದ ಮಕ್ಕಳಲ್ಲಿ ಒಳ್ಳೆಯ ಚಟಗಳು ಎಳೆಯ ವಯಸ್ಸಿನಲ್ಲಿಯೇ ನೆಲಗೊಳ್ಳುವದು ಅಗತ್ಯ. ಭಯ, ಸಂಗ್ರಹ, ರಚನಾ, ಆತ್ಮಪ್ರತಿಷ್ಠೆ, ಕುತೂಹಲ ಇತ್ಯಾದಿ ಪ್ರವೃತ್ತಿಗಳು ಉದಾತ್ತ ಮಾರ್ಗಗಳಲ್ಲಿಯೇ ವ್ಯಕ್ತವಾಗುವಂತೆ ಶಿಕ್ಷಕರು ಎಚ್ಚರಪಟ್ಟರೆ, ಮಕ್ಕಳಲ್ಲಿ ಒಳ್ಳೆಯ ಚಟಗಳು ನೆಲೆಸುವವು. ಈ ಮಹತ್ವದ ಸಂಗತಿಗಳಿಗೆ ಲಕ್ಷ್ಯಗೊಡದೆ ಕೇವಲ ಕೆಲವು ಕತೆಗಳನ್ನು ಹೇಳಿಯಾಗಲಿ, ನೀತಿಯ ಮಾತುಗಳನ್ನು ಓದಿಸಿಯಾಗಲಿ ಮಕ್ಕಳಲ್ಲಿ ಶೀಲ ಪೋಷಣೆ ಮಾಡುವ ಹವ್ಯಾಸವು ಒಳಿತಲ್ಲ.

**ಮುಂದಿನ ಕಾರ್ಯ:**

ಶೀಲವನ್ನು ರೂಪಗೊಳಿಸುವದು ಎಂದರೆ ಸಹಜ ಪ್ರವೃತ್ತಿಗಳನ್ನು ಚೇತರಿಸುವದು; ಅವು ಸನ್ಮಾರ್ಗದಲ್ಲಿ ಹರಿಯುವಂತೆ ಎಚ್ಚರ ಪಡುವದು; ಒಳ್ಳೆಯ ಚಟಗಳು ನೆಲೆಗೊಳುವಂತೆ ಯತ್ನಿಸುವದು. ಈ ಹುಡುಗ ಬಲು ಕಿಡಿಗೇಡಿ ಎಂದು ಒಬ್ಬ ಹಿರಿಯನು ಸಹಜವಾಗಿ ಅನ್ನುವನು. ಯಾಕೆ? ಆ ಹುಡುಗನು ಸುಮ್ಮನೆ ಕೂಡ್ರಲಾರ! ಏನೊಂದು ತರುವನು, ಬಿಚ್ಚುವನು, ಹೊಂದಿಸುವನು ಆ ವಸ್ತುವಿನ ರಚನೆ ಕೆಡಬಹುದು. ಅದರಿಂದ ಅವನು ಕಿಡಿಗೇಡಿಯಾದ. ಆದರೆ ಅವನು ಮಾಡುವ ಕೆಲಸ ಅವನ ಬುದ್ಧಿಗೆ ಅನ್ನ! ಅವನ ಕುತೂಹಲ ಪ್ರವೃತ್ತಿಯು ಕೆರಳುವದು. ಅವನು ಹೊಸ ಜ್ಞಾನ (ಅನುಭವ) ಪಡೆಯಲು ಹವಣಿಸುವನು. ಅದರಿಂದ ಅವನು ಆ ಕೆಲಸವನ್ನು ಮಾಡುವನೇ ಹೊರತು, ಆ ವಸ್ತುವನ್ನು ಕೆಡಿಸಬೇಕೆಂಬ ದುರ್ಬುದ್ಧಿಯಿಂದ ಅಲ್ಲ, ಪರರಿಗೆ ತೋರುವ ಕಿಡಿಗೇಡಿತನವು ಬುದ್ಧಿ

ಪ್ರಚೋದನೆಯ ಸುಸಂಧಿಯು, ಕುತೂಹಲ ಪ್ರವೃತ್ತಿಯಿಂದ ಪ್ರೇರಕನಾಗಿ, ರಚನಾ ಪ್ರವೃತ್ತಿಯ ಅಲೆಯ ಮೇಲೆ ತೇಲಾಡುವನು. ಕಡೆಗೆ ಹೊಸತೊಂದು ಸಂಗತಿಯನ್ನು ಗೊತ್ತು ಹಚ್ಚುವನು; ಎಂದರೆ ಶೋಧಕ ಪ್ರವೃತ್ತಿಯ ದಂಡೆಗೆ ತಲುಪುವನು. ಈಗ ನಮ್ಮ ಕಿಡಿಗೇಡಿಯು ಸಂಶೋಧಕನಾದನು. ಹೀಗೆ ಆಗುವ ಸಂಭವ ಬಹಳ ! ಆದರೆ ಎಷ್ಟೋ ಪಾಲಕರಿಗೆ ಮಕ್ಕಳ ಚಟುವಟಿಕೆಗಳ ಅರ್ಥವೇ ಆಗುವದಿಲ್ಲ. ಮಕ್ಕಳಿಗೆ ಚಟುವಟಿಕೆಗಳು ಅವಶ್ಯವಾಗಿ ಬೇಕು. ಜೀವನದ ಆ ಮೆಟ್ಟಿನಲ್ಲಿ ಅವು ಅವರ ಶಾರೀರಕ–ಬೌದ್ಧಿಕ–ನೈತಿಕ ಬೆಳವಣಿಗೆಗೆ ಅಗತ್ಯ. ಈ ಮಾತನ್ನು ಲಕ್ಷ್ಯದಲ್ಲಿಟ್ಟುಕೊಂಡು ಶಿಕ್ಷಕರೂ ಪಾಲಕರೂ ಮಕ್ಕಳ ಶಿಕ್ಷಣ ಕಾರ್ಯದಲ್ಲಿ ಕೈ ಹಾಕಬೇಕು.

ಸಂಶೋಧಕ ಪ್ರವೃತ್ತಿಯು ಮಕ್ಕಳಲ್ಲಿ ಬೆಳೆಯಿತೆಂದರೆ ಅದೊಂದು ದೊಡ್ಡ ಲಾಭವು. ಆ ಲಾಭದ ಫಲವು ವ್ಯಕ್ತಿಗೂ ಸಮಾಜಕ್ಕೂ ಕೂಡಿಯೇ ದೊರೆಯುವದು. ಯಾವುದು ಸರಿ ಎಂಬುದನ್ನು ಕಂಡು ಹಿಡಿಯುವವನು ನಿಜವಾಗಿ ಸತ್ಯಶೋಧಕನು. ಅಂಥವನು ದುರ್ಮಾರ್ಗಕ್ಕೆ ಬೀಳಲಾರ. ಈ ಪ್ರವೃತ್ತಿಯು ಅವನನ್ನು ಉದಾತ್ತ ಮಾರ್ಗಕ್ಕೆ ಒಯ್ಯುವದು. ಅವನ ಕಾರ್ಯದಿಂದ ಸಮಾಜಕ್ಕೆ ಹಿತವಾಗುವದು. ಸಣ್ಣ ಹುಡುಗರಿಗೆ ಕೈತುಂಬ ಕೆಲಸ ಬೇಕು. ಕೆಲಸ ಕಡಿಮೆಯಾಯಿತೆಂದರೆ, ಅವರ ಮನಸ್ಸು ಅಹಿತ ಮಾರ್ಗದಲ್ಲಿ ಓಡುವದು. ಆಲಸಿ ಮೆದುಳು ಸೈತಾನನ ಕುಲುಮೆ ಆಗುವದು. ಸತ್ಯದ ಕಡೆಗೆ ಮಕ್ಕಳ ಒಲವು ಉಂಟಾಗಬೇಕಾದರೆ, ಮಕ್ಕಳಿಗೆ ವಿವಿಧ ಚಟುವಟಿಕೆಗಳನ್ನು ಕಲ್ಪಿಸಿಕೊಡಬೇಕು. ಒಮ್ಮೊಮ್ಮೆ ಬಾಲಕರು ಬುದ್ಧಿಪೂರ್ವಕವಾಗಿ ಸುಳ್ಳು ಹೇಳುವದಿಲ್ಲ. “ಫೀ ಏಕೆ ತರಲಿಲ್ಲ ?” ಎಂದು ಗುರುಗಳು ಕೇಳಿದಾಗ, “ಅಪ್ಪನು ಊರಲ್ಲಿಲ್ಲ” ಎಂದು ತಟ್ಟನೆ ಬಾಲಕನು ಅನ್ನುವದುಂಟು. ಗುರುಗಳು ಸಿಟ್ಟು ಮಾಡುವರೋ ಏನೋ ಎಂಬ ಭಯದಿಂದ ಆ ಬಾಲಕನು ಸುಳ್ಳು ಹೇಳಿರಬಹುದು. ನಿಜವನ್ನು ನುಡಿದರೆ, ಗುರುಗಳು ಸಿಟ್ಟು ಮಾಡುವದಿಲ್ಲವೆಂದು ಬಾಲಕರಿಗೆ ಗೊತ್ತಾಗಬೇಕು. ಎಂದರೆ ಅವರು ಕುಂಟ ನೆವ ಹೇಳುವದನ್ನು ತಪ್ಪಿಸುವರು; ಅವರಲ್ಲಿ ಸುಳ್ಳು ಹೇಳುವ ಚಟವೂ ಹುಟ್ಟುವದಿಲ್ಲ. ಭಯ ಪ್ರವೃತ್ತಿಯು ಬೆಳೆಯಬಾರದು.

ಜ್ಞಾನಾರ್ಜನೆಯ ಮಾರ್ಗದಲ್ಲಿ ಅದೊಂದು ತೊಡಕು—ಭಯ ಬೆಳೆದರೆ ಕುತೂಹಲ ಕಮರುವದು. ಮಕ್ಕಳಲ್ಲಿ ನಿರುತ್ಸಾಹ ಉಂಟಾಗುವದು. ಪ್ರೇಮ ವಾತಾವರಣದಿಂದ ಅನೇಕ ಸದ್ಗುಣಗಳು ಮಕ್ಕಳಲ್ಲಿ ನೆಲಸುವವು; ಸತ್ಯ ಮಾರ್ಗದಲ್ಲಿ ಅವರು ಮುಂದಡಿ ಇಡುವರು.

ಮೂಲ ಶಿಕ್ಷಣವು ಕ್ರಿಯಾತ್ಮಕ ಚಟುವಟಿಕೆಗಳ ಮುಖಾಂತರ ಮಕ್ಕಳಿಗೆ ಶಿಕ್ಷಣ ಕೊಡುವದು. ಉದ್ಯಮ ಶೀಲರಾಗಿ ಮಕ್ಕಳು ಬೆಳೆಯುವರು. ಅವರಲ್ಲಿ ಸ್ವಾವಲಂಬನ ಪ್ರವೃತ್ತಿ ಬೆಳೆಯುವದು. ಜೀವನದಲ್ಲಿ ಇದು ಅತ್ಯಂತ ಮಹತ್ವದ್ದು; ಮಕ್ಕಳಲ್ಲಿ ಧೈರ್ಯವನ್ನು ತುಂಬುವದು. ಧೈರ್ಯವಿದ್ದರೆ ಮನುಷ್ಯನಲ್ಲಿ ಒಳ್ಳೆಯ ವಿಚಾರಗಳು ಹುಟ್ಟುತ್ತವೆ. ಜೀವನದಲ್ಲಿ ಬರಬಹುದಾದ ಕಷ್ಟಗಳನ್ನು ಧೈರ್ಯದಿಂದ ಸಹಿಸಲು ಮಕ್ಕಳು ತರಬೇತು ಆಗಬೇಕು. ವಿಪತ್ತು ಸಹ ಹೊಸ ಪಾಠ ಕಲಿಸುವದೆಂಬ ಅರಿವು ಅವರಿಗೆ ಉಂಟಾಗಬೇಕು. ಮೂಲ ಶಿಕ್ಷಣ ಸಾಲೆಗಳಲ್ಲಿ ಮಕ್ಕಳು ಅನೇಕ ಸಲ ಸಾಂಘಿಕ ಚಟುವಟಿಕೆಗಳಲ್ಲಿ ತೊಡಗುವರು. ಅದರ ಪರಿಣಾಮವಾಗಿ ಅವರಲ್ಲಿ ಪರಸ್ಪರ ಸಹಕಾರ, ಸರಳತನ, ಪ್ರೇಮ ಈ ಸದ್ಗುಣಗಳು ನೆಲೆಸುವವು, ಮೂಲ ಶಿಕ್ಷಣ ಸಾಲೆಗಳಲ್ಲಿ ಪ್ರಜಾ ತಂತ್ರದ ಪ್ರಯೋಗವಿದೆ. ಅದರಿಂದ ಮಕ್ಕಳಿಗೆ ನಾಯಕತ್ವದ ತರಬೇತು ದೊರೆಯುವದು; ನಾಗರಿಕನ ಹೊಣೆ, ಹಕ್ಕು ಬಾಧ್ಯತೆಗಳ ಅರಿವು ಉಂಟಾಗುವದು. ಸಾಮಾಜಿಕ ಜೀವನದಲ್ಲಿ ಮಕ್ಕಳು ಒಳ್ಳೆಯವರಾಗಿ ಬೆಳೆಯಲು ಸಾಕಷ್ಟು ಸನ್ನಿವೇಶಗಳನ್ನು ಕಲ್ಪಿಸಿ ಕೊಡಲಾಗುವದು. ಮೂಲ ಶಿಕ್ಷಣಯೋಜನೆಯಲ್ಲಿ ಶೀಲ ಪೋಷಣೆಗೆ ಕೊಟ್ಟ ಸ್ಥಾನವನ್ನರಿತು ಶಿಕ್ಷಕರೂ ಪಾಲಕರೂ ಮಕ್ಕಳೊಡನೆ ವ್ಯವಹರಿಸುವದು ಅಗತ್ಯ.

---

# ೧೦. ನಾಗರಿಕತೆಗಾಗಿ ಶಿಕ್ಷಣ

ಸ್ವತಂತ್ರ ಭಾರತವು ಪ್ರಜಾ ಸ್ವಾಮ್ಯ ಸರಕಾರವನ್ನು ಒಪ್ಪಿಕೊಂಡಿದೆ. ಪ್ರಜಾಪ್ರಭುತ್ವದ ಹೊಣೆಗಾರಿಕೆಯನ್ನು ತಿಳಿಯುವಂತೆ ನಮ್ಮ ಮಕ್ಕಳನ್ನು ತರಬೇತು ಮಾಡುವದು ಅಗತ್ಯವಿದೆ. ಇಂದಿನ ಮಕ್ಕಳು ನಾಳಿನ ನಾಗರಿಕರು. ನಾಳಿನ ನಮ್ಮ ನಾಡು ಯಾವ ತತ್ವಗಳಿಗೆ ಅಂಟಿಕೊಂಡು ಬೆಳೆಯಬೇಕೆಂದು ನಾವು ಇಂದು ಬಯಸುವೆವೋ ಆ ತತ್ವಗಳಿಗನುಗುಣವಾಗಿ ಇಂದಿನ ಮಕ್ಕಳನ್ನು ನಾವು ತರಬೇತುಗೊಳಿಸಬೇಕು. ಮುಂದಿನ ಧೋರಣವನ್ನು ತಿಳಿದು ಈಗಿನ ಮಕ್ಕಳ ಬೆಳವಣಿಗೆಯನ್ನು ನಿರ್ದೇಶಿಸುವದು ಶಿಕ್ಷಣದ ಮಹತ್ವದ ಕಾರ್ಯ. ಸ್ವತಂತ್ರ ಹಿಂದುಸ್ತಾನದಲ್ಲಿ ಶಿಕ್ಷಣವು ರಾಷ್ಟ್ರನಿರ್ಮಾಣ ಕಾರ್ಯಗಳಲ್ಲಿ ಗಣ್ಯವಾಗಿದೆ. ದೇಶದ ಪುನರ್ರಚನಾ ಕಾರ್ಯಗಳಲ್ಲಿ ಮೂಲ ಶಿಕ್ಷಣ ಪ್ರಸಾರವು ಮಹತ್ವದ್ದಾಗಿದೆ.

ಕೇವಲ ಪ್ರೌಢ ಮತದಾನ ಪದ್ಧತಿಯಿಂದ ಪ್ರಜಾಸ್ವಾಮ್ಯ ಸರಕಾರವನ್ನು ಸ್ಥಾಪಿಸಿದಂತಾಗುವದಿಲ್ಲ. ಈ ರಾಜಕೀಯ ಹಕ್ಕು ಯೋಗ್ಯ ರೀತಿಯಿಂದ ಉಪಯೋಗವಾಗಬೇಕಾದರೆ, ಮತದಾರರು ಯೋಗ್ಯ ಶಿಕ್ಷಣ ಪಡೆದವರಿರಬೇಕು. ಆ ಹಕ್ಕಿನ ಹೊಣೆಯ ಅರಿವು ಅವರಿಗೆ ಚೆನ್ನಾಗಿ ಮನವರಿಕೆಯಾಗಬೇಕು. ಪ್ರಜಾಪ್ರಭುತ್ವ ರಾಜ್ಯಾಂಗದ ರೂಪುರೇಷೆ ಅವರಿಗೆ ಪರಿಚಿತವಾಗಿರಬೇಕು. ಸ್ವತಂತ್ರ ದೇಶದ ನಾಗರಿಕನ ಹಕ್ಕು ಬಾಧ್ಯತೆಗಳ ಅರಿವು ಅವರಿಗೆ ಇರಬೇಕು. ಜಗತ್ತಿನ ನಾಗರಿಕರಾಗಿ ಅವರು ಬಾಳಿ ಬೆಳೆಯುವಂತಾಗಬೇಕು. ನಾಗರಿಕತೆಯ ವ್ಯಾಪಕ ಸ್ವರೂಪದ ಕಲ್ಪನೆ ನಮ್ಮ ಮಕ್ಕಳಲ್ಲಿ ಉಂಟಾಗಬೇಕು. ಇಂಥ ನಾಗರಿಕನ್ನು ತಯಾರಿಸುವದೇ ಮೂಲ ಶಿಕ್ಷಣದ ಮೂಲ ಉದ್ದಿಶ್ಯವು.

ನಮ್ಮ ದೇಶದಲ್ಲಿ ಈ ವರೆಗಿನ ಶಿಕ್ಷಣವು ನಮ್ಮನ್ನು ನಿರಂತರ ದಾಸ್ಯದಲ್ಲಿಡುವ ಹಂಚಿಕೆಯಿಂದ ಹೆಣೆಯಲಾಗಿತ್ತು. ಜಾಣ ನಾಗರಿಕನು

ಸಮಾಜದ ಚೈತನ್ಯಯುಕ್ತ ಸದಸ್ಯನು, ಈ ತತ್ವವನ್ನು ಮಾನ್ಯ ಮಾಡಿ, ಪ್ರಾಥಮಿಕ ಶಿಕ್ಷಣವನ್ನು ಸರ್ವರಿಗೂ ಕೊಡಲಿಲ್ಲ. ಈ ಕೆಲಸವು ಸ್ವತಂತ್ರ ಭಾರತದ ಮೊದಲು ಮೊಸಲು. ಒಳ್ಳೆಯ ನಾಗರಿಕರನ್ನಾಗಿ ತರ ಬೇತುಗೊಳಿಸುವ ಮೂಲ ಶಿಕ್ಷಣವು ಸಾರ್ವತ್ರಿಕವಾಗಿಯೂ, ಪುಕ್ಕಟೆ ಯಾಗಿಯೂ ಇನ್ನು ಮೇಲೆ ಎಲ್ಲರಿಗೂ ದೊರೆಯುವದು. ನಾಗರಿಕತೆಗಾಗಿ ಶಿಕ್ಷಣ ಎಂಬ ತತ್ವವು ನಮ್ಮ ದೇಶದಲ್ಲಿ ಇದೀಗ ಮೊಳಕೆಯೊಡೆದಿದೆ. ಮೂಲ ಶಿಕ್ಷಣ ಯೋಜನೆಯೇ ಈ ಹೆದ್ದಾರಿಯನ್ನು ತೋರಿಸಿತು.

**ನಾಗರಿಕತೆ ಹಾಗು ಬಾಹ್ಯಾಡಂಬರ :**

ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದಲೋ, ಯೋಗ್ಯ ಶಿಕ್ಷಣದ ಅಭಾವದಿಂದಲೋ, ಶಿಕ್ಷಣ ಪಡೆದವರಲ್ಲಿಯೂ ನಾಗರಿಕತೆಯ ಅರಿವು ಕಡಿಮೆ. ಉಗಿಬಂಡಿಯಲ್ಲಿ ಪ್ರವಾಸ ಮಾಡುವಾಗ ಒಮ್ಮೊಮ್ಮೆ ಜನರು ನಿಲ್ದಾಣದಲ್ಲಿ ನುಗ್ಗಾಡುವರು. ಕಿಡಿಕಿಯೊಳಗಿಂದಲೂ ಬಂಡಿಯಲ್ಲಿ ನುಸು ಳಲು ಹವಣಿಸುವರು. ಈ ಗೊಂದಲಲ್ಲಿ ಹುಡುಗರೂ, ಹೆಣ್ಣುಮಕ್ಕಳೂ, ಮುದುಕರೂ ಪೇಚಾಡುವರು. ಅವರ ಈ ತೊಂದರೆಯನ್ನು ನೋಡಿ ಅವ ರಿಗೆ ಸಹಾಯ ಮಾಡಲು ಕೈಚಾಚುವವರು ವಿರಳ. ಅದೇಕೆ ? ಅವರನ್ನು ಬೆದರಿಸಿ, ಹೊರಗೆ ನೂಕುವವರೇ ಬಹಳ. ಆದಾಗ್ಯೂ ಅವರು ಹೇಗೆ ಹೇಗೋ ಒಳಗೆ ಬರುವರು. ಮೊದಲೇರಿದ ಜನರು ಒಳನುಗ್ಗುವವರ ಪ್ರಯಾಸವನ್ನು ಕಂಡೂ ಕಂಡೂ ಕಾಲುಚಾಚಿ ಕೂಡ್ರುವರು. ಕೆಲವ ರಂತೂ ಅಂಗಲಾಗಿ ಮಲಗುವರು. ಬೇರೆ ಕೆಲವರು ನಿದ್ರೆ ಮಾಡುವವರಂತೆ ನಟಿಸುವರು. ಇವರು ನಿರಕ್ಷರಿಗಳಲ್ಲ ! ಸುಶಿಕ್ಷಿತರೆಂದೆನಿಸಿಕೊಳ್ಳುವವರೇ !! ಎಂದಮೇಲೆ ಸುಶಿಕ್ಷಿತತನ ಯಾತರಲ್ಲಿದೆ ? ಅಕ್ಷರ ಜ್ಞಾನದಲ್ಲಿದೆಯೋ ಉಡಿಗೆ ತೊಡಿಗೆಗಳಲ್ಲಿದೆಯೋ ? ಒನಪು ಒಯ್ಯಾರಗಳಲ್ಲಿದೆಯೋ ? ತಿಳಿದವರೇ ಊಹಿಸಲಿ.

ಕೆಲವರಂತೂ ಹಣ್ಣು-ಹಂಪಲಗಳನ್ನು ತಿಂದು, ಸಿಪ್ಪೆಗಳನ್ನು ಬಂಡಿ ಯಲ್ಲಿಯೇ ಒಗೆಯುವರು. ಪರರು ಕೂಡ್ರುವ ಸ್ಥಳ ಹೊಲಸಾಗುವದೆಂಬ ಅರಿವೇ ಅವರಿಗಿಲ್ಲ. ಹೆಚ್ಚು ಕೇಳಿದರೆ, "ಉಗಳಬಾರದು" ಎಂದು ಮಾತ್ರ ಬರೆದಿದೆ ಎಂಬ ವಾದ ಹೂಡುವರು. ಇವರೂ ಅಕ್ಷರಶತ್ರುಗಳಲ್ಲ ! ರೇಶನ್

ಅಂಗಡಿಗಳಲ್ಲಿ, ಸಿನೇಮಾ, ನಾಟಕ ಮಂದಿರಗಳಲ್ಲಿ, ಮೋಟಾರು, ಉಗಿಬಂಡಿ ನಿಲ್ದಾಣಗಳಲ್ಲಿ ಸರತಿಯ ಸಾಲು ಈಗ ಮಾಡಿದ್ದಾರೆ. ಕೆಲವರಿಗೆ ಅಂಥ ಸಾಲಿನಲ್ಲಿ ನಿಲ್ಲುವದಕ್ಕೂ ಮಾನ ಕಡಿಮೆ. ನಡುವೆ ಸೇರಲು ಯತ್ನಿಸುವರು. ಇಲ್ಲವೆ ಗುರುತಿನವರನ್ನು ಹುಡುಕಿ ಅವರ ಕಡೆಗೆ ತಮ್ಮ ಟಿಕೀಟಿಗಾಗಿ ಹಣ ಕೊಡುವರು. ಇವೆಲ್ಲ ಅಸಭ್ಯ ವರ್ತನಗಳೇ. ತಮ್ಮ ಇಂಥ ವರ್ತನವು ಇನ್ನೊಬ್ಬನ ಮೇಲೆ ಹೇಗೆ ಪರಿಣಮಿಸುವದೆಂಬ ಅರಿವೇ ಅವರಿಗಿಲ್ಲ.

ಕಸಕಡ್ಡಿಗಳನ್ನು ಒಂದು ಕಡೆಗೆ ಕೂಡಿಡಬೇಕೆಂಬ ಭಾವನೆಯೂ ಬಹಳ ಜನರಲ್ಲಿ ಬೆಳೆದು ಬಂದಿಲ್ಲ. ಹಾದಿಗುಂಟ ಕಸ-ಕಡ್ಡಿಗಳನ್ನು, ಹಣ್ಣಿನ ಸಿಪ್ಪೆಗಳನ್ನೂ, ಕಾಗದದ ತುಂಡುಗಳನ್ನೂ ಚೆಲ್ಲುವರು. ಕಸದ ಡಬ್ಬಿಗಳಲ್ಲಿ ಹಾಕುವ ಚಟವೇ ಹುಟ್ಟಿ ಬೆಳೆದಿಲ್ಲ. ಬೇಕಾದತ್ತ ಹೊಲಸು ! ಮೂತ್ರಾಲಯಗಳಲ್ಲಿಯೂ ಹೊಲಸು ಚೆಲ್ಲುವರು. ಈ ಹೊಲಸು ತೊಳೆದು ಮಲ ಮೂತ್ರಾಲಯಗಳನ್ನು ಸ್ವಚ್ಛ ಮಾಡುವ ಭಂಗಿಗೆ ಆಗುವ ನೋವನ್ನಂತೂ ಅರಿತವರೇ ವಿರಳ. ಅದಕ್ಕಾಗಿಯೇ ಮಹಾತ್ಮಾಜಿಯವರು ಭಂಗಿಯ ತ್ಯಾಗವನ್ನು ಬಣ್ಣಿಸಿದರು. ಮತ್ತು ಪ್ರತಿಯೊಬ್ಬರೂ ಭಂಗಿಯಾಗಬೇಕೆಂದೂ ಬೋಧಿಸಿದರು; ಎಂದರೆ ಮಾತ್ರ ನಮ್ಮಲ್ಲಿ ನಿಜವಾದ ನಾಗರಿಕತೆಯು ಒಡಮೂಡುವದು. ಸಭೆಗೆ ತಡಮಾಡಿ ಹೋಗುವದು, ಪರರ ಅನಾನುಕೂಲತೆಗಳನ್ನು ಅಲಕ್ಷಿಸುವದು, ದೊಡ್ಡಿಸ್ತಿಕೆಯ ಲಕ್ಷಣಗಳಾಗಿವೆ. ಸಮಯ ನಿಷ್ಠತೆಯಿಲ್ಲ, ಕರ್ತವ್ಯದಕ್ಷತೆ ಕಡಿಮೆ, ನಿಯಮ ಪಾಲನವಿಲ್ಲ. ಸಾಮಾಜಿಕ ಹೊಣೆಯ ಅರಿವು ಇಲ್ಲ. ನಾಗರಿಕತೆಯ ನೈಜಸ್ವರೂಪದ ಕಲ್ಪನೆಯೇ ಇಲ್ಲ. ನಾವು ಸುಧಾರಿಸಿದ್ದೇವೆ; ನಾಗರಿಕರಾಗಿದ್ದೇವೆ ಎಂದು ತಿಳಿದುದು ಹೇಗೆ? ಬಾಹ್ಯಾಡಂಬರವೇ ಇದಕ್ಕೆ ಕಾರಣ.

**ಎಂಥ ನಾಗರಿಕರು ಬೇಕು?**

ಮೂಲ ಶಿಕ್ಷಣವು "ನಾಗರಿಕತೆಗಾಗಿ ಶಿಕ್ಷಣ" ಎಂಬ ಹಿರಿಯ ಗುರಿಯನ್ನು ಇಟ್ಟುಕೊಂಡೇ ಮುಂದೆ ಸಾಗುವದು. **ಡಾ. ಝಾಕೀರರ** ವರದಿಯಲ್ಲಿಯ ಮಾತುಗಳೇ ಇದಕ್ಕೆ ಸಾಕ್ಷಿ :

"ಬಡವರಿರಲಿ, ಸಿರಿವಂತರಿರಲಿ ಪರಾವಲಂಬಿಗಳನ್ನು ಹುಟ್ಟಿಸುವ ಶಿಕ್ಷಣವು ಹೇಯವಾದುದು. ಅದು ಉತ್ಪಾದಕ ಶಕ್ತಿಯನ್ನೂ, ಸಮಾಜದ

ಕ್ರಿಯಾಶಕ್ತಿಯನ್ನೂ ಕುಗ್ಗಿಸುತ್ತದೆ. ಅಲ್ಲದೆ, ಅಸಹಾಯಕರ ಹಾಗು ಅನೈತಿಕ ಮನೋಗತಿಯನ್ನು ಹುಟ್ಟಿಸುತ್ತದೆ. ಈ ಯೋಜನೆಯು ದುಡಿಯುವವರನ್ನು ಹುಟ್ಟಿಸುವದಕ್ಕಾಗಿ ಹೆಣೆಯಲಾಗಿದೆ. ಕೈ ಕುಸುರು ಭಂಗೀ ಕೆಲಸವನ್ನೊಳಗೊಂಡು ಉಪಯುಕ್ತ ಎಲ್ಲ ಕೆಲಸಗಳು ಗೌರವಯುಕ್ತವೆಂದು ಅವರು ತಿಳಿಯುವರು. ತಮ್ಮ ಕಾಲ ಮೇಲೆ ತಾವು ನಿಲ್ಲಲು ಅಪೇಕ್ಷಿಸುವವರೂ, ಸಮರ್ಥರೂ ಅವರು ಆಗುವರು. ಶಾಲೆಗಳಲ್ಲಿ ಮಾಡಿದ ಕೆಲಸಕ್ಕೂ ಸಮಾಜದಲ್ಲಿ ಕಾಣುವ ಕೆಲಸಕ್ಕೂ ಸಾಮಿಪ್ಯವಿದ್ದುದು ಕಂಡು ಬರುವದು. ಶಾಲೆಯ ವಾತಾವರಣದ ಪರಿಣಾಮವಾಗಿ ಅವರಲ್ಲಿ ಹುಟ್ಟಿದ ಧ್ಯೇಯ ಧೋರಣಗಳು ಹೊರಗಿನ ಜಗತ್ತಿಗೆ ಮಕ್ಕಳನ್ನು ಒಯ್ಯಲು ಸಾಮರ್ಥ್ಯವನ್ನುಂಟು ಮಾಡುವವು. ಈ ರೀತಿ ನಾವು ಪ್ರತಿಪಾದಿಸುತ್ತಿರುವ ಹೊಸ ಯೋಜನೆಯು ನಾಳಿನ ನಾಗರಿಕರಲ್ಲಿ ವೈಯಕ್ತಿಕ ಮಹತಿ, ಗೌರವ, ಕ್ರಿಯಾಶಕ್ತಿ ಇವುಗಳ ಅರಿವನ್ನು ಹುಟ್ಟಿಸಲು ಯತ್ನಿಸುವದು. ಅವರಲ್ಲಿ ಸ್ವಂತ ಸುಧಾರಣೆಯಾಗುವದು; ಮತ್ತು ಸಹಕಾರಿಕ ಸಾಮುದಾಯಿಕ ಜೀವನದಲ್ಲಿಯೂ ಅವರು ಯೋಗ್ಯರಾಗಿ ಬೆಳೆಯುವರು.''

**ನಾಗರಿಕತೆಯ ಆದರ್ಶವನ್ನು ಮುಟ್ಟುವ ಬಗೆ:**

ನಾಗರಿಕನಲ್ಲಿ ನೆಲೆಸಿರಬೇಕಾದ ಆವಶ್ಯಕ ಗುಣಗಳು ಯಾವವು? **ರಿ. ರಾಯಬರ್ನ** ಅವರು ನಾಲ್ಕು ಗುಣಗಳನ್ನು ನಿರೂಪಿಸಿದ್ದಾರೆ. ಅವು:– (೧) ನಾಡನಿಷ್ಠೆ (೨) ಧೈರ್ಯ (೩) ಸಹಕಾರ (೪) ಆದರ್ಶ.

ನಾಡನಿಷ್ಠೆ ಪ್ರತಿಯೊಬ್ಬ ನಾಗರಿಕನಲ್ಲಿ ಬೆಳೆಯಬೇಕಾದುದು ಅಗತ್ಯ. ನಾಡಿನ ಹಿರಿಮೆಗೆ ಹೆಣಗುವ ಬುದ್ಧಿ ಬೇಕು. ನಾಡಿನ ಹಿರಿಯರಲ್ಲಿ ನಂಬುಗೆ ಇಡಬೇಕು. ನಾಡಿನ (ಸರಕಾರದ) ನಿಯಮಗಳನ್ನು ಪಾಲಿಸಬೇಕು. ಸ್ವದೇಶಾಭಿಮಾನವು ದುರಭಿಮಾನವಲ್ಲ; ತಪ್ಪು ಇರಲಿ, ಸರಿ ಇರಲಿ ನನ್ನ ದೇಶಕ್ಕಾಗಿ ನಾನು ಹೋರಾಡುವೆ ಎಂಬ ಒಣ ಹೆಮ್ಮೆ ಬೇಡ. ನನ್ನ ದೇಶವು ಯೋಗ್ಯ ಮಾರ್ಗದಲ್ಲಿ ನಡೆದಿದ್ದರೆ ಮಾತ್ರ ನಾನು ಹೋರಾಟದಲ್ಲಿ ಸೇರುವೆ; ನನ್ನ ತ್ಯಾಗವು ಸತ್ಯಕ್ಕಾಗಿ ಇದ್ದರೆ ಮಾತ್ರ ನಾನು ಭಾಗಿ ಆಗುವೆ ಎಂಬ ಉದಾತ್ತ ಭಾವನೆಯಿಂದ ಪ್ರೇರಿತನಾಗಬೇಕು. ಅವರೇ ವ್ಯಾಪಕಾರ್ಥದಲ್ಲಿ ನಿಜವಾದ ನಾಗರಿಕರು. ಜಗತ್ತನ್ನೇ ಹಾನಿಗೀಡು ಮಾಡಿದ ಹಿಟ್ಲರನ

ದೇಶಾಭಿಮಾನವು ಆದರ್ಶವಲ್ಲ. ಅದು ನಿಜವಾದ ನಾಗರಿಕತೆಯ ಸ್ವರೂಪ ವಲ್ಲ. ನಾನು ನನ್ನ ನಾಡಿನ ನಾಗರಿಕನೂ ಅಹುದು, ಜಗತ್ತಿನ ನಾಗರಿಕನೂ ಅಹುದು. ಇಂಥ ನಾಗರಿಕತೆಯ ವ್ಯಾಪಕ ಸ್ವರೂಪವನ್ನು ಕವಿ ರವೀಂದ್ರರು ವಿವರಿಸಿರುವರು. ಮಹಾತ್ಮಾಜಿಯವರೂ ಅದನ್ನೇ ಬೋಧಿಸಿರುವರು. ಅದುವೇ ನವನಾಗರಿಕತೆಯ ಕಲ್ಪನೆ. ಇಂದಿನ ಜಗತ್ತಿಗೆ ಬೇಕಾದುದು ಈ ವಿಚಾರವೇ.

ಎಷ್ಟು ಹೊತ್ತಿಗೆಗಳನ್ನು ಓದಿದರೂ, ಎಷ್ಟು ಪ್ರಶಸ್ತಿ ಪತ್ರಿಕೆಗಳನ್ನು ದೊರಕಿಸಿದರೂ ಜೀವನದಲ್ಲಿ ಕಾಲಿಟ್ಟಾಗ ಎದೆಗೆ ಏಟು ಕೊಟ್ಟಂತಾಗುವದು. ದಿನದಿನವೂ ಜೀವನದ ಅನೇಕ ಸಮಸ್ಯೆಗಳು ಧುತ್ತೆಂದು ನಿಲ್ಲುವವು; ಅವು ಗಳನ್ನು ಓಡಿಸಲು ಪುಸ್ತಕಗಳು ಸಹಾಯಕವಾಗುವದಿಲ್ಲ. ತರುಣರು ಎದೆ ಗುಂದುವರು. ಜೀವನದಲ್ಲಿ ಉದ್ಭೂತವಾಗುವ ಸಮಸ್ಯೆಗಳು ಜಟಿಲ ವಾಗಿ ಉಳಿಯುವವು. ಆಶೆ-ಆಕಾಂಕ್ಷೆಗಳಿಗೆ ನೀರೆರಚಿದಂತೆ ಆಗುವದು. ದೇಹವು ಜರ್ಜರಿತವಾಗುವದು. ಮನೋಬಲ ಕುಗ್ಗುವದು. ವಿಸಂಗತ ಶಿಕ್ಷಣವೇ ಇದರ ಮೂಲ; ಶಿಕ್ಷಣವು ಜೀವನದಿಂದ ದೂರ ಸಿಡಿದರೆ ಆಗುವ ಪರಿಣಾಮವೇ ಇದು. ಅದರಿಂದ ಜೀವನೋಪಯೋಗಿ ಶಿಕ್ಷಣ ಮೊದಲು ದೊರೆಯಬೇಕು; ಎಂದರೆ ಮಾತ್ರ ಅವರಲ್ಲಿ ಧೈರ್ಯ ಹುಟ್ಟುವದು. ನಿಷ್ಕ್ರಿಯ ಶಿಕ್ಷಣದಿಂದ ನಮ್ಮ ಮಕ್ಕಳಲ್ಲಿಯ ಕ್ರಿಯಾಶಕ್ತಿಯು ಸುಪ್ತಾವಸ್ಥೆ ಯಲ್ಲಿಯೇ ಉಳಿಯುವದು. ಇದನ್ನರಿತು ನಮ್ಮ ಮಕ್ಕಳಲ್ಲಿ 'ಸಿಂಹಧೈರ್ಯ' ತುಂಬುವ ಶಿಕ್ಷಣ ಬೇಕೆಂದು ಸ್ವಾಮಿ ವಿವೇಕಾನಂದರು ಕೂಗಿದರು. ತತ್ವ ಕ್ಕಾಗಿ ಹೋರಾಡುವಾಗಂತೂ ಅಚಲ ಧೈರ್ಯ ಬೇಕು.

ಸಮಾಜದಲ್ಲಿ ನಾವು ಒಳ್ಳೆಯವರಾಗಿ ಬೆಳೆಯಬೇಕಾದರೆ, ನಮ್ಮಲ್ಲಿ ಸಹಕಾರ ಬುದ್ಧಿಯು ಅವಶ್ಯವಾಗಿ ಬೇಕು. ಸ್ವಾರ್ಥವಿದ್ದಲ್ಲಿ ಅನರ್ಥ ಕಟ್ಟಿಟ್ಟದ್ದೇ! ಈ ದುರ್ಬುದ್ಧಿಯು ಮಾಯವಾಗಿ ನಮ್ಮಲ್ಲಿ ಸುಬುದ್ಧಿಯು ಹುಟ್ಟಿತೆಂದರೆ ಅದುವೇ ಸಹಕಾರ ತತ್ವದ ಅಂಕುರ. ನನಗಾಗಿ ಇನ್ನೊ ಬ್ಬನು ದುಡಿಯುವನು; ಇನ್ನೊಬ್ಬನಿಗಾಗಿ ನಾನೂ ದುಡಿಯುವೆ, ಎಂಬ ಭಾವನೆಯು ಎಳೆಯ ಮಕ್ಕಳಲ್ಲಿ ಹುಟ್ಟಬೇಕು. ಇದು ಹುಟ್ಟಿ ಬೆಳೆಯು ವುದು ಸಾಹಕಾರಿಕ ಜೀವನದಿಂದ ಮಾತ್ರ ಸಾಧ್ಯ. ಅದಕ್ಕಾಗಿ ಮೂಲ

ಶಿಕ್ಷಣ ಯೋಜನೆಯಲ್ಲಿ ಸಾಹಕಾರಿಕ ಚಟುವಟಿಕೆಗಳಿಗೂ, ಸಾಮುದಾಯಿಕ ಜೀವನಕ್ಕೂ ಅತ್ಯಂತ ಮಹತ್ವದ ಸ್ಥಾನ ಕೊಡಲಾಗಿದೆ.

ನಿಜವಾದ ನಾಗರಿಕನೆಂದರೆ ಅವನೊಬ್ಬ ದಾರ್ಶನಿಕ, ಸಾಮೂಹಿಕ ಜೀವನದಲ್ಲಿ ಅವನು ಹೇಗೆ ಬಾಳಬೇಕೆಂಬುದು ಅವನ ಸತತ ಚಿಂತೆ. ಅನ್ಯ ರಿಗೆ ಅನ್ಯಾಯವಾಗದಂತೆ ಬಾಳುವದೇ ಅವನ ಬಾಳಿನ ಗುರಿ. ತನ್ನ ದೇಶವು ಜಗತ್ತಿಗ ನೀಡುವ ಕೊಡುಗೆ ಯಾವದು ? ಹೀಗೆ ಅವನು ವಿಚಾರಿ ಸುವನು. ಮಾನವ ಜಾತಿಯನ್ನು ಕೆಳವುಟ್ಟಕ್ಕಿಳಿಸುವ ಎಲ್ಲ ವಿಧಾನ ಗಳನ್ನೂ ಅವನು ವಿರೋಧಿಸುವನು. ಅವನಿಗೆ ಆತ್ಮ ತೇಜವಿದೆ; ಅಂತ ರ್ದೃಷ್ಟಿಯಿದೆ. ನಡೆಶುದ್ಧ; ಭಾವಶುದ್ಧ; ಕೃತಿಶುದ್ಧ. ಅಂಥವರೇ ಉದಾತ್ತ ನಾಗರಿಕರು. ನಾಗರಿಕತೆಯ ಉದಾತ್ತತೆಯನ್ನು ಮಕ್ಕಳ ರಕ್ತನಾಳದಲ್ಲಿ ಸೇರಿಸಲು ಮೂಲ ಶಿಕ್ಷಣವು ಹವಣಿಸುತ್ತದೆ.

**ಎಳೆಯ ಮಕ್ಕಳಲ್ಲಿ ನಾಗರಿಕತೆಯನ್ನುಂಟು ಮಾಡುವ ಬಗೆ:**

೧. ನಾಗರಿಕತೆಯು ಹೇಳಿಕೆಯಿಂದ ಹುಟ್ಟುವದಿಲ್ಲ. ಎಲ್ಲರೂ ಸಾಲಾಗಿ ನಿಲ್ಲಬೇಕು; ಸರತಿಯಂತೆ ನಡೆಯಬೇಕು; ಕೇಳಿದಾಗ ಹೇಳ ಬೇಕು; ಗುರುಹಿರಿಯರ ಮಾನ ಕಾಯಬೇಕು; ಬೇಗ ಮಲಗು ಬೇಗ ಏಳು; ಹೀಗೆ ಅಪ್ಪಣೆಗಳನ್ನು ಬರೆದು ಹಚ್ಚಿದರೆ, ಏನು ಉಪಯೋಗ ! ಮಕ್ಕಳು ನಿತ್ಯ ಜೀವನದಲ್ಲಿ ಈ ನಿಯಮಗಳನ್ನು ಪಾಲಿಸಬೇಕು. "ಮಾಡಿ ಕಲಿ" ಎಂಬುದು ಮಹತ್ವದ್ದು.

೨. ಸೂಚನೆಯು ಅತ್ಯಂತ ಮಹತ್ವದ ಅಂಗವು. ಮಕ್ಕಳ ಜೀವನ ವನ್ನು ನಿರೀಕ್ಷಣೆ ಮಾಡಿ ಗುರುಗಳು ಆಗಾಗ ಯೋಗ್ಯ ಸೂಚನೆಗಳನ್ನು ಕೊಡುತ್ತಿರಬೇಕು.

೩. ಮಕ್ಕಳ ಕಾರ್ಯದಲ್ಲಿ ಗುರುಗಳು ಅನವಶ್ಯಕವಾಗಿ ಕೈಹಾಕ ಬಾರದು. ಮಕ್ಕಳಿಗೆ ವಿಚಾರಿಸುವ ಹಾಗು ತಮ್ಮ ವಿಚಾರದಂತೆ ಕೆಲಸ ಮಾಡುವ ಸ್ವಾತಂತ್ರ್ಯವನ್ನು ಕೊಡಬೇಕು. ಸ್ವತಂತ್ರ ರೀತಿಯಿಂದ ಕಾರ್ಯ ಮಾಡುವ ವ್ಯಕ್ತಿಗಳಾಗುವಂತೆ ಅವರ ಪೋಷಣೆ ಮಾಡಬೇಕು.

೪. ಯೋಗ್ಯ ಕೆಲಸ ಮಾಡುವ ವಿದ್ಯಾರ್ಥಿಗಳಿಗೆ ಗುರುಗಳು ಉತ್ತೇಜನ ಕೊಡುತ್ತಿರಬೇಕು. ಮಂದ ಕೆಲಸಗಾರರಿಗೆ ಸಹಾನುಭೂತಿ ತೋರಿಸಬೇಕು. ಪ್ರತಿಯೊಬ್ಬ ವ್ಯಕ್ತಿಯೂ ತಕ್ಕ ಗೌರವ ಪಡೆದು ಮುಂದೆ ಬರಲು ಯತ್ನಿಸುವನು.

೫. ಶಾಲೆಯಲ್ಲಿ ಮಕ್ಕಳ ಆಡಳಿತಕ್ಕೆ ಆಸ್ಪದವಿರಬೇಕು. ಇದು ನಮ್ಮ ಶಾಲೆ ಎಂಬ ಹೆಮ್ಮೆ ಮಕ್ಕಳಲ್ಲಿ ಹುಟ್ಟಬೇಕು. ಶಾಲೆಯ ಸ್ವಚ್ಛತೆ ವರ್ಗದ ಸಾಮಾನುಗಳು, ಸಾಮೂಹಿಕ ಚಟುವಟಿಕೆಯ ವ್ಯವಸ್ಥೆ ಎಲ್ಲವನ್ನೂ ಅವರೇ ನೋಡಬೇಕು. ಶಾಲೆಯಲ್ಲಿ ಆಟ ನೋಟಗಳನ್ನೂ, ಪ್ರದರ್ಶನ ಪ್ರವಾಸಗಳನ್ನೂ, ಹಬ್ಬ-ಉತ್ಸವಗಳನ್ನೂ ಏರ್ಪಾಡು ಮಾಡುವ ಹೊಣೆ ಅವರಿಗೆ ಹಂಚಿಕೊಡಬೇಕು. ಪರಸ್ಪರ ಸಹಕಾರದಿಂದ ಶಾಲೆಯ ಆಡಳಿತವನ್ನು ನಡೆಯಿಸಿಕೊಳ್ಳುವಂತೆ ಗುರುಗಳು ಮಾರ್ಗದರ್ಶನ ಮಾಡಬೇಕು.

೬. ಶಾಲೆಯ ವಾತಾವರಣವೂ ಅತ್ಯಂತ ಮಹತ್ವದ್ದು. ಗುರುವೂ ಆದರ್ಶಜೀವಿಯಾಗಿ ಮಕ್ಕಳಿಗೆ ಕಾಣಬೇಕು.

ಈ ಸಂಗತಿಗಳನ್ನು ಅನುಲಕ್ಷಿಸಿ ಮಕ್ಕಳಲ್ಲಿ ನಾಗರಿಕತೆಯನ್ನುಂಟು ಮಾಡಲು ಮೂಲ ಶಿಕ್ಷಣವು ಯತ್ನಿಸುತ್ತದೆ.



# ೧೧. ಸಾಂಸ್ಕೃತಿಕ ಶಿಕ್ಷಣ

ನಮಗೆ ಎಂಥ ಶಿಕ್ಷಣಬೇಕು ? ಎಂದು ಒಬ್ಬ ಅನುಭವಿಕ ವ್ಯಕ್ತಿಯನ್ನು ಕೇಳಿದೆ. ಶಿಕ್ಷಣ ತಜ್ಞರ ವಿಚಾರಗಳನ್ನು ಅವರು ಓದಿರಲಿಲ್ಲ. "ಮಕ್ಕಳು ಸುಸಂಸ್ಕೃತ ಜೀವಿಗಳಾಗಿ ಬಾಳಿ ಬೆಳೆಯುವಂಥವರಾಗಬೇಕು." ಎಂದು ಅವರು ಹೇಳಿದರು. ಇದು ಒಳ್ಳೇ ಮಾರ್ಮಿಕವಾದ ಮಾತು. ಇದರ ಅರ್ಥವನ್ನು ಸರಿಯಾದ ರೀತಿಯಲ್ಲಿ ಮಾಡಿಕೊಳ್ಳುವದೂ ಸುಸಂಸ್ಕೃತ ಜೀವಿಗೆ ಸಾಧ್ಯ.

**ಸಂಸ್ಕೃತಿಯ ಮೂಲ :**

"ಸತ್ಯಂ ವದ, ಧರ್ಮಂ ಚರ, ಅನೃತಂ ಮಾ ಭಾಷ" ಎಂದು ಋಷಿಗಳು ಹೇಳಿದರು.

"ಅಸತೋಮಾಂ ಸದ್ಗಮಯ
ತಮಸೋಮಾಂ ಜ್ಯೋತಿರ್ಗಮಯ
ಮೃತ್ಯೋರ್ಮಾಂ ಅಮೃತಂಗಮಯ"

ಎಂದು ನಾವು ಮಂತ್ರವನ್ನು ಅನ್ನುತ್ತೇವೆ. ಅಸತ್ಯದಿಂದ ಸತ್ಯದ ಕಡೆಗೆ, ಕತ್ತಲೆಯಿಂದ ಬೆಳಕಿನ ಕಡೆಗೆ, ಮೃತ್ಯುವಿನಿಂದ ಅಮರತ್ವದ ಕಡೆಗೆ ಒಯ್ಯಬೇಕೆಂದು ನಾವು ಬೇಡಿಕೊಳ್ಳುತ್ತೇವೆ. ನುಡಿದಂತೆ ನಡೆದರೆ ಸಂಸ್ಕೃತಿಯ ಸುಧೆ ನಮಗೆ ಸಿಗುವದು.

**ಪ್ರೊ. ಎಚ್. ಟಿ. ಸಾಸನೂರ** ಅವರ ಶಬ್ದಗಳಲ್ಲಿ ಹೇಳುವದಾದರೆ "ತನ್ನ ಜೀವನವು ಮಧುಮಯವಾಗಬೇಕು. ತನ್ನ ಜೀವನದಲ್ಲಿಯ ಅಜ್ಞಾನದ ಕತ್ತಲೆಯು ಕಳಚಿಹೋಗಿ, ಜ್ಞಾನ ಜ್ಯೋತಿಯು ಪ್ರಜ್ವಲಿಸಬೇಕು; ತನ್ನ ದೃಷ್ಟಿಯು ವಿಶಾಲವಾಗಬೇಕು, ಅದರಂತೆ ಅನ್ಯರದೂ ಆಗಬೇಕು ಎಂಬ ಉನ್ನತ ಧ್ಯೇಯಗಳಿಂದ ಪ್ರೇರಿತವಾದ ಪ್ರಯತ್ನಗಳೇ ಸಂಸ್ಕೃತಿಯ ಮೂಲ.........ನಿಜವಾದ ಅರಿವು—ಜ್ಞಾನ—ಸಂಸ್ಕೃತಿ ಅಂತರೀಕ್ಷಣೆಯಲ್ಲಿದೆ.

ನಾನು ಯಾರು, ನನಗೂ ಸಮಾಜಕ್ಕೂ ಯಾವ ಸಂಬಂಧವಿದೆ, ಜೀವನ ವೆಂದರೇನು, ಪವಿತ್ರ ಜೀವನದ ಧ್ಯೇಯಗಳಾವವು? ಎಂದು ಮುಂತಾಗಿ ತಿಳಿದುಕೊಂಡು, ಅದಕ್ಕನುಗುಣವಾಗಿ ಆಚರಿಸುವದೇ ಸಂಸ್ಕೃತಿ."

ಸತ್ಯದ ಸ್ವರೂಪ ದರ್ಶನವೇ ಸಂಸ್ಕೃತಿ. ಜೀವನದ ಆಂತರಿಕ ಸೌಂದರ್ಯವೇ ಸಂಸ್ಕೃತಿ. ಸಾಮಾಜಿಕ ಜೀವನದಲ್ಲಿ ಸತ್ಯ ಸೌಂದರ್ಯಗಳನ್ನು ತೋರುವ ರೀತಿಯೇ ಸಂಸ್ಕೃತಿ.

**ಸಂಸ್ಕೃತಿಯೆಂದರೇನು?**

ಸಂಸ್ಕೃತಿಯ ಬಗೆಗೆ ಸ್ಥೂಲ ಪರಿಚಯವನ್ನು ಮೇಲೆ ಮಾಡಿಕೊಡಲಾಗಿದೆ. ಸಂಸ್ಕೃತಿ ಎಂಬ ಶಬ್ದದ ಬಳಕೆಗೆ ಚಾರಿತ್ರ್ಯವುಂಟು. ಒಂದು ಕಾಲದಲ್ಲಿ ಸಂಸ್ಕೃತ ಭಾಷೆಯಲ್ಲಿ ಪಂಡಿತರು ಸುಸಂಸ್ಕೃತರೆಂದೂ, ಮತ್ತೊಂದು ಕಾಲದಲ್ಲಿ ಗ್ರೀಕ, ಲ್ಯಾಟಿನ್ ಭಾಷೆಗಳಲ್ಲಿಯ ನಿಷ್ಣಾತರು ಸುಸಂಸ್ಕೃತರೆಂದೂ ಗ್ರಹಿಸಲಾಗಿತ್ತು. ಆಗ ಶಿಕ್ಷಣದ ಧ್ಯೇಯವೂ ಅದೇ ತತ್ವಕ್ಕೆ ಅಂಟಿಕೊಂಡಿತ್ತು. ಈ ವಿಚಾರವು ಎಷ್ಟು ಸಂಕುಚಿತವಾದುದೆಂಬುದು ವಿಚಾರವಾದಿಗಳಿಗೆ ತಟ್ಟನೆ ಹೊಳೆಯದಿರದು. ಈ ಭಾಷೆಗಳಲ್ಲಿ ಪರಿಜ್ಞಾನವಿಲ್ಲದವರೆಲ್ಲ ಅರಣ್ಯವಾಸಿಗಳು, ಅಸಭ್ಯರು, ಅನಾಗರಿಕರು ಎಂದು ಕರೆಯಬಹುದೇ ? ಈ ಪಿಡುಗು ೨೦ನೆಯ ಶತಮಾನದಲ್ಲೂ ನಮ್ಮನ್ನು ಬಿಡಲಿಲ್ಲ. ಆಂಗ್ಲ ಭಾಷಾತಜ್ಞರು ಸುಧಾರಿಸಿದವರು, ಸುಸಂಸ್ಕೃತರು ಎಂದು ಹೆಮ್ಮೆಪಡುವ ಜಂಭದ ಕೋಳಿಗಳ ಪೀಳಿಗೆಯೇ ತಯಾರಾಯಿತು.

" ಪರರ ವಿಚಾರಗಳನ್ನು ಪರಭಾಷೆಯಲ್ಲಿ ಕಂಠಪಾಠ ಮಾಡಿ, ತಲೆ ತುಂಬಿಕೊಂಡ ಪದವೀಧರರು ಶಿಕ್ಷಣ ಪಡೆದವರೆಂದು ಎನ್ನಿಸಿಕೊಳ್ಳುವರು. ಇದು ಶಿಕ್ಷಣವೋ ? ಹೆಸರಿಗೆ ತಕ್ಕುದೋ ?" ಎಂದು ಸ್ವಾಮಿ ವಿವೇಕಾನಂದರು ಕೇಳಿದರು. ಸ್ವಂತ ವಿಚಾರವಲ್ಲ. ತನ್ನ ಭಾಷೆಯಲ್ಲ. ಆಂತರಿಕ ಪರಿವರ್ತನೆಯಿಲ್ಲ, ಹೊರಗಿನ ಹೊಳಪೇ ಹೆಚ್ಚು, ಇವು ಸುಸಂಸ್ಕೃತರ ಲಕ್ಷಣಗಳೇ ! ಇವು ನಿಜವಾದ ಸಂಸ್ಕೃತಿಯ ಪ್ರತೀಕಗಳೇ ! ಅಲ್ಲ ! ಅಲ್ಲ! ! ತನ್ನ ನಾಡು ನುಡಿಗಳಲ್ಲಿ ಹೆಮ್ಮೆ ಬೇಡವೇ ? ನಾಡಿನ ಉಜ್ವಲ ಚಾರಿತ್ರ್ಯ ರಾಷ್ಟ್ರ ಪೋಷಕ ಸಾಹಿತ್ಯ, ಸಂಗೀತ, ಕಲೆ ಇವುಗಳ ತೆಚ್ಚಳ ಕಾಯಬೇಡವೇ ? ಅವುಗಳ ಹಿರಿಮೆಯನ್ನು ಹೆಚ್ಚಿಸಬೇಡವೇ ? ಇವು ನಿಜವಾದ ಸಂಸ್ಕೃತಿಯ

ಪ್ರತೀಕಗಳಲ್ಲವೇ ? ಇವುಗಳ ಆವಿರ್ಭಾವವು ಮಾತುಗಳಲ್ಲಿಲ್ಲ; ಕೃತಿಗಳಲ್ಲಿದೆ. ಮೂಲ ಶಿಕ್ಷಣ ಯೋಜನೆಯು ಕರ್ಮಧರ್ಮವನ್ನು ಸ್ವೀಕರಿಸಿದೆ. ಕೃತಿ ಶಾಲಿಗಳನ್ನು ಹುಟ್ಟಿಸಲು ಹೊರಟಿದೆ. ಸಾಮುದಾಯಿಕ ಜೀವನದಲ್ಲಿ ವ್ಯಕ್ತಿಯು ತೋರಿಸುವ ಪ್ರತಿಕ್ರಿಯೆಯ ಮೇಲಿಂದ ಆ ವ್ಯಕ್ತಿಯ ಸಂಸ್ಕೃತಿಯ ಪ್ರತಿಭೆಯನ್ನು ಹೊರಗೆಡುಹುವುದು.

ಸಾಕ್ಷರರು ಸುಸಂಸ್ಕೃತರೆಂದು ಕರೆಯುವ ರೂಢಿಯದೆ. ಹಳ್ಳಿಗ ನೊಬ್ಬನು ಸಾದಾ ಉಡುಪು ಧರಿಸುವನು. ಅವನಿಗೆ ಅಕ್ಷರಜ್ಞಾನವಿಲ್ಲ; ಆದರೆ ಅನುಭವವಿದೆ. ತನ್ನೆಡೆಗೆ ಒಬ್ಬನು ಬಂದರೆ, “ ಬನ್ನಿರಿ, ಕುಳ್ಳಿರಿ ” ಎಂದು ವಿನಯದಿಂದ ಹೇಳುವನು. “ ಅತಿಥಿಯೇ ದೇವ” ಎಂಬ ಭಾವನೆ ತಳೆಯುವನು. ನೀರು ಬೇಕೇ ? ಬೆಲ್ಲ ಬೇಕೇ ? ಎಂದು ಕಳಕಳಿಯಿಂದ ಕೇಳುವನು. ಕಷ್ಟವನ್ನಾದರೂ ಸಹಿಸಿ ನೆರವು ನೀಡುವನು. ಪರರ ಕಷ್ಟ ಗಳಲ್ಲಿಯೂ ಭಾಗಿಯಾಗುವನು. ದಯೆ, ನ್ಯಾಯ, ಸಹನೆ, ಮಮತೆ ಸರಳತನ, ಸತ್ಯ ಇವು ಅವನ ಹೃನ್ಮಂದಿರದಲ್ಲಿ ನೆಲೆಸಿವೆ. ಅವು ಕುಸುಮ ಗಳಾಗಿ ಅರಳಿ, ಅವನ ಜೀವನ ಕಾಂತಿಯನ್ನೇ ಹೆಚ್ಚಿಸಿ, ಸಮಾಜದಲ್ಲಿ ಪರಿ ಮಳ ಬೀರುತ್ತವೆ. ಇವನು ಸುಸಂಸ್ಕೃತನಲ್ಲವೇ ? ಅಕ್ಷರಶತ್ರುವಾದ ರೇನು ? ಜನರ ಮಿತ್ರನಲ್ಲವೇ ? ಅವನ ವ್ಯಕ್ತಿತ್ವವೇ ಸಂಸ್ಕೃತಿಮಯವಾಗಿ ಲ್ಲವೇ ? ಮಹಾತ್ಮಾಜಿಯವರ ವಾಣಿಯಲ್ಲಿ ಹೇಳೆಯುವದಾದರೆ, ಇದಕ್ಕೆ ಇಡೀ ವ್ಯಕ್ತಿತ್ವದ ಸಂಸ್ಕಾರ (Literacy of the whole personality) ಎಂದು ಹೇಳಬಹುದು.

ಅದುಕಾರಣ ಸಂಸ್ಕೃತಿಯು ಸಾಕ್ಷರತೆಯಲ್ಲಿಲ್ಲ; ಪುಸ್ತಕೀ ವಿದ್ಯೆ ಯಲ್ಲಿಲ್ಲ: ವಿಶಿಷ್ಟ ಉಡುಪಿನಲ್ಲಿಲ್ಲ; ಹೊರಗಿನ ಸೋಗಿನಲ್ಲಿಲ್ಲ; ಒಳಗಿನ ಸೊಗಸಿನಲ್ಲಿದೆ; ಕೃತಿಯಲ್ಲಿದೆ. ಬರಿ ಓದು ಸಂಸ್ಕೃತಿಯಲ್ಲ. ಅರಿವಿನ ಜೀವನ ಸಂಸ್ಕೃತಿ. ನಡೆನುಡಿಗಳ ಮಧುರ ಸಾಮರಸ್ಯವೇ ಸಂಸ್ಕೃತಿ. ಮಹಾತ್ಮಾ ಬಸವಣ್ಣನವರು ಕೆಳಗಿನ ವಚನದಲ್ಲಿ ಸಂಸ್ಕೃತಿಯ ಲಕ್ಷಣ ವನ್ನು ಸ್ವಾರಸ್ಯವಾಗಿ ಹೇಳಿದಿದ್ದಾರೆ.

“ ನುಡಿದರೆ ಮುತ್ತಿನ ಹಾರದಂತಿರಬೇಕು. ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು. ನುಡಿದರೆ

ಲಿಂಗವೆಂಬ್ಚ್ಚಿ ಅಹುವಹುದೆನಬೇಕು. ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯ."

ಒಂದು ಕುಟುಂಬದ ಸಂಸ್ಕೃತಿ, ಒಂದು ಸಮಾಜದ ಸಂಸ್ಕೃತಿ. ಒಂದು ಜನಾಂಗದ ಸಂಸ್ಕೃತಿ ಎಂದು ಬೇರೆ ಬೇರೆಯಾಗಿ ಹೇಳುವ ಪರಿ ಪಾಠ ವುಂಟು. ಅವೆಲ್ಲವುಗಳು ಬೆಲ್ಲದ ಪೆಂಟೆಗಳೇ, ಸಣ್ಣವು ದೊಡ್ಡವು ಮಾತ್ರ. ಸವಿ ಒಂದೇ ತರದ್ದು. ಸಾಂಘಿಕ ಜೀವನದಲ್ಲಿ ತೋರಿ ಬರುವ ವ್ಯಕ್ತಿಯ ಸಂಸ್ಕಾರದ ಪರಿಣಾಮವೇ ಸಂಸ್ಕೃತಿ. ಶ್ರೀ. **ಕೆ. ಮುನಸಿ** ಅವರ ಶಬ್ದ ಗಳಲ್ಲಿ ಹೇಳುವದಾದರೆ:

"ಸಂಸ್ಕೃತಿಯು ಕೆಲವು ಮೂಲ್ಯಗಳಿಂದ ಕೂಡಿದೆ. ಜೀವನದ ರೀತಿಗಳು, ಶೀಲ ಮಾರ್ಗಗಳು, ಸಾಮಾಜಿಕ ಪರಂಪರೆಗಳು ಹಾಗು ಸಂಸ್ಥೆ ಗಳು, ಜೀವನದ ಧ್ಯೇಯ ಧೋರಣಗಳು, ಸಮಾಜದಲ್ಲಿ ಜೀವಕಳೆ ತುಂಬಲು ಸಹಾಯಕವಾಗುವ ಸಾಮಾಜಿಕ ಹಾಗು ಆದರಣೀಯ ಅಂಶಗಳು ಇವುಗಳ ಮುಖಾಂತರ ಜೀವನದ ಮೂಲ್ಯಗಳು ವ್ಯಕ್ತವಾಗುವವು."

**ಆಕ್ಷೇಪಣೆಗೆ ಉತ್ತರ:**

ಮೂಲ ಶಿಕ್ಷಣ ಯೋಜನೆಯಲ್ಲಿ ಸಂಸ್ಕೃತಿಯನ್ನೇ ದುರ್ಲಕ್ಷ ಮಾಡ ಲಾಗಿದೆ ಎಂದು ಕೆಲವರು ಆಕ್ಷೇಪಣೆ ಎತ್ತಿದರು. ಅದ ಸರಿಯಲ್ಲವೆಂದು ಈಗ ಓದುಗರಿಗೆ ಹೊಳೆಯದಿರದು. ಮೂಲ ಶಿಕ್ಷಣ ಸಾಲೆಗಳ ವೇಳಾ ಪತ್ರಿಕೆಗಳಲ್ಲಿ ಉದ್ಯೋಗಗಳಿಗೆ ಹೆಚ್ಚು ಸಮಯ ಕೊಟ್ಟದ್ದು ಈ ಆಕ್ಷೇಪಣೆಗೆ ಮೊದಲನೆಯ ಕಾರಣ. ಉದ್ಯೋಗಗಳು ಶಿಕ್ಷಣದ ಮಾಧ್ಯಮವಾದುದ ರಿಂದ ಉದ್ಯೋಗ ಸಮಯದಲ್ಲಿ ಮಕ್ಕಳು ಇತರ ವಿಷಯಗಳನ್ನು ಕಲಿಯು ವರು. ಡಾ. ಝುಕೀರರ ವರದಿಯಲ್ಲಿ ಹೇಳಿದ ಮಾತುಗಳನ್ನು ಇಲ್ಲಿ ಉದಾಹರಿಸುವಾ.

"ಯಾಂತ್ರಿಕ ರೀತಿಯಿಂದ ಕೈಗಾರಿಕೆಯನ್ನು ರೂಢಿ ಮಾಡಲು ಸಮರ್ಥರಾದ ಕೈಕುಶಲರನ್ನು ಸಿದ್ಧಗೊಳಿಸುವದು ಈ ಯೋಜನೆಯ ಮೂಲ ಉದ್ದೇಶವಲ್ಲ; ಆದರೆ ಕೈಗಾರಿಕೆಯಲ್ಲಿ ಹುದುಗಿದ ಮೂಲ ಧನಗಳನ್ನು ಶೈಕ್ಷ ಣಿಕ ಉದ್ದಿಶ್ಯಗಳಿಗಾಗಿ ಉಪಯೋಗಿಸುವದೇ ಮೂಲ ಉದ್ದೇಶವು."

ಈ ಸಂಗತಿಯನ್ನು ಚನ್ನಾಗಿ ತಿಳಿದುಕೊಂಡರೆ, ಉದ್ಯೋಗಕ್ಕಿಂತ ಉದ್ಯಮದ ಮರೆಯಲ್ಲಿದ್ದ ಶೈಕ್ಷಣಿಕ ಸಫಲತೆಯು ಮಹತ್ವದ್ದು ಎಂದು ಹೊಳೆಯ ದಿರದು. ಮೂಲ ಶಿಕ್ಷಣ ಅಭ್ಯಾಸದ ವಿಷಯ ಪತ್ರಿಕೆಯಲ್ಲಿಯ ಸಮಾಜ ವಿಜ್ಞಾನ, ಮಾತೃಭಾಷೆ, ಹಿಂದುಸ್ತಾನಿ, ಸಂಗೀತ, ಚಿತ್ರಕಲೆ, ಕೈಗಾರಿಕೆ ಮುಂತಾದವುಗಳನ್ನು ಚನ್ನಾಗಿ ಅಭ್ಯಸಿಸಿದಲ್ಲಿ, ಮೂಲ ಶಿಕ್ಷಣ ಯೋಜನೆ ಯಲ್ಲಿ ಮಕ್ಕಳ ಸಾಂಸ್ಕೃತಿಕ ಬೆಳವಣಿಗೆಗೆ ಮಹತ್ವದ ಸ್ಥಾನ ಕೊಟ್ಟಿದೆ ಯೆಂದು ಮನವರಿಕೆಯಾಗುವದು.

ಸಂಸ್ಕೃತಿ ದುರ್ಲಕ್ಷಿಸಲಾಗಿದೆಯೇ ? ಎಂಬ ಪ್ರಶ್ನೆಯ ಬಗೆಗೆ ಸೇವಾ ಗ್ರಾಮದಲ್ಲಿ ದಿ. ೧೩–೧೨–೪೭ನೆಯ ದಿನ ಚರ್ಚೆ ನಡೆದಾಗ, ಅಲ್ಲಿಯ ತರ ಬೇತಿ ವರ್ಗದ ಸಂಚಾಲಕರಾದ **ಶ್ರೀ. ಆರ್ಯನಾಯಕಂ** ಅವರು ಈ ರೀತಿ ನುಡಿದರು:

ಸಂಸ್ಕೃತಿಯು ಕೇವಲ ಪುಸ್ತಕೀ ವಿದ್ಯೆಯಲ್ಲಿಲ್ಲ. ಭಾಷೆ, ಭೂಗೋಲ, ಇತಿಹಾಸ ಮುಂತಾದ ವಿಷಯಗಳು ಸಾಂಸ್ಕೃತಿಕ ವಿಷಯಗಳೆಂದು ಕೆಲ ವರು ತಿಳಿಯುವರು. ಇದು ತಪ್ಪು ಕಲ್ಪನೆ. ನಮ್ಮ ಪೂರ್ವಜರ ಸಂಸ್ಕೃ ತಿಯ ಬಗೆಗೆ ಹೊತ್ತಿಗೆಗಳು ಮಾರ್ಗಗಳನ್ನು ತೋರಿಸುವವು. ಆದರೆ ನಿಜ ವಾದ ಸಂಸ್ಕೃತಿಯ ಆವಿರ್ಭಾವವು ನಮ್ಮ ಆಚರಣೆಯಲ್ಲಿ ಒಡಮೂಡುವದು. ಪೂರ್ವಜರ ಅನುಭವದ ಸಾರವೆಲ್ಲ ಮುಂಬರುವ ಪೀಳಿಗೆಯ ಆಚಾರ ವಿಚಾರ ಗಳಲ್ಲಿ ಪ್ರತಿಬಿಂಬಿಸಬೇಕು. ಇದುವೇ ನಿಜವಾದ ಸಂಸ್ಕೃತಿ."

ಸುಧಾರಣೆ, ಪ್ರಗತಿ, ಮೇಲ್ಮಟ್ಟ, ಉದಾತ್ತತೆ ಎಂಬ ಶಬ್ದಗಳಿಂದ ಸಂಸ್ಕೃತಿಯನ್ನು ಗುರುತಿಸುವರು. ಅವು ಸಂಸ್ಕೃತಿಯ ಸ್ಮಾರಕಗಳು; ಆದರೆ ಅವು ವ್ಯಕ್ತಿಯ ಜೀವನದಲ್ಲಿ ಪ್ರದೀಪಿಸಬೇಕು. ಈ ಒರೆಗಲ್ಲಿಗೆ ಮೂಲ ಶಿಕ್ಷಣಯೋಜನೆ ಎಂಬ ಸುವರ್ಣವನ್ನು ಅರೆಯಬೇಕು; ಎಂದರೆ ಅದರ ನಿಜವಾದ ಬೆಲೆ ತಿಳಿಯುವದು. ಕರ್ತವ್ಯದಕ್ಷತೆ, ಸಮಯ ನಿಷ್ಠತೆ, ಶ್ರಮಗೌರವ, ಸಮಗೌರವ, ಸೌಹಾರ್ದತೆ, ನಿಯಮಪಾಲನ, ಪರೋಪ ಕಾರ ಇತ್ಯಾದಿ ಸದ್ಗುಣಗಳೆಲ್ಲ ಸಾಂಸ್ಕೃತಿಕ ಜೀವನದ ತಾರೆಗಳು. ಸಂಸ್ಕೃತಿಯೆಂಬುದು ಜೀವನದರ್ಶನ. ದಾರ್ಶನಿಕರು ತಮ್ಮ ನಿತ್ಯ ಜೀವನದಲ್ಲಿಯೇ ಸಂಸ್ಕೃತಿಯ ಸ್ವರೂಪವನ್ನು ಚಿತ್ರಿಸುವರು. ಇಂಥ

ದರ್ಶನ ಪಡೆಯುವ ಮಾರ್ಗವನ್ನೂ, ಭಾರತೀಯ ಸಂಸ್ಕೃತಿಯು ವಿಶ್ವ ಸಂಸ್ಕೃತಿಯ ಕಡೆಗೆ ಒಯ್ಯುವದೆಂಬದನ್ನೂ ಮೂಲ ಶಿಕ್ಷಣ ಯೋಜನೆಯಲ್ಲಿ ತೋರಿಸಲಾಗಿದೆ.

**ಭಾರತೀಯ ಸಂಸ್ಕೃತಿ:**

ಸಂಸ್ಕೃತಿಯ ಪ್ರಭಾವದಿಂದ ಉದಾರ ಭಾವನೆ, ನಿರ್ಮಲ ಜ್ಞಾನ. ಜೀವನ ಸೌಂದರ್ಯಗಳು ಹೊರಸೂಸುವವು. ಭಾರತೀಯ ಸಂಸ್ಕೃತಿಯಲ್ಲಿ ಇವುಗಳನ್ನು ಕಾಣುವೆವು. ಸಾನೆ ಗುರೂಜಿಯವರ ಮಾತುಗಳಲ್ಲಿ ಮುಗಿಸುವುದಾದರೆ,

“ಭಾರತೀಯ ಸಂಸ್ಕೃತಿ ಎಂದರೆ ಕರ್ಮ, ಜ್ಞಾನ, ಭಕ್ತಿಗಳ ಜೀವಂತ ಮಹಿಮೆಯು. ಶರೀರ, ಬುದ್ಧಿ ಮತ್ತು ಹೃದಯಗಳನ್ನು ಸದಾ ಸೇವೆಯಲ್ಲಿ ಸವಿಸುವ ಪ್ರಭಾವವುಳ್ಳದ್ದು. ಅದುವೇ ಸಹಾನುಭೂತಿಯು, ವೈಶಾಲ್ಯವು ಸತ್ಯದ ಪ್ರಯೋಗವು. ಅದು ಒಂದೆಡೆಯಲ್ಲಿ ನಿಲ್ಲದೆ, ಜ್ಞಾನವನ್ನು ಹಿಂಬಾಲಿಸಿ ಮುಂದರಿಯುವದು. ಜಗತ್ತಿನಲ್ಲಿದ್ದ ಸತ್ಯ, ಶುಭ ಮತ್ತು ಸುಂದರವಾದದ್ದನ್ನೆಲ್ಲ ಬೆರಿಸಿಕೊಂಡು ಬೆಳೆಯುವ ಸಂಸ್ಕೃತಿಯು ಅದು..............

“ದೊಡ್ಡ ತನವು ಎಲ್ಲಿ ಕಂಡರೂ ಭಾರತೀಯ ಸಂಸ್ಕೃತಿಯು ಅದನ್ನು ಆರಾಧಿಸುವದು. ಆದರದಿಂದ ಮತ್ತು ಆನಂದದಿಂದ ಅದನ್ನು ಸಂಗ್ರಹಿಸುವದು.

“ಭಾರತೀಯ ಸಂಸ್ಕೃತಿ ಎಂದರೆ ಸಾಂತದಿಂದ ಅನಂತಕ್ಕೆ, ಕತ್ತಲೆಯಿಂದ ಬೆಳಕಿಗೆ, ವಿರೋಧದಿಂದ ವಿವೇಕಕ್ಕೆ, ಭೇದದಿಂದ ಅಭೇದಕ್ಕೆ ಅವ್ಯವಸ್ಥೆಯಿಂದ ವ್ಯವಸ್ಥೆಗೆ, ಕೆಸರಿನಿಂದ ಕಮಲಕ್ಕೆ, ಚೀರಾಟದಿಂದ ಸಂಗೀತದ ಕಡೆಗೆ ಹೋಗುವ ಸಂಸ್ಕೃತಿಯು. ಭಾರತೀಯ ಸಂಸ್ಕೃತಿ ಎಂದರೆ ಕೂಡುವಿಕೆಯು....ಮಾನವ ಜನಾಂಗವನ್ನೇ ಮಾಂಗಲ್ಯದ ನಿಟ್ಟಿಗೆ ಸಾಗಿಸಲೆಳಸುವದು.”

ಸಂಸ್ಕೃತಿಯ ವ್ಯಾಪಕ ಸ್ವರೂಪವನ್ನು ಮಕ್ಕಳ ಹೃದಯದಲ್ಲಿ ಮೂಡಿಸಿ, ನಿಜವಾದ ಸುಸಂಸ್ಕೃತ ನಾಗರಿಕರನ್ನು ತಯಾರಿಸುವದು ಮೂಲ ಶಿಕ್ಷಣದ ಮೂಲ ಉದ್ದಿಶ್ಯವು.

# ೧೨. ಸ್ವಾವಲಂಬಿ ಶಿಕ್ಷಣ

ಪ್ರಾಥಮಿಕ ಶಿಕ್ಷಣವು ಸ್ವಾವಲಂಬಿಯಾಗಬೇಕೆಂದು ಮಹಾತ್ಮಾಜಿಯವರು ಹೇಳಿದಾಗ ಕೆಲ ಶಿಕ್ಷಣ ತಜ್ಞರಿಗೆ ಸಿಡಿಲು ಬಡಿದಂತಾಯಿತು. ಎಲ್ಲ ಮಕ್ಕಳಿಗೂ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯವಾಗಿಯೂ, ಪುಕ್ಕಟೆಯಾಗಿಯೂ ಕೊಡುವದು ಸರಕಾರದ ಕರ್ತವ್ಯ. ಶಿಕ್ಷಣವು ರಾಷ್ಟ್ರನಿರ್ಮಾಣದ ಕಾರ್ಯ. ಸರಕಾರದ ಹೊಣೆಯನ್ನು ತಪ್ಪಿಸಿ ಶಿಕ್ಷಣವು ಸ್ವಾವಲಂಬಿಯಾಗಬೇಕೆಂಬ ತತ್ತ್ವವನ್ನು ಏಕೆ ಹೆಣೆಯುವಿರಿ ? ಎಂದು ಕೆಲವರು ಕೇಳುವರು. ಆದರೆ ಈ ದಿಸೆಯಲ್ಲಿ ೧೯೧೧ರಲ್ಲಿ ಶ್ರೀ. ಗೋಪಾಲಕೃಷ್ಣ ಗೋಖಲೆ ಅವರು ಪ್ರಯತ್ನಿಸಿದರು. ೧೯೩೭ರ ವರೆಗೂ ಸರಕಾರವು ಈ ಹೊಣೆಯನ್ನು ಅರಿಯಲಿಲ್ಲ. ಆದರಿಂದ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ ಸಮಸ್ಯೆಯು ತೀವ್ರ ಬಗೆಹರಿಯುವದಿಲ್ಲವೆಂದು ಗಾಂಧೀಜಿಯವರಿಗೆ ಮನವರಿಕೆಯಾಯಿತು.

"ನನ್ನ ಯೋಜನೆಯು ಹೊಸದೆಂದು ನಾನು ಒಪ್ಪುತ್ತೇನೆ. ಹೊಸತನವು ಅಪರಾಧವಲ್ಲ. ಹೆಚ್ಚು ಅನುಭವವೂ ಅದರ ಹಿನ್ನೆಲೆಯಾಗಿಲ್ಲವೆಂದು ನಾನು ಒಪ್ಪುತ್ತೇನೆ. ಆದರೆ ಶ್ರದ್ಧೆಯಿಂದ ಈ ಯೋಜನೆಯನ್ನು ಕಾರ್ಯರಂಗಕ್ಕಿಳಿಸಿದಲ್ಲಿ, ಯಶಸ್ಸು ದೊರೆಯುವದೆಂದು ನನ್ನ ಸಂಗಡಿಗರ ಹಾಗು ನನ್ನ ಅನುಭವ ನನಗೆ ಧೈರ್ಯಕೊಡುತ್ತಿದೆ. ಪ್ರಯೋಗವು ಅಯಶಸ್ವಿಯಾದರೂ, ಅದನ್ನು ಪ್ರಯತ್ನ ಮಾಡಿ ನೋಡಿದರೆ, ರಾಷ್ಟ್ರಕ್ಕೆ ಏನೂ ಹಾನಿಯಿಲ್ಲ; ಮತ್ತು ಪ್ರಯೋಗವು ಸ್ವಲ್ಪ ಮಟ್ಟಿಗಾದರೂ ಯಶಸ್ವಿಯಾದರೆ, ಲಾಭವು ಬಹುಮಟ್ಟಿಗೆ ಆಗುವದು. ಇನ್ನಾವ ಮಾರ್ಗದಿಂದಲೂ ಪ್ರಾಥಮಿಕ ಶಿಕ್ಷಣವನ್ನು ಪುಕ್ಕಟೆಯಾಗಿಯೂ, ಕಡ್ಡಾಯವಾಗಿಯೂ, ಪರಿಣಾಮಕಾರಿಯಾಗಿಯೂ ಕೊಡಲಿಕ್ಕಾಗುವದಿಲ್ಲ."

ಹರಿಜನ, ೧೪-೯-೩೭ **ಗಾಂಧೀಜಿ.**

ವರ್ಧಾ-ಶಿಕ್ಷಣ ಸಮ್ಮೇಲನದಲ್ಲಿ ಈ ಪ್ರಶ್ನೆಯನ್ನು ಚರ್ಚಿಸಲಾಯಿತು. ಕೆಲವು ಶಿಕ್ಷಣತಜ್ಞರು ಈ ಅಭಿಪ್ರಾಯವನ್ನು ಒಪ್ಪಲಿಲ್ಲ. ಅವರಲ್ಲಿ ಡಾ. ಝಾಕೀರಹುಶೇನ ಮತ್ತು ಪ್ರೊ. ಕೆ. ಟಿ. ಶಹಾ ಇವರು ಪ್ರಮುಖರು.

**ಡಾ. ಝಾಕೀರಹುಶೇನರ ಅಭಿಪ್ರಾಯ:**

"ಸ್ವಾವಲಂಬಿ ಶಿಕ್ಷಣದ ಬಗೆಗೆ ನಾನು ಕೆಲವು ಮಾತುಗಳನ್ನು ಹೇಳುತ್ತೇನೆ. ಈ ಪ್ರಯೋಗವನ್ನು ಮಾಡಿದಲ್ಲೆಲ್ಲ ಶಿಕ್ಷಣವನ್ನು ಸ್ವಾವಲಂಬಿಯಾಗಿ ಮಾಡುವದು ಸಾಧ್ಯವಾಗಿಲ್ಲ. ಅಮೇರಿಕೆಯಲ್ಲಿ ಪ್ರೊ. ಡ್ಯೂಯಿ ಅವರು ಇಂಥ ಯೋಜನೆಯನ್ನು ಮಾಡಿದ್ದರು. ಅದು ಒಳ್ಳೇ ಉತ್ಸಾಹದಿಂದ ಸ್ವೀಕಾರ ಮಾಡಲ್ಪಟ್ಟಿತು. ಆದರೆ ಕೆಲ ವರುಷಗಳ ನಂತರ ಅವರು ಆ ಶಾಲೆಯನ್ನು ಬಂದು ಮಾಡಬೇಕಾಯಿತು. ಅಮೇರಿಕಾ ದೇಶದಲ್ಲಿ ಹಣದ ಕೊರತೆಯಿಲ್ಲ. ಸರಕಾರದ ಸಹಾಯಕ್ಕೂ ತಡೆಯಿಲ್ಲ. ಅಂಥಲ್ಲಿ ಈ ಪ್ರಯೋಗವು ಯಶಸ್ವಿಯಾಗದಿದ್ದರೆ, ನಮ್ಮಂಥ ಬಡದೇಶದಲ್ಲಿ ಅದು ಯಶಸ್ವಿಯಾಗುವ ಭರವಸೆ ಎಲ್ಲಿದೆ ?........

"ಪ್ರಚಲಿತ ಶಿಕ್ಷಣದ ಅತ್ಯಂತ ದೋಷವೆಂದರೆ ಪರೀಕ್ಷೆಗಳು. ಸಧ್ಯಕ್ಕೆ ಶಿಕ್ಷಕರ ಉತ್ಸಾಹವೆಲ್ಲ ಪರೀಕ್ಷೆಗಳ ಮೇಲೆಯೇ ನಿಲ್ಲಿಸಲಾಗಿದೆ. ಆದರೆ ಈಗ ಶಿಕ್ಷಣದ ಸ್ವಾವಲಂಬನ ವೃಷ್ಟಿಗೇ ವಿಶೇಷ ಗಮನ ಕೊಡುವ ಭಯವಿದೆ. ಶಿಕ್ಷಕರು ಬಡಮಕ್ಕಳ ಶ್ರಮವನ್ನು ಸುಲಿಗೆ ಮಾಡಬಹುದು, ಗುಲಾಮಗಿರಿಯು ಶಾಲೆಯಲ್ಲಿ ಸೇರಬಹುದು, ಹೀಗೆ ಸಂಭವಿಸಿದಲ್ಲಿ ಪುಸ್ತಕಗಳಿಗಿಂತ ತಕಲಿಯು ಕೀಳೆಂದು ಸಿದ್ಧವಾಗುವದು.

"ಒತ್ತಾಯದ ಸಾರ್ವತ್ರಿಕ ಶಿಕ್ಷಣವನ್ನು ಪಸರಿಸಲು ಸರಕಾರಕ್ಕೆ ಸಾಕಷ್ಟು ಹಣವಿಲ್ಲೆಂದು ನನಗೆ ಗೊತ್ತಿದೆ. ಸರಕಾರವು ಹಾಗೆ ಮಾಡಲು ಪ್ರಯತ್ನಿಸಿದರೆ, ಅದು ತೀವ್ರವೇ ದಿವಾಳಿ ತೆಗೆಯಬಹುದು. ಆದರೆ ಈ ದಿವಾಳಿಯು ರಾಷ್ಟ್ರೀಯ ಚೈತನ್ಯಗಳ ದಿವಾಳಿಗಿಂತ ಒಳಿತು. ಈ ಯೋಜನೆಯ ಹೊಣೆಯನ್ನು ಹೊರುವಾಗ ಇದರ ಮರೆಯಲ್ಲಿದ್ದ ಭಯವನ್ನು ಮರೆಯಕೂಡದು."

**ಗಾಂಧೀಜಿಯವರ ಉತ್ತರ:**

ಪ್ರೊ. ಡ್ಯೂಯಿ ಅವರ ಯೋಜನೆಯು ಅಮೇರಿಕೆಯಲ್ಲಿ ಅಯಶಸ್ವಿಯಾಯಿತೆಂದು ಡಾ. ಝಕೀರ ಹುಸೇನರು ಹೇಳಿದರು. ಆ ಯೋಜನೆಯು ಬಹಳ ವೆಚ್ಚದ್ದಾದ್ದರಿಂದ ಅಯಶಸ್ವಿಯಾಯಿತೆಂದು ಅಲ್ಲ; ಆದರೆ ಅವರು ಬಹು ಪ್ರಮಾಣದಲ್ಲಿ ಅದನ್ನು ಪ್ರಯೋಗ ಮಾಡಲಿಲ್ಲ, ಎಂದು ನಾನು ತಿಳಿಯುತ್ತೇನೆ. ನಿಶ್ಚಯವಾಗಿ ನನ್ನ ಯೋಜನೆಯು ಬೇರೆಯಿದೆ. ಅದು ಗ್ರಾಮನಿಷ್ಠವಾದುದು. ನನ್ನ ಯೋಜನೆಯು ಶಾಲೆಗಳಲ್ಲಿ ಗುಲಾಮಗಿರಿಯನ್ನು ತರುವದೆಂದು ಅನ್ನಲಾಗಿದೆ. ಆದರೆ ಒಳ್ಳೆ ಸಂಗತಿಗಳಿಗೆಲ್ಲ ಹೀಗೆಯೇ ಹೇಳಬಹುದು; ಕೆಟ್ಟ ಕೈಗಳಲ್ಲಿ ಒಳ್ಳೇ ಸಂಗತಿಗಳು ಸಹ ಕೆಡುತ್ತವೆ. ಅದರಿಂದ ನನ್ನ ಯೋಜನೆಯಲ್ಲಿ ನಂಬಿಗೆ ಅಥವಾ ಆತ್ಮವಿಶ್ವಾಸವಿಲ್ಲದವರು ಅದನ್ನು ನಡೆಯಿಸಬೇಕೆಂದು ನಾನು ಇಚ್ಛಿಸುವದಿಲ್ಲ........ನಾವೆಲ್ಲರೂ ದಿನಾಲು ಎಂಟು ತಾಸುಗಳ ವರೆಗೆ ಕೆಲಸ ಮಾಡಬೇಕು. ಕೆಲಸ ಮಾಡುವದರಿಂದ ಯಾರೂ ಗುಲಾಮರಾಗುವದಿಲ್ಲ. ಮನೆಯಲ್ಲಿ ನಮ್ಮ ತಂದೆ–ತಾಯಂದಿರ ಸೂಚನೆಗಳಂತೆ ವರ್ತಿಸುವಾಗ, ನಾವು ಅವರ ಗುಲಾಮರಾಗುವದಿಲ್ಲ. ಅದರಂತೆ ನಮ್ಮ ಮುಂಬರುವ ಶಾಲೆಗಳಗಳಲ್ಲಿ ಗುಲಾಮಗಿರಿಯ ಪ್ರಶ್ನೆಯೇ ಉದ್ಭವಿಸುವದಿಲ್ಲ."

ಡಾ. ಝಕೀರ ಹುಸೇನರ ಆಕ್ಷೇಪಣೆಗಳಿಗೆ ಗಾಂಧೀಜಿಯವರು ತಾತ್ತ್ವಿಕ ರೀತಿಯಿಂದ ಉತ್ತರಿಸಿದ್ದಾರೆ. ಪ್ರೊ. ಡ್ಯೂಯಿ ಅವರ ಯೋಜನೆಯು ನಗರ ನಿಷ್ಠವಾದುದು.; ಗಾಂಧೀಜಿಯವರ ಯೋಜನೆಯು ಗ್ರಾಮನಿಷ್ಠವಾದುದು. ಎರಡನೆಯದಾಗಿ, ಶಾಲೆಯ ಗುರುಗಳು ಮಕ್ಕಳ ಪಾಲಕರು, ಅವರ ಬೆಳವಣಿಗೆಯ ನಿರ್ದೇಶಕರು, ಅವರ ಹಿತೈಷಿಗಳು; ಅಲ್ಲದೆ ಶಾಲೆಯು ಮಕ್ಕಳದು. ಆದರಿಂದ ಶಾಲೆಯಲ್ಲಿ ಮಕ್ಕಳು ಹೆಚ್ಚು ಕೆಲಸಮಾಡಿದರೆ, ಅದರ ಮುಖಾಂತರ ಹೆಚ್ಚು ಅನುಭವ ಗಳಿಸಿದರೆ ಅದು ವಿದ್ಯಾಭ್ಯಾಸವೇ ಹೊರತು ಗುಲಾಮಗಿರಿಯಲ್ಲ. ಗುಲಾಮಗಿರಿಯು ಪ್ರವೇಶವಾದಲ್ಲಿ ಆರ್ಥಿಕ ದೃಷ್ಟಿಯು ಇರುತ್ತದೆ; ಶೈಕ್ಷಣಿಕ ದೃಷ್ಟಿಯು ಅಲ್ಲಿ ಇರುವದೇ ಇಲ್ಲ. ಇಲ್ಲಿ ಉದ್ಯೋಗಗಳು ಶಿಕ್ಷಣದ ಸಾಧನಗಳಾಗಿ ಸೇರಿವೆ. ಈ ಸಂಗತಿಯನ್ನು ಮರೆಯಕೂಡದು.

**ಪ್ರೊ. ಕೆ. ಟಿ. ಶಹಾ ಅವರ ಮತ.**

"ಮಕ್ಕಳಿಂದ ವಿಶೇಷ ಕೆಲಸ ತಕ್ಕೊಳ್ಳಲಾಗುವದು. ಸ್ವಾವಲಂಬಿ ಶಿಕ್ಷಣ ತತ್ತ್ವವು ಅನಪೇಕ್ಷಿತವಾದುದು. ಒತ್ತಾಯದ ಸಾರ್ವತ್ರಿಕ ಶಿಕ್ಷಣ ವನ್ನು ಕೊಡುವದು ಸರಕಾರದ ಮುಖ್ಯ ಕರ್ತವ್ಯ. ಶಿಕ್ಷಣಕ್ಕಾಗಿ ವೆಚ್ಚ ಮಾಡಿದ ಹಣವು ಉತ್ತಮ ನಾಗರಿಕರನ್ನು ತಯಾರು ಮಾಡಲು ಹಾಕಿದ ರಾಷ್ಟ್ರೀಯ ಧನವು. ಸ್ವಾವಲಂಬಿ ತತ್ತ್ವವು ಮಕ್ಕಳಲ್ಲಿ ವಿನಿಮಯ ಉದ್ದಿಶ್ಯವನ್ನು ಹುಟ್ಟಿಸುವದು. ಅಲ್ಲದೆ ಹಳ್ಳಿಯ ಧಂದೆಗಾರರ ಹಾಗು ಶಾಲಾಮಕ್ಕಳ ಸಾಮಾನುಗಳ ಮಾರಾಟದಲ್ಲಿ ಸ್ಪರ್ಧೆ ಬೆಳೆಯುವ ಸಂದೇಹ ವಿದೆ. ಕೈಗಾರಿಕೆಗೆ ಮಹತ್ವ ಕೊಡುವದು ಒಳ್ಳೆಯದು. ಆದರೆ ನಾವು ಯಾಂತ್ರಿಕ ಯುಗದಲ್ಲಿ ಇದ್ದೇವೆಂಬುದನ್ನು ನೆನಪಿಡಬೇಕು. ಕೈ ಕೆಲಸ ಗಳಿಗೆ ವಿಶೇಷ ಲಕ್ಷ ಹಾಕಿದರೆ, ಯಂತ್ರಗಳನ್ನು ದೂರಿಟ್ಟರೆ, ದೇಶದ ಆರ್ಥಿಕ ಉನ್ನತಿಗೆ ಹಾನಿಕರವಾಗುವದು."

**ಗಾಂಧೀಜಿಯವರ ಉತ್ತರ:**

"ಹಳ್ಳಿಯ ಕೈಕೆಲಸಗಾರರು ಹಾಗು ಶಾಲೆಯ ಮಕ್ಕಳು ಇವರ ನಡುವೆ ಅನ್ಯಾಯದ ಸ್ಪರ್ಧೆಯನ್ನು ಈ ಯೋಜನೆಯು ಹುಟ್ಟಿಸುವದೆಂದು ಪ್ರೊ. ಶಹಾ ಅವರು ತಿಳಿಯುತ್ತಾರೆ........ನನ್ನ ಮನಸ್ಸಿನಲ್ಲಿ ಈ ಭಯಕ್ಕೆ ಏನೂ ಕಾರಣ ತೋರುವದಿಲ್ಲ. ಸ್ಪರ್ಧೆಯುಂಟಾದರೆ, ಮೊದಲು ಗಿರಣಿ ಯವರೊಡನೆ, ನಂತರ ಚರಖಾ ಸಂಘದವರೊಡನೆ ಹುಟ್ಟುವದು. ಆದರೆ ಗಿರಣಿಯವರಾಗಲಿ, ಚರಖಾ ಸಂಘದವರಾಗಲಿ ಇಂಥ ಸ್ಪರ್ಧೆಗೆ ಅಂಜುವ ದಿಲ್ಲೆಂದು ನನಗೆ ಖಾತ್ರಿಯಿದೆ. ನನ್ನ ಯೋಜನೆಯು ಹಳ್ಳಿಗಳಿಗೇ ಅದೆ ಎಂಬುದನ್ನು ನೀವು ಮರೆಯುವಿರಿ. ಮಂತ್ರಿಗಳು ದೇಶದಲ್ಲಿ ಯೋಗ್ಯ ವಾತಾವರಣವನ್ನುಂಟು ಮಾಡಿದಾಗ, ಜನರು ಶಾಲೆಯ ಸಾಮಾನುಗಳನ್ನು ಹೆಚ್ಚು ಬೆಲೆ ಕೊಟ್ಟಾದರೂ ಕೊಳ್ಳಲು ಅಪೇಕ್ಷಿಸುವರು. ಈ ರೀತಿ ಶಾಲೆಯ ಉತ್ಪತ್ತಿಗಳನ್ನು ಮಾರಲು ಏನೂ ತೊಂದರೆಯಿಲ್ಲ. ಅವಶ್ಯವಿದ್ದ ಖರೆಯನ್ನು ಸರಕಾರವು ಶಾಲೆಗಳಿಂದ ಹೆಚ್ಚು ಬೆಲೆ ಕೊಟ್ಟಾದರೂ ಕೊಳ್ಳ ಬೇಕೆಂದು ನಾನು ತಿಳಿಯುತ್ತೇನೆ.. ಉದಾ:— ಯರೋಡಾ ಜೇಲಿನ ಮುದ್ರಣಾಲಯದ ದರಗಳು, ಸ್ಥಳಿಕ ಮುದ್ರಣಾಲಯಗಳ ದರಗಳಿಗಿಂತ

ಹೆಚ್ಚಿದ್ದರೂ, ಸರಕಾರವು ತನ್ನ ಮುದ್ರಿಸುವ ಕೆಲಸವನ್ನೆಲ್ಲ ಅಲ್ಲಿಯೇ ಮಾಡಿಸುವದು. ಸ್ಪರ್ಧೆಯ ಪ್ರಶ್ನೆಯು ಉದ್ಭವಿಸುವದೇ ಇಲ್ಲ. ಇದ ರಂತೆಯೇ ನಮ್ಮ ಕೆಲಸವನ್ನು ಮಾಡಬೇಕಾಗುವದು.

"ಯಂತ್ರಗಳ ಪ್ರಶ್ನೆಯನ್ನು ತಕ್ಕೊಳ್ಳುವಾ. ಯಂತ್ರಗಳನ್ನು ನಾವು ಬಿಟ್ಟೇಬಿಡಬೇಕೆಂದು ನನ್ನ ಇಚ್ಛೆಯಿದೆ. ನಾವು ಖಾದಿ ವಸ್ತ್ರವನ್ನು ಉಪ ಯೋಗಿಸಬೇಕು. ಆದ್ದರಿಂದ ನಮಗೆ ಅರಿವೆಯ ಗಿರಣಿಗಳು ಬೇಕಾಗುವ ದಿಲ್ಲ. ಅವಶ್ಯವಿದ್ದ ವಸ್ತುವನ್ನೆಲ್ಲ ಹಳ್ಳಿಗಳಲ್ಲಿಯೇ ತಯಾರಿಸಲಿಕ್ಕೆ ನಾವು ಪ್ರಯತ್ನಿಸಬೇಕು. ಮತ್ತು ಯಂತ್ರಗಳ ಗುಲಾಮರಾಗುವದು ಅವಶ್ಯ ವಿಲ್ಲ. ನಾವು ಯಂತ್ರಗಳ ಜೊತೆಗೆ ಕೆಲಸ ಮಾಡುವದರಿಂದ ನಾವೇ ಯಂತ್ರಗಳಾಗಿದ್ದೇವೆ; ಮತ್ತು ಕಲಾ ಹಾಗು ಕೈಕೆಲಸಗಳ ಪ್ರೇಮವನ್ನು ಕಳೆದುಕೊಂಡಿದ್ದೇವೆಂದು ನಾನು ಅಂಜಿದ್ದೇನೆ. ಯಂತ್ರಗಳನ್ನು ಬಿಟ್ಟು ಬಿಡುವದು ಸಾಧ್ಯವಿಲ್ಲವೆಂದು ಇನ್ನೂ ನೀವು ವಿಚಾರಿಸಿದರೆ, ನಿಮ್ಮೆ ದುರು ಇಟ್ಟ ಯೋಜನೆಯು ವ್ಯರ್ಥವಾಗುವದು. ಯಂತ್ರಗಳ ಮುಖಾಂತರ ಹಳ್ಳಿಗಳನ್ನು ಜೀವಂತ ಇಡಲು, ಅವುಗಳ ಮಾರ್ಗವಾಗಿ ಹಳ್ಳಿಯ ಮಕ್ಕಳಿಗೆ ಶಿಕ್ಷಣ ಕೊಡಲು ಅಪೇಕ್ಷಿಸುತ್ತೀರಿ. ನಮ್ಮ ದೇಶದಲ್ಲಿ ಇದು ಶಕ್ಯವೇ ಇಲ್ಲವೆಂದು ನನಗೆ ಆತ್ಮ ವಿಶ್ವಾಸವಿದೆ. ೩೫ಕೋಟಿ ಜನರನ್ನು ನಿರುದ್ಯೋಗಿಗಳನ್ನಾಗಿ ಮಾಡಲು ಮಾತ್ರ ಯಂತ್ರಗಳು ಸಹಾಯ ಮಾಡು ವವು.

ಅನ್ನ ಹಾಗು ಬಟ್ಟೆ ಇವು ಜೀವನದ ಮೂಲಭೂತ ಬೇಡಿಕೆಗಳು. ಇವುಗಳಲ್ಲಿ ಭಾರತವು ಪರಾವಲಂಬಿಯಾಗಬಾರದೆಂದೂ, ಈ ಉದ್ಯೋಗ ಗಳಲ್ಲಿ ಯಂತ್ರಗಳನ್ನು ಉಪಯೋಗಿಸಿ, ಉತ್ಪತ್ತಿಯನ್ನು ಕೇಂದ್ರೀಕರಿಸಿದರೆ ಹಳ್ಳಿಗಳು ಹಾಳಾಗುವವೆಂದೂ ಗಾಂಧೀಜಿಯವರ ಸ್ಪಷ್ಟ ಅಭಿಪ್ರಾಯ ವಿತ್ತು. ಉಳಿದ ವಸ್ತುಗಳನ್ನು ತಯಾರಿಸುವಲ್ಲಿ ಯಂತ್ರಗಳನ್ನು ಉಪ ಯೋಗಿಸಬಹುದೆಂದು ಅವರು ಹೇಳಿದ್ದಾರೆ. ಈ ಸಂಗತಿಯನ್ನು ತಿಳಿಯದೆ ಅವರು ಯಂತ್ರಗಳ ವಿರೋಧಿಗಳಾಗಿದ್ದಾರೆಂದೂ ಭಾರತವು ಮಧ್ಯಮಯು ಗದ ವಿಚಾರಗಳಿಗೆ ಹೊರಳುವದೆಂದೂ ಹೇಳುವದು ತೀರ ತಪ್ಪು. ಭಾರತದ ಆರ್ಥಿಕ ಪುನರ್ರಚನೆಯಲ್ಲಿ ಗ್ರಾಮೋದ್ಯೋಗಗಳಿಗೆ ಮಹತ್ವದ ಸ್ಥಾನವಿದೆ.

ಎಂದು ಮರೆಯಕೂಡದು. ಇದನ್ನರಿತು ತಮ್ಮ ವಿಧಾಯಕ ಕಾರ್ಯಕ್ರಮಗ ಳಲ್ಲಿ ಹಳ್ಳಿಯ ಉದ್ಯಮಗಳಿಗೆ ಗಾಂಧೀಜಿಯವರು ಅಗ್ರಸ್ಥಾನ ಕೊಟ್ಟಿದ್ದಾರೆ. ಶಿಕ್ಷಣವು ಅವರ ವಿಧಾಯಕ ಕ್ರಮಗಳ ಮಾಲೆಯಲ್ಲಿ ಕೊನೆಯ ಕುಸುಮವು. ಕೊನೆಯದಾದರೂ ಮಹತ್ವದ ದೃಷ್ಟಿಯಿಂದ ಕಡಿಮೆಯದಲ್ಲ. ಶಿಕ್ಷಣದ ಮುಖಾಂತರವೇ ಹಳ್ಳಿಯ ಸಮಗ್ರ ಜೀವನದಲ್ಲಿ ಹೊಸ ಜೀವ ಕಳೆ ತುಂಬ ಬೇಕೆಂಬುದು ಅವರ ಮನೀಷೆಯಾಗಿತ್ತು.

**ಆಚಾರ್ಯ ವಿನೋಬಾ ಅವರ ಮತ:**

ಪ್ರಾಥಮಿಕ ಶಿಕ್ಷಣವು ಪುಕ್ಕಟೆ ಮತ್ತು ಸ್ವಾವಲಂಬಿ ಆಗಬೇಕೆಂಬ ಸೂಚನೆಯನ್ನು ಓದಿದಾಕ್ಷಣವೇ ಅದು ಸ್ವಯಂ ಸಿದ್ಧವಾದುದೆಂದು ನನಗೆ ಅನಿಸಿತು. ಅದು ಹೊಸತು ಇರಲಿಕ್ಕಿಲ್ಲ; ಆದರೆ ಹೊಸ ಬೆಳಕಿನಲ್ಲಿ ಅದನ್ನು ನಿವೇದಿಸಲಾಗಿದೆ. ಮನುಷ್ಯನು ದೈಹಿಕ ಶ್ರಮವನ್ನು ಬಿಟ್ಟಿದ್ದರಿಂದಲೇ ಜಗ ತ್ತಿನಲ್ಲಿ ರೋಗಗಳೆಲ್ಲ ಬೆಳೆದಿವೆ ಎಂದು ನನಗೆ ಖಾತ್ರಿಯಾಗಿದೆ. ಗಾಂಧೀಜಿ ಯವರ ಕ್ರಾಂತಿಕಾರಕ ಸೂಚನೆಯು ಒಂದೇ ಹೊಡೆತದಿಂದ ಆ ರೋಗ ಗಳನ್ನು ದೂರಿಡಬಹುದು............ಪಾಶ್ಚಾತ್ಯರು ಪಾಠ್ಯಕ್ರಮದಲ್ಲಿ ದೈಹಿಕ ತರಬೇತಿಯನ್ನು ಸೇರಿಸಿದ್ದಾರೆ; ಆದರೆ ಅವರಿಗೆ ಕೈಕುಸುರೆಂದರೆ ಸುಲಿ ಗೆಯಿಂದ ಜನರನ್ನು ವಿಮುಕ್ತ ಮಾಡುವ ಮಾರ್ಗವೆಂದು ಅವರಿಗೆ ಅರ್ಥವಾಗುವದಿಲ್ಲ. ನಾನು ಹಳ್ಳಿಗಳಿಗೆ ಹೋದನಂತರ ಸ್ವಾವಲಂಬಿ ಶಿಕ್ಷಣವೆಂದರೇನೆಂಬುದು ನನಗೆ ತಿಳಿಯಿತು........ಮಕ್ಕಳ ಹೊತ್ತಿಗೆಗಳು, ಅವರ ಅಂಗವಿನ್ಯಾಸ, ನಡೆಯುವ ಹಾಗು ಮಾಡುವ ರೀತಿ ಇತ್ಯಾ ದಿಗಳೆಲ್ಲ ಪರಿವರ್ತನ ಹೊಂದಬೇಕಾಗಿದೆ. ಶಾಲೆಯ ಶಿಕ್ಷಕರು ದಾಸ ಮೊಡೆಯರು ( Slave Drivers ) ಆಗುವರೆಂದು ಹೇಳುವದು ಅಸಂಬದ್ಧವಾದುದು.

**ಕಾಕಾ ಕಾಲೇಲಕರ ಅವರ ಮತ:**

" ಶಿಕ್ಷಣವನ್ನು ಸ್ವಾಲಂಬಿಯಾಗಿ ಮಾಡುವಾಗ ಮಕ್ಕಳ ಶ್ರಮದ ಸುಲಿಗೆ ಮಾಡಬಹುದೆಂದು ಭಯಪಡಲಾಗಿದೆ. ನನಗೆ ಅಂಥ ಅಂಜಿಕೆಗಳಿಲ್ಲ; ಯಾಕೆಂದರೆ ಶಿಕ್ಷಕರು ಸ್ವತಃ ಕೆಲಸ ಮಾಡಿದ ಹೊರತು ಮಕ್ಕಳನ್ನು

ಕೆಲಸ ಮಾಡಹಚ್ಚಲಾರರೆಂದು ನನಗೆ ಗೊತ್ತಿದೆ, ಇದಲ್ಲದೆ ಕೆಲಸದ ವಿವರಣಾ ಪಟಗಳನ್ನು ಶಾಲೆಗಳಲ್ಲಿ ಇಡಲಾಗುವದು. ಮತ್ತು ಮೇಳ್ವಿಚಾರಕರು ಜಾಗರೂಕತೆ ವಹಿಸುವರು. ಬೌದ್ಧಿಕ ಹಾಗು ದೈಹಿಕ ವಾಸ್ತವ್ಯಗಳಲ್ಲಿ ಆರಿಸುವುದಾದರೆ, ನಾನು ಎರಡನೆಯದನ್ನು ಆರಿಸುವೆ.''

**ಸ್ವಾವಲಂಬಿ ಶಿಕ್ಷಣವೆಂದರೇನು?**

ಸ್ವಾವಲಂಬಿ ಶಿಕ್ಷಣದ ಬಗೆಗೆ ತಜ್ಞರ ಅಭಿಪ್ರಾಯಗಳನ್ನು ತಿಳಿದುಕೊಂಡಂತಾಯಿತು. ಏನು ಮಾಡಿದರೆ ಶಿಕ್ಷಣವು ಸ್ವಾವಲಂಬಿಯಾಗುವದು? ಶಿಕ್ಷಣದ ವೆಚ್ಚವು ಬಹುವಾಗಿದೆ. ಶಾಲೆಯ ಕಟ್ಟಡ, ಹೊಲ, ಉಪಕರಣಗಳು, ಶಿಕ್ಷಕರ ಪಗಾರ ಇತ್ಯಾದಿಗಳೆಲ್ಲ ಮಕ್ಕಳ ಉತ್ಪನ್ನದಿಂದ ದೊರೆಯಬಹುದೇ? ಎಂದು ಕೆಲವರು ಕೇಳುವರು. ಇದು ತೀರ ತಪ್ಪು. ಇದು ಸಾಧ್ಯವೂ ಇಲ್ಲ. ಗಾಂಧೀಜಿಯವರ ಅಭಿಪ್ರಾಯವೂ ಹಾಗಿಲ್ಲ. ಶಿಕ್ಷಕರ ವೇತನವು ಹೊರಡಬಹುದೇ ಎಂಬುದು ಅವರ ಪ್ರಶ್ನೆಯಾಗಿತ್ತು.

**ಝುಕೀರ ಸಮಿತಿಯವರ ಮತ:**

" ಶಾಲೆಯ ವೆಚ್ಚವನ್ನೆಲ್ಲ ಮಕ್ಕಳು ಕೊಡಲಾರರು. ಆದರೆ ಶಿಕ್ಷಕರ ಪಗಾರದ ಬಹು ಭಾಗವನ್ನು ಅವರು ನಿಶ್ಚಯವಾಗಿ ಉತ್ಪಾದಿಸಬಲ್ಲರು.

**೭ ವರುಷಗಳಲ್ಲಿಯ ಒಟ್ಟು ಉತ್ಪನ್ನ.**

| | ರೂ. ಆ. ಪೈ |
|---|---|
| ನೂಲುವದು | ೪೧—೧೩—೯ |
| ನೇಯುವದು | ೧೮—೧೫—೯ |
| ಒಟ್ಟು | ೬೦—೧೩—೬ |

ಶಿಕ್ಷಕನ ಪಗಾರವನ್ನು ತಿಂಗಳಿಗೆ ೨೫ ರೂಪಾಯಿಗಳಂತೆ ಲೆಕ್ಕ ಮಾಡಲಾಗಿದೆ. ಏಳು ವರುಷಗಳಲ್ಲಿ ಒಬ್ಬ ಶಿಕ್ಷಕನ ಒಟ್ಟು ವೇತನವು ೨೧೦೦ ರೂ. ೦ ಆ. ೦ ಪೈ. ಒಬ್ಬ ಶಿಕ್ಷಕನಿಗೆ ೩೦ ವಿದ್ಯಾರ್ಥಿಗಳಂತೆ ೭ ವರುಷಗಳಲ್ಲಿಯ ಒಟ್ಟು ಉತ್ಪನ್ನವು ೧೮೨೫ ರೂ. ೦ ಆ, ೦ ಪೈ."

ಈ ರೀತಿ ಲೆಕ್ಕ ಮಾಡಿ, ಶಿಕ್ಷಕರ ಪಗಾರದ ಬಹುಭಾಗವನ್ನು ಮಕ್ಕಳ ಕೆಲಸದಿಂದ ಹೊರಡಿಸಬಹುದೆಂದು ಸಮಿತಿಯವರು ತಿಳಿಸಿದ್ದಾರೆ. ಆದರೆ ಶಿಕ್ಷಕರ ಪಗಾರ ತಿಂಗಳಿಗೆ ರೂ. ೨೫—೦—೦ ರಂತೆ ಸತತ ಉಳಿಯುವ

ದಿಲ್ಲ; ಅಲ್ಲದೆ ಅವರಿಗೆ ಈಗ ತುಟ್ಟಿಭತ್ತೆ ದೊರೆಯುವದು. ಅವರು ಹೆಚ್ಚು ಪ್ರಶಸ್ತಿ ಹಾಗು ಅನುಭವ ಪಡೆದಂತೆ ಅವರ ವೇತನ ಹೆಚ್ಚುವದು. ಈ ಸಂಗತಿಗಳನ್ನು ಗಮನಿಸಿದರೆ, ಶಿಕ್ಷಕರ ಪಗಾರಕ್ಕೂ ಮಕ್ಕಳ ಉತ್ಪನ್ನಕ್ಕೂ ತಳಕು ಹಾಕುವದು ಒಳಿತಲ್ಲ. ಒಂದುವೇಳೆ ಹಾಗೆ ಮಾಡಲು ಯತ್ನಿಸಿದಲ್ಲಿ, ಮಕ್ಕಳು ಕೆಲಸಕ್ಕಾಗಿ ಕೆಲಸ ಮಾಡಬೇಕಾಗುವದು. ಮತ್ತು ಕೆಲಸವು ಶಿಕ್ಷಣದ ಸಾಧನ ಎಂಬ ಮಾತು ದೂರವೇ ಉಳಿಯುವದು. ಇದನ್ನರಿತೇ ಡಾ. ಝುಕೀರ ಹುಸೇನರು ತಮ್ಮ ಖಂಡತುಂಡ ಅಭಿಪ್ರಾಯವನ್ನು ಕೊಟ್ಟಿದ್ದಾರೆ.

**ಇತರ ವೆಚ್ಚಗಳು:**

ಉದ್ಯೋಗಗಳನ್ನು ಶಾಲೆಯಲ್ಲಿ ಸುರುವು ಮಾಡುವದರಿಂದ ಅನೇಕ ಉಪಕರಣಗಳು ಬೇಕಾಗುವವು. ನೂಲುವ ನೇಯುವ ಉದ್ಯೋಗಗಳನ್ನು ಸುರುವು ಮಾಡಿದ ಸಾಲೆಗಳಲ್ಲಿ ಪ್ರತಿಯೊಬ್ಬ ವಿಧ್ಯಾರ್ಥಿಗೆ ರೂ. ೧೫ರಂತೆ ಸರಾಸರಿ ವೆಚ್ಚ ಹಿಡಿದು ಸಾಮಾನುಗಳನ್ನು ಪೂರೈಸಬೇಕಾಗುವದು. ಅಲ್ಲದೆ ಪ್ರತಿಯೊಬ್ಬ ವಿದ್ಯಾರ್ಥಿಗೆ ಕಚ್ಚಾಮಾಲು ಪೂರೈಸುವದಕ್ಕಾಗಿ ೨ ರೂ. ಇಲ್ಲವೆ ೩ ರೂ. ಬೇಕಾಗುವದು. ಈ ವೆಚ್ಚವಾದರೂ ಮಕ್ಕಳ ಉತ್ಪನ್ನದಿಂದ ಹೊರಟರೆ ಸಾಕು ಎಂದು ಕೆಲವರ ಮತವಿದೆ. ಈ ವೆಚ್ಚವನ್ನು ತೆಗೆಯುವದು ಸಾಧ್ಯವಿದೆ. ಇನ್ನೂ ಸ್ವಲ್ಪ ಉಳಿತಾಯವಾಗಬಹುದು. ಆ ಹಣದ ಕೆಲವೊಂದು ಪಾಲನ್ನು ಮಕ್ಕಳಿಗಾಗಿ ಉಪಯೋಗಿಸಬಹುದು. ಅವರು ತೆಗೆದ ನೂಲು ಹಾಗು ನೆಯ್ದ ಬಟ್ಟೆ ಇವುಗಳಲ್ಲಿ ಕೆಲವೊಂದು ಭಾಗವನ್ನು ಅವರಿಗೇ ಕೊಡಬಹುದು. ಈಗಿನ ರೇಶನ್ ಕಾಳುಗಳಲ್ಲಿ ಸತ್ವ ಕಡಿಮೆ. ಅದರಿಂದ ಶಾಲೆಯ ಮಕ್ಕಳಿಗೆ ದಿನಾಲು (Vitamin Tablets) ಜೀವನಸತ್ವ ಗುಳಿಗೆಗಳನ್ನು ಪೂರೈಸಬಹುದು. ಸಾಧ್ಯವಾದಲ್ಲಿ ಮಕ್ಕಳಿಗೆ ದಿನಾಲು ಮುಂಜಾನೆ ಒಂದು ಬಟ್ಟಲ ಹಾಲು ಕೊಡಬಹುದು. ಉತ್ಪನ್ನ ಹೆಚ್ಚು ದೊರೆತಲ್ಲಿ ಶಾಲೆಯ ಮಕ್ಕಳಿಗೆ ಒಂದು ಮಧ್ಯಾಹ್ನದ ಊಟ ಕೊಡಬಹುದು; ಯಾಕಂದರೆ ನಮ್ಮ ಮಕ್ಕಳಿಗೆ ಮನೆಯಲ್ಲಿ ಸಮತೋಲ ಆಹಾರ ದೊರೆಯುವದಿಲ್ಲ. ಹೀಗೆ ಯಾವುದಾದರೊಂದು ರೀತಿಯಿಂದ ಮಕ್ಕಳಿಗೆ ಅವರ ಶ್ರಮದ ಫಲವು ಮುಟ್ಟುವಂತೆ ಮಾಡಿ

ದರೆ, ಪಾಲಕರಿಗೆ ಆರ್ಥಿಕ ಸಹಾಯವೂ ಆಗುವದು; ಅವರಿಗೆ ತಮ್ಮ ಮಕ್ಕಳನ್ನು ದಿನಾಲು ಶಾಲೆಗೆ ಕಳಿಸಲಿಕ್ಕೆ ಪ್ರೋತ್ಸಾಹ ದೊರೆಯುವದು.

**ಕೊನೆಯ ಮಾತು:**

ಶಿಕ್ಷಣವು ಸ್ವಾವಲಂಬಿಯಾಗಬೇಕೆಂಬ ತತ್ವಕ್ಕೆ ಗಾಂಧೀಜಿಯವರ ಭಿನ್ನಾಭಿಪ್ರಾಯ ಹೊರಬೀಳಲಿಲ್ಲ. ಅವರಿಗೆ ಅದರಲ್ಲಿ ಶ್ರದ್ಧೆ ಕೊನೆಯ ವರೆಗೂ ಉಳಿದಿತ್ತು. ಶಿಕ್ಷಣ ತಜ್ಞರು ಮಾತ್ರ ಈ ತತ್ತ್ವವನ್ನು ಮನ್ನಿಸುತ್ತಿರಲಿಲ್ಲ. ಮೂಲ ಶಿಕ್ಷಣ ಯೋಜನೆಯಿಂದ ಮಕ್ಕಳಲ್ಲಿ ಸ್ವಾವಲಂಬನ ಪ್ರವೃತ್ತಿ ಹುಟ್ಟುವದು; ಅವರು ಉದ್ಯೋಗ ಶೀಲರಾಗುವರು; ಅವರು ತಮ್ಮ ತಂದೆ ತಾಯಿಗಳಿಗೆ ನೆರವಾಗುವರು; ಜೀವನದಲ್ಲಿ ಕಾಲಿಟ್ಟಾಗ, ನೀರಿನಿಂದ ಹೊರಗೆ ತೆಗೆದ ಮೀನುಗಳಂತೆ ಅವರಿಗೆ ಎನಿಸುವದಿಲ್ಲ. ಉದ್ಯೋಗಗಳು ಶಿಕ್ಷಣದ ಸಾಧನವೆಂದು ಶಾಲೆಗಳಲ್ಲಿ ಸೇರಿವೆಯೇ ಹೊರತು ಕೇವಲ ಉದ್ಯೋಗಗಳ ತರಬೇತಿಗಾಗಿ ಅಲ್ಲ. ಆದರಿಂದ ಶಿಕ್ಷಣವು ಸ್ವಾವಲಂಬಿಯಾಗಬೇಕೆಂಬ ತತ್ವವು ಎರಡನೆಯದಾಗಿ, ಸ್ವಾವಲಂಬನ ಪ್ರವೃತ್ತಿಯುಳ್ಳ ಒಳ್ಳೆಯ ನಾಗರಿಕರಾಗಿ ತಯಾರಾಗಬೇಕೆಂಬುದು ಮೊದಲನೆಯದಾಗಿದೆ.

---

# ೧೩. ರಾಷ್ಟ್ರೀಯ ಶಿಕ್ಷಣ

ಈ ವರೆಗಿನ ಶಿಕ್ಷಣವು ರಾಷ್ಟ್ರೀಯ ಶಿಕ್ಷಣವೇ? ಅಲ್ಲ! ಅಲ್ಲವೆಂಬ ಸೊಲ್ಲು ಎಲ್ಲೆಡೆಯಿಂದಲೂ ಕೇಳಬರುವದು. ರಾಷ್ಟ್ರೀಯ ಶಿಕ್ಷಣದ ಸ್ವರೂಪ ಯಾವುದು? ರಾಷ್ಟ್ರೀಯಶಿಕ್ಷಣದ ಧ್ಯೇಯ ಧೋರಣಗಳಾವವು? ಎಂಬ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ದೊರಕಿಸುವದು ಅಗತ್ಯವು. ದೇ. ಭ. ದಿವಾಕರ ರಂಗರಾಯರ ಶಬ್ದಗಳಲ್ಲಿ ಹೇಳುವುದಾದರೆ, "ಹಿಂದುಸ್ತಾನ ದಲ್ಲಿಯ ನಾಲ್ವತ್ತು ಕೋಟಿ ಜನರ ಪ್ರಸುಪ್ತ ಚೈತನ್ಯವನ್ನು ಚೇತರಿಸಿ ಸ್ವಾಭಿಮಾನ ಹಾಗೂ ಸ್ವಾವಲಂಬನ ಪೂರ್ವಕವಾಗಿ ಸರ್ವತೋಮುಖ ತನ್ನ ಹಾಗು ತನ್ನ ರಾಷ್ಟ್ರದ ಉದ್ಧಾರವನ್ನು ಜಾಗತಿಕ ಹಿತಕ್ಕೆ ಅವಿರೋಧಿ ಯಾಗುವಂತೆ ಕೈಕೊಳ್ಳುವ ಶಕ್ತಿಯು ಯಾವ ಶಿಕ್ಷಣದಿಂದ ಬರಬಲ್ಲದೋ ಅದೇ ರಾಷ್ಟ್ರೀಯ ಶಿಕ್ಷಣವೆನಿಸಬಲ್ಲದು. ಅದು ಈ ರಾಷ್ಟ್ರದ ಪೂರ್ವ ಸಂಸ್ಕೃತಿ ಹಾಗು ಪರಂಪರೆಯಲ್ಲಿರುವ ಉದಾತ್ತ ತತ್ವಗಳನ್ನವಲಂಬಿಸಿಯೇ ಮುಂದಡಿ ಇಡಬಲ್ಲದು. ಅದು ಸ್ವಭಾಷೆಯಲ್ಲಿಯೇ ಇರಬಲ್ಲದು." ಈ ಒರೆಗಲ್ಲಿಗೆ ತಿಕ್ಕಿ ನೋಡಿದಲ್ಲಿ ಇದುವರೆಗಿನ ಶಿಕ್ಷಣವು ಅರಾಷ್ಟ್ರೀಯವಾದುದೆಂದು ಥಟ್ಟನೆ ತೋರುವದು. ಶಿಕ್ಷಣ ಪಡೆದ ನಮ್ಮ ಮಕ್ಕಳಲ್ಲಿ ಸ್ವಾಭಿಮಾನ, ಸ್ವಾವ ಲಂಬನ ಬೀಜಗಳು ಅಂಕುರಿಸುವವೊ? ಅವರಲ್ಲಿ ರಾಷ್ಟ್ರದ ಉದ್ಧಾರಕ್ಕಾಗಿ ಹೆಣಗುವ ಹಂಬಲವು ಕುದಿಯುವದೋ? ಜಾಗತಿಕ ಜಗತ್ತಿನಲ್ಲಿ ಹಿಂದು ಸ್ತಾನದ ಹೆಸರನ್ನು ಹೊನ್ನಕ್ಷರಗಳಿಂದ ಬರೆಯಲು ಹವಣಿಸುವರೋ? ನಮ್ಮ ನಾಡು, ನಮ್ಮ ನುಡಿ, ನಮ್ಮ ಇತಿಹಾಸ, ನಮ್ಮ ಸಂಸ್ಕೃತಿ ಇವು ಗಳ ಯಥಾರ್ಥ ಕಲ್ಪನೆಯು ತರುಣ ಪೀಳಿಗೆಯ ಹೃದಯ ದೇಗುಲ ದಲ್ಲಿ ನೆಲಸಿದೆಯೋ? ಶೋಚನೀಯ ಸ್ಥಿತಿ! ಇವುಗಳಿಗೆಲ್ಲ ಪೂರ್ಣ ವಿರಾಮ! ಸಾಕಿನ್ನು ಕಡತಂದ ಪರಕೀಯ ಜೀವನ! ಬೇಕಿನ್ನು ಜೀವ ತುಂಬಿದ ಸ್ವಕೀಯ ಜೀವನ!

**ಎರಡು ದೃಶ್ಯಗಳು:**

ಶ್ರೀ. ಸ್ವಾಮಿ ವಿವೇಕಾನಂದರು ಯುರೋಪ, ಅಮೇರಿಕೆಗಳಲ್ಲಿ ಸಂಚ

ರಿಸಿ ಭಾರತೀಯರ ಮೇಲ್ಮೆಯನ್ನೂ, ಭಾರತದ ಉಜ್ವಲ ಸಂಸ್ಕೃತಿಯನ್ನೂ ಪರಕೀಯರಿಗೆ ಮನಗಾಣಿಸಿ ಕೊಟ್ಟ ಪ್ರತಿಭಾ ಸಂಪನ್ನರು. ಅವರು ನ್ಯೂಯಾರ್ಕದಲ್ಲಿ ನೆಲೆಸಿದ ಆಯರ್ಲ್ಲಂಡ ಜನರನ್ನು ಒಮ್ಮೆ ಕಂಡರು. ಆ ಜನರು ಅದೇ ಆಗ ಅಲ್ಲಿ ವಸಾಹತುಗಳನ್ನು ಮಾಡಿಕೊಂಡಿದ್ದರು. ಅಂದು ಆಯರ್ಲ್ಲಂಡವು ಇಂಗ್ಲಂಡದ ಅಧೀನದಲ್ಲಿತ್ತು. ರಾಜಕೀಯ ದಾಸ್ಯ ಶೃಂಖಲೆ ಯಿಂದ ಹೊರಗಾಗಲು ಹೊರಟ ಕಷ್ಟ ಜೀವಿಗಳು ಅವರು. ಅವರ ಅಂದಿನ ಜೀವನದ ಒಂದು ದೃಶ್ಯ, ಅವರೇ ಆರು ತಿಂಗಳು ಸ್ವಾತಂತ್ರ್ಯಗಾಳಿಯಲ್ಲಿ ಬೆಳದಂದಿನ ಮತ್ತೊಂದು ದೃಶ್ಯ, ಇವುಗಳ ಕಲ್ಪನೆ ಸರಿಯಾಗಿ ನಮ್ಮಲ್ಲಿ ಒಡಮೂಡಬೇಕಾದರೆ ಸ್ವಾಮಿ ವಿವೇಕಾನಂದರ ಶಬ್ದಗಳನ್ನೇ ಓದುವಾ.

"ನ್ಯೂಯಾರ್ಕದಲ್ಲಿ, ಆಯರ್ಲ್ಲಂಡ ಜನರ ವಸಾಹತುಗಳಲ್ಲಿದ್ದವರನ್ನು ನೋಡಿದೆ. ಕೆಳನುಗ್ಗಿದ, ಒಳಕುಗ್ಗಿದ, ಕಾಸಿಲ್ಲದ ಕೂಳಿಲ್ಲದ, ಅಳಕುತ್ತ ಹೆಜ್ಜೆ ಹಾಕುವ, ಅಂಜುತ್ತ ಅಲೆಯುವ ಆ ಜನರ ಹೃದಯದ್ರಾವಕ ದೃಶ್ಯ ದೃಷ್ಟಿ ಗೋಚರವಾಗಿ–ಅವರೇ ಆರುತಿಂಗಳ ಅವಧಿಯಲ್ಲಿಯೇ ಹೃದಯಂಗಮ ನೋಟದಲ್ಲಿ ಕಾಣಿಸುವ ಪ್ರಸಂಗ ಕಂಡೆ! ಕನಸೊಡೆದೆದ್ದೆ!! ಏನಿ ದರ ಮೂಲವೆಂದು ವಿಚಾರಿಸಿದೆ!!! ಅವರು ನೀಟಾಗಿ ನಡೆಯುತ್ತಾರೆ! ಉಡುಪು ಬದಲಾಯಿಸಿದೆ! ನಡೆಯಲ್ಲಿ, ನೋಟದಲ್ಲಿ ಅಳುಕಿನ ಝಳುಕಿಲ್ಲ; ಅಂಜಿಕೆಯ ಕುರುಹು ಇಲ್ಲ! ಈ ಜನರು ಆಯರ್ಲಂಡದಲ್ಲಿದ್ದಾಗ ಜಿಗು ಪ್ಸೆಯ ವಾತಾವರಣವು ಅವರನ್ನು ಆವರಿಸಿ, ಆಸರವಿಲ್ಲದ ಬೇಸರ ಜೀವನ ವಾಗಿತ್ತು. ನಿಸರ್ಗವೆಲ್ಲವೂ ಒಂದೇ ಧ್ವನಿಯಿಂದ—ಮಗು, ನಿನಗೆ ಆಶೆ ಯಿಲ್ಲ, ನೀನು ಹುಟ್ಟುಗುಲಾಮ; ಹೀಗೆಯೇ ಉಳಿಯುವೆ' ಎಂದು ಕೂಗುತ್ತಿತ್ತು. ತಾಯಿಯ ಉಡಿಯಲ್ಲಿಯೇ ಕೇಳಿದ ಈ ನುಡಿಯನ್ನು ನಂಬಿ ಮುಂದೆ ಮುಸುಕಿದ ಆ ಮಬ್ಬಿನಲ್ಲಿ ತಾನು ಬಲು ಕೀಳೆಂದು ಬಗೆದ! ಆದೇ, ಅವನು ಅಮೇರಿಕೆಗೆ ಬಂದಿಳಿದು ಸುತ್ತಲೂ ಧ್ವನಿತವಾಗುತ್ತಲಿದ್ದ ಮತ್ತೊಂದು ಕೂಗನ್ನು ಕೇಳಿದ—' ಎಲವೋ, ನೀನೂ ನಮ್ಮಂತೆಯೇ ಮನುಷ್ಯ! ಇದನ್ನೆಲ್ಲ ಮಾಡಿದವನು ಮನುಷ್ಯನೇ! ನಿನ್ನ–ನನ್ನ ಹಾಗೆ ಇದ್ದ ಮನುಷ್ಯ ಏನೊಂದು ಮಾಡಬಲ್ಲ! ಧೈರ್ಯ ತಾಳು!, ಆಗ ಅವನು ತಲೆ ಮೇಲೆ ಮಾಡಿದ; ಅದನ್ನೆಲ್ಲವನ್ನು ಮನಗಂಡ. ಸಾಕ್ಷಾತ್ ನಿಸರ್ಗ

ದೇವತೆಯೇ:—"ಏಳು, ಎಚ್ಚರಾಗು, ಗುರಿ ಮುಟ್ಟುವ ತನಕ ನಿಲ್ಲಬೇಡ" ಎಂದು ಕೂಗಿದಂತೆ ಧ್ವನಿ ಕೇಳಿಸಿತು.

ಅಂದಿನ ಆಯರಿಸ್ ಜನರಂತೆ ನಮ್ಮ ಮಕ್ಕಳಾದರೂ ನಿಷೇಧಾತ್ಮಕ ಶಿಕ್ಷಣವನ್ನು (Negative Education) ಪಡೆಯುತ್ತಲಿದ್ದಾರೆ. ನಿಷೇಧಾತ್ಮಕ ಶಿಕ್ಷಣವು ಮರಣಕ್ಕಿಂತ ಕೀಳೆಂದು ಸ್ವಾಮಿಗಳು ಉದ್ಗಾರ ತೆಗೆದಿರುವರು. ರಾಜಕೀಯ ದಾಸ್ಯದೊಡನೆ ವಿಚಾರದಾಸ್ಯ, ಸಾಂಸ್ಕೃತಿಕ ದಾಸ್ಯ ಇವು ಮೊಳೆತವು. ನಮ್ಮ ಜನರ ಹುಲುಸಾದ ಜೀವನದಲ್ಲಿ ಹೊಲಸು ಸೇರಿತು. ಸೊಗಸು ಜೀವನವೆಲ್ಲ ಕನಸಾಯಿತು. ನಮ್ಮದೆಂಬುವದೆಲ್ಲ ಮಾಯವಾಯಿತು. ಪರಕೀಯ ಭಾಷೆ, ಪರಕೀಯ ವಿಚಾರ, ಪಾಶ್ಚಾತ್ಯ ಸಂಸ್ಕೃತಿ ಇವು ಮೋಹಕವಾದವು. ಮೃಗಜಲವ ಬೆನ್ನಟ್ಟಿ, ಭಾರತವು ಮರಭೂಮಿಯೆನೋ ಎಂಬ ಭ್ರಮೆಯಿಂದ ದಿಂಗ್ಮೂಢರಾದರು ನಮ್ಮ ತರುಣರು! ತಪ್ಪು ಯಾರದು?

ಆಳರಸರದೆಂದು ಆಗಲೆ ಅನ್ನಬಹುದು. ಇದು ಸರಿಯೇ? ಆಂಗ್ಲರು ಭಾರತದಲ್ಲಿ ಬಿತ್ತಿದರು ತಮ್ಮ ಸತ್ತ್ವೆಯನ್ನು. ಅದು ಚಿರಕಾಲ ಫಲ ಕೊಡಲೆಂದು ಹಾರೈಸಿದರವರು. ಅವರ ಆಡಳಿತೆಗೆ ಅನುಕೂಲವಾಗುವ ಶಿಕ್ಷಣವನ್ನು ಮೊದಲು ಮಾಡಿದರು. ಇದು ಕೇವಲ ವ್ಯವಹಾರಿಕ ದೃಷ್ಟಿ. ಆಂಗ್ಲರು ವ್ಯಾಪಾರಕ್ಕಾಗಿ ಇಲ್ಲಿ ನೆಲೆಸಿದರು. ಬೆಕ್ಕುಗಳ ಕಾದಾಟದಲ್ಲಿ ಮಂಗವು ಬೆಣ್ಣೆ ನುಂಗಿ ಓಡಿ ಹೋದಂತೆ ಅವರ ಮನೋವೃತ್ತಿಯಾಯಿತು. ನಮ್ಮ ಬೆಣ್ಣೆಯನ್ನೆಲ್ಲ ನುಂಗುವ ಹೊಂಚು ಹಾಕಿದರು. ನಮ್ಮವರಿಗೆ ತಿಳಿಯಲಿಲ್ಲ ಮಂಗನ ಮೋಸ! ಬಿದ್ದವನ ರಾಜ್ಯ ಗೆದ್ದವನ ಆಶೆ—ಆಕಾಂಕ್ಷೆಗಳಿಗೆ, ಕರುಣೆ-ಕಾಠಿಣ್ಯಗಳಿಗೆ ತುತ್ತಾಗಬೇಕಲ್ಲವೇ? ಅನ್ಯರ ಮಾರ್ಗವನ್ನನುಸರಿಸಿದ ಹೊರತು ಇನ್ನೊಂದು ಮಾರ್ಗವಿಲ್ಲ ಎಂಬ ದಿಗ್ಭ್ರಮೆ ಆವರಿಸಿತು ನಮ್ಮವರನು! ಅವರಂತೆ ಆದರು ನಮ್ಮವರು! ಇದು ಮೆಕಾಲೆ ಮುನಿಗಳ ಮಹಾಶಾಪ! ರೂಪ, ಬಣ್ಣ, ಆಕಾರ ಮಾತ್ರದಿಂದ ಭಾರತೀಯರು; ಸ್ಫೂರ್ತಿ, ವಿಚಾರ, ಕೃತಿಗಳ ಗಾತ್ರದಿಂದ ಆಂಗ್ಲರು! ಇದು ಅವನ ಸವಿಗನಸು! ಶಾಪದ ಕಹಿ ಕುರುಹು! ಎಷ್ಟು ದೂರ ದೃಷ್ಟಿ! ಎಂತಹ ಮೇಧಾವಿ ಮೆಕಾಲೆ ಮುನಿ! ಅವನ ತಪಸ್ಸಿನ ಸತ್ವದ ಫಲವಾಗಿ ಆಂಗ್ಲರ ಬೆಳಕು, ಅವರ ಶಾಪದ ಕುರುಹಾಗಿ ನಮ್ಮ ಅಜ್ಞಾನದ

ಕಗ್ಗತ್ತಲೆಯು ನಮ್ಮನ್ನು ಆವರಿಸಿದವು. ಪಾಶ್ಚಾತ್ಯ ಸಂಸ್ಕೃತಿಯು ಸೂರ್ಯನ ತೇಜದಿಂದ ಬಂದುದೇನೋ, ಪೌರ್ವಾತ್ಯ ಸಂಸ್ಕೃತಿಯು ಚಂದಿರನ ಕಿರಣವೇನೋ ಎಂಬಂತೆ ಭಾಸವಾಯಿತು. ಭಾರತೀಯರನ್ನು ಭ್ರಮೆಗೊಳಿಸಿತು. ದೇ. ಭ. ದಿವಾಕರ ರಂಗರಾಯರ ಶಬ್ದಗಳನ್ನು ಇಲ್ಲಿ ಉದಾಹರಿಸುವದಾದರೆ, "ಯಾವುದು ಮೆಕಾಲೆ ಸಾಹೇಬರಿಗೆ ತಾರಕವೆನಿಸಿತೋ, ಯಾವುದು ರಾಜಾರಾಮ ಮೋಹನರಾಯರಿಗೆ ಉಪಕಾರಕ ತೋರಿತೋ, ಯಾವುದನ್ನು ಲಕ್ಷಾಂತರ ಜನರು ಹಿತಕಾರಕವೆಂದು ಗ್ರಹಿಸಿದರೋ ಅದೇ ಬ್ರಿಟಿಶ್ ಶಿಕ್ಷಣ ಪದ್ಧತಿಯು ಪರಿಣಾಮತಃ ಹಾನಿಕಾರಕವೂ, ರಾಷ್ಟ್ರಘಾತಕವೂ, ತ್ಯಾಜ್ಯವೂ ಎನಿಸಲಾರಂಭಿಸಿತು. ರಾಷ್ಟ್ರದ ಜೀವಾಳವಾದ ರಾಷ್ಟ್ರೀಯ ವೃತ್ತಿಯೇ ಅದರಿಂದ ನಷ್ಟವಾಗುತ್ತಿರುವುದು ಕಂಡು ಬಂದಿತು. ಪರಕೀಯರಿಗಾಗಿ ಈ ದೇಶವನ್ನಾಳಲು ಬಿಳಿಯರ ಬದಲು ಕಪ್ಪು ಸಾಹೇಬರು ಆ ಶಿಕ್ಷಣದಿಂದ ತಯಾರಾಗಲಾರಂಭಿಸಿದರು." ನಮ್ಮವರಿಂದಲೇ ನಮ್ಮನ್ನು ಹಿಂಡಿಸಿ ಹಿಪ್ಪೆ ಮಾಡುವ, ದಾಸ್ಯತ್ವವನ್ನು ಚಿರಂಜೀವಿಯಾಗಿ ಮಾಡುವ, ಶಿಕ್ಷಣಕ್ರಮದ ದುರಂತ ನಾಟಕದ ಪರದೆಯು ತೆರೆಯಿತು. ಮುಂಬರುವ ಪಾತ್ರಗಳ ಪರಿಚಯ ಮಾಡಿಕೊಡಲು ರಂಗಭೂಮಿಗೆ ಬಂದ ಸೂತ್ರಧಾರರು ಮೆಕಾಲೆಯವರು. ಹಿರಿಯ ಸ್ಥಾನದಲ್ಲಿ ಕುಳಿತು ಜನಮನ ಸೆಳೆಯುವ ವಿದೂಷಕರು ಬರಲಾರಂಭಿಸಿದರು. ಜನಸಾಮಾನ್ಯರನ್ನು ಸೀಳುವ ಅಲುಗುಗಳಾಗಿ ಹೊಳೆಯಲಾರಂಭಿಸಿದರನೇಕರು. ಚೇಷ್ಟೆ ಕುಚೇಷ್ಟೆಗಳಿಂದ ದುರಂತಕ್ಕೀಡು ಮಾಡುವ ದುಷ್ಟವೀರರಿಗೇನೂ ಕೊರತೆಯಿರಲಿಲ್ಲ. ಪರಕೀಯರಿಗೆ ಬೇಕಾದ ಶಿಕ್ಷಣವು ವಿರಾಟ ಸ್ವರೂಪವನ್ನು ತಾಳಿತೇ ಹೊರತು ನಮಗಾಗಿ ಶಿಕ್ಷಣ ಎಂಬ ಬೀಜವನ್ನು ಬಿತ್ತಲು ಹಿರಿ ಒಕ್ಕಲುಗಳು. ಹಂಬಲಿಸಲಿಲ್ಲ, ಹಲುಬಲಿಲ್ಲ, ಹಟ ಹಿಡಿಯಲಿಲ್ಲ. 'ಕೊಡಲಿಯ ಕಾವು ಕುಲಕ್ಕೆ ವೈರಿ' ಎಂಬಂತೆ ಆಯಿತು ನಮ್ಮ ಸ್ಥಿತಿ! ಇರಲಿ. ಸತ್ಯವ ನುಡಿದ ಜಾರ್ಜ ವಾಸಿಂಗ್ಟನ್ನನ ಕೊಡಲಿ ನಮ್ಮದು!

**ಪ್ರಯತ್ನಗಳು:**

ನಡೆದುವು. ನಡೆದಿವೆ. ಜನಜಾಗ್ರತೆಯೊಡನೆ ರಾಷ್ಟ್ರೀಯ ಶಿಕ್ಷಣದ

ಅವಶ್ಯಕತೆಯು ಪ್ರತೀತವಾಗಿದೆ. ಇದು ಸಹಜ. ಬ್ರಿಟಿಶರು ತಮ್ಮ ರಾಜ್ಯ ವನ್ನು ಇಲ್ಲಿ ಸ್ಥಿರಗೊಳಿಸಲು ಹವಣಿಸಿದ್ದುದು ಸ್ವಾಭಾವಿಕ. ತಮ್ಮ ಆಡಳಿತಕ್ಕೆ ಅಡ್ಡಬರದಂತೆ ಶಿಕ್ಷಣದ ಸೂತ್ರಗಳನ್ನು ತಮ್ಮ ಹಕ್ಕೋಟೆಯಲ್ಲಿಟ್ಟು ಕೊಂಡರು. ಆದರೆ ಹಿಂದುಸ್ತಾನವು ಗುಲಾಮರ ಗೂಡು, ದರಿದ್ರರ ಬೀಡು, ಹಾಳು ಜೀವಿಗಳ ನಾಡು, ಎಂದು ಕಡೆಗಣಿಸಲು ತೂರಿದ ಕಿಡಿ ಪ್ರತಿಗಾಳಿ ಬೀಸಿದರೆ ತನ್ನ ತಾ ಸುಡುವುದಿಲ್ಲವೇ! ಸಹನೆಗೂ ಸೀಮೆ ಇಲ್ಲವೇ! ಜಗತ್ತಿನ ಕ್ಷಿಸಾಲು ಜನರು ಅಜ್ಞಾನ ಕತ್ತಲೆಯಲ್ಲಿ ಅವಿತು ಕೊಂಡರೆ, ಅಲ್ಲಿ ಅರುಣೋದಯವಾಗುವದಿಲ್ಲವೇ! ಕಾರ್ಮೋಡಗಳಲ್ಲಿ ಕೋಲ್ಮಿಂಚು ಕಾಣಿಸಿ ಕೊಳ್ಳುವದಿಲ್ಲವೇ! ಕೊಹಿನೂರ ಕೊಟ್ಟ ಭಾರತವು ಕೆಳಗಿಳಿಯಿತೇ! ಯಂತ್ರ ಪೂರ್ವ ಕಾಲದಲ್ಲಿ ಆಂಗ್ಲರಿಗೆ ನಯವಾದ ಬಟ್ಟೆಕೊಟ್ಟು ಮರ್ಯಾದೆಯನ್ನು ಕಾಯ್ದ ಭಾರತೀಯರೂ ತಮ್ಮ ಬಟ್ಟೆ ಗಾಗಿ ಇಂದು ಮ್ಯಾಂಚೆಸ್ಟರದ ಕಡೆಗೆ ಹೊರಳ ಬೇಕಾಯಿತೇ! ಜೀವ ನದ ಮೂಲ ಭೂತ ಬೇಡಿಕೆಗಳಲ್ಲಿ ಸ್ವಾವಲಂಬಿಯಾದ ಭಾರತವು ಇಂದು ಪರಾವಲಂಬಿಯಾಯಿತೇ! ಅಸಾಮಾನ್ಯ ಚಿತ್ರಕಲೆ, ಅಪ್ರತಿಮ ಶಿಲ್ಪಕಲೆಗಳು ಗುಡಿಗುಂಡಾರಗಳನ್ನೂ, ಗುಹೆಗವ್ವರಗಳನ್ನೂ ಸೇರಿ ನಿರ್ಜೀವ ವಸ್ತುಗಳಲ್ಲಿ ನಿಸ್ತೇಜವಾದುವೇ? ಹಿಂದುಸ್ತಾನವು ಹಿಂದುಳಿದ ದೇಶ, ಹಿಂದುಳಿ ಯಲರ್ಹವಾದ ದೇಶ ಎಂಬ ಕಡೆಗಣ್ಣನೋಟ ಹಿಂದೀಯರ ಹೃದಯ ಕೆಣ ಕದೆ ಬಿಡುವುದೇ? ಪರಕೀಯರ ಜುಲುಮೆ, ಅನ್ಯಾಯ, ಕಠೋರತೆಗಳು ತಾಂಡವ ನೃತ್ಯವಾಡಲು ಸಮಯ ನಿರ್ಬಂಧವಿಲ್ಲವೇ? ಈ ಬಗೆಯ ವಿಚಾರ ಗಳು ದೇಶದಲ್ಲೆಲ್ಲ ಒಂದಿಲ್ಲೊಂದು ರೀತಿಯಲ್ಲಿ ಹರಡತೊಡಗುವವು. ಶಾಲೆ ಕಾಲೇಜುಗಳಲ್ಲಿ ಸೇರಿದುವು; ವಿದ್ಯಾರ್ಥಿಗಳ ಮನಸೆಳೆದುವು. ರಾಷ್ಟ್ರೀಯ ಶಿಕ್ಷಣವನ್ನು ಸ್ವತಂತ್ರ ರೀತಿಯಿಂದ ಕೊಡುವದವಶ್ಯವೆಂದು ಮುಂದಾಳು ಗಳು ಮನಗಂಡರು. ಪ್ರಯತ್ನಗಳು ನಡೆದುವು. ಅವುಗಳಿಗೆ ಹಿನ್ನೆಲೆ ಯಾಗಿ ಚಳವಳಿಯ ಪ್ರಚಂಡ ಬಿರುಗಾಳಿಯು ಬೀಸಲಾರಂಭಿಸಿತು. ಪ್ರತ್ಯಕ್ಷ ಚಳವಳಿಯ ಪೂರ್ವದಲ್ಲಿ, ಹಿಂದೀಯರ ಸಂಸ್ಕೃತಿಯ ಪುನರುಜ್ಜೀವನ ಮಾಡಬೇಕೆಂಬ ಹಂಬಲದಿಂದ ವಿದ್ವಾಂಸರು ಪ್ರತ್ಯೇಕ ಸಂಸ್ಥೆಗಳನ್ನು ತೆರೆ ಯಲು ಯತ್ನಿಸಿದರು. ನಮ್ಮ ತತ್ತ್ವಜ್ಞಾನ, ಚಿತ್ರಕಲೆ, ಶಿಲ್ಪಕಲೆ,

ಸಾಹಿತ್ಯ, ಸಂಗೀತ, ಇವು ಉಚ್ಚ ತರಗತಿಯವು; ಆದರೆ ಅವುಗಳಿಗೆ ವಿಶ್ವವಿದ್ಯಾಲಯಗಳಲ್ಲಿ ಸ್ಥಾನವಿರಲಿಲ್ಲ. ಈ ಕೊರತೆಯನ್ನು ಪೂರೈಸಲು ಅನೇಕ ಸಂಸ್ಥೆಗಳು ಉದಯವಾದವು. ಇದುವೇ ರಾಷ್ಟ್ರೀಯ ಶಿಕ್ಷಣದ ಅರುಣೋದಯದ ಸಂಧಿಕಾಲ. ಬ್ರಹ್ಮೋ ಸಮಾಜದವರು ಬಂಗಾಲದಲ್ಲಿ ಆರ್ಯ ಸಮಾಜದವರು ಪಂಜಾಬದಲ್ಲಿ, ಥಿಯಾಸಫಿ ಪಂಥದವರು ಮದ್ರಾಸ ದಲ್ಲಿ, ಮುಸಲ್ಮಾನ ಬಂಧುಗಳು ಅಲೀಗಡದಲ್ಲಿ ಕೆಲವು ಶಾಲೆ ಕಾಲೇಜು ಗಳನ್ನು ಸುರುವು ಮಾಡಿದರು. ಇವುಗಳಲ್ಲಿ ಮೊಟ್ಟ ಮೊದಲನೆಯ ಸಂಸ್ಥೆ ಯೆಂದರೆ ಅಲೀಗಡದ ಆಂಗ್ಲೋ ಉರ್ದು ಶಾಲೆಯು. ಇದು ೧೮೭೭ರಲ್ಲಿ ಸ್ಥಾಪನೆಯಾಯಿತು. ನಂತರ ಚಿಪಳೂಣಕರ, ಟಿಳಕ, ಆಗರಕರ, ಮುಂತಾದ ಮಹನೀಯರು ಪುಣೆಯಲ್ಲಿ ಒಂದು ಸಂಸ್ಥೆಯನ್ನು ಸುರುವು ಮಾಡಿದರು. ಈ ಸಂಸ್ಥೆಗಳು ಮೊದಲು ಸ್ವತಂತ್ರ ರೀತಿಯಿಂದ ನಡೆದವು. ಆ ಮೇಲೆ ಸರಕಾರದ ಸಹಾಯ ಪಡೆದವು. ಕೂಡಲೆ ಸರಕಾರದ ನಿಯಂತ್ರ ಣವೂ ಹೇರಲ್ಪಟ್ಟಿತು. ಅಲ್ಲಿ ಸ್ವಧರ್ಮ, ಸ್ವಭಾಷೆ, ಸ್ವರಾಷ್ಟ್ರ ಇವು ಗಳ ಬೋಧೆ ಉಪಕ್ರಮವಾಯಿತು.

ಸಾಂಸ್ಕೃತಿಕ ದೃಷ್ಟಿಯಿಂದ ಮಹತಿಯನ್ನು ಗಳಿಸಿದ ಸಂಸ್ಥೆಗಳೆಂದರೆ ಕಾಂಗ್ರಿಯ ಗುರುಕುಲ, ಕವಿ ರವೀಂದ್ರರ ಶಾಂತಿನಿಕೇತನ, ಶ್ರೀ ನಿಕೇತನಗಳು. ಇವು ಪ್ರಾಚೀನ ಕಾಲದ ಗುರುಕುಲ ಶಿಕ್ಷಣ ಕ್ರಮದ ತತ್ವಗಳನ್ನು ಹೊಸ ಪರಿಸ್ಥಿತಿಗೆ ಹೊಂದಿಕೆಯಾಗುವಂತೆ ಅಳವಡಿಸಿಕೊಂಡು ಆಶ್ರಮ ಜೀವನವನ್ನು ಆಚರಣೆಯಲ್ಲಿ ತರಲು ಮೊದಲು ಮಾಡಿದವು. ಸ್ವಭಾಷೆಗೆ ಪ್ರಧಾನ್ಯ ದೊರೆಯಿತು. ೧೯೦೧ರಲ್ಲಿ ಸ್ಥಾಪಿತವಾದ ಶಾಂತಿ ನಿಕೇತನವು ಮುಂದೆ ವಿಶ್ವಭಾರತಿ ಎಂಬ ಹೆಸರಿನ ದೊಡ್ಡ ವಿಶ್ವವಿದ್ಯಾಲಯ ವಾಗಿ ಜಗತ್ತಿನ ವಿದ್ವಾಂಸರನ್ನು ತನ್ನೆಡೆಗೆ ಸೆಳೆಯಲಾರಂಭಿಸಿತು. ಹಿಂದು ಸ್ಥಾನದ ಸಂಗೀತ, ಚಿತ್ರಕಲೆ, ಕೈಗಾರಿಕೆಗಳು, ಹಳ್ಳಿಯ ಸೊಗಸು ಜೀವನ, ನಿಸರ್ಗ ಸೌಂದರ್ಯ, ಸರಳ ಜೀವನ ಮತ್ತು ಉದಾತ್ತ ವಿಚಾರ ಮೊದಲಾ ದವುಗಳಿಗೆಲ್ಲ ವಿಶೇಷ ಸ್ಥಾನಗಳು ದೊರೆತವು. ಹಿಂದುಸ್ಥಾನದ ಸಾಂಸ್ಕೃತಿಕ ಪುನರುಜ್ಜೀವನವು ಇದರ ಮೂಲ ಉದ್ದೇಶವಾಗಿತ್ತು. ಆದಾಗ್ಯೂ ಸಂಕುಚಿತ ರಾಷ್ಟ್ರೀಯತ್ವವನ್ನು ಮಾತ್ರ ಪೋಷಿಸುವದು ರವೀಂದ್ರರ ದೃಷ್ಟಿ ಇರಲಿಲ್ಲ.

ಪೌರ್ವಾತ್ಯ ಹಾಗೂ ಪಾಶ್ಚಾತ್ಯ ಸಂಸ್ಕೃತಿಗಳ ಸಮರಸದ ಫಲವಾಗಿ ವಿಶ್ವ ಬಂಧುತ್ವವು(World Fellowship)ನೆಲೆಗೊಳ್ಳಬೇಕೆಂಬುದು ಅವರ ಹಿರಿಯಾಸೆಯಾಗಿತ್ತು. ಇವಲ್ಲದೆ ಬನಾರಸದ ಹಿಂದು ವಿಶ್ವವಿದ್ಯಾಲಯ ಮತ್ತು ದಕ್ಷಿಣ ಹೈದ್ರಾಬಾದದ ಉಸ್ಮಾನಿಯಾ ವಿಶ್ವವಿದ್ಯಾಲಯ ಇವು ರಾಷ್ಟ್ರೀಯತ್ವವನ್ನು ಪೋಷಿಸಲು ಉದಯವಾದವು; ಆದರೆ ಅವು ಸರಕಾರದ ನಿಯಂತ್ರಣಕ್ಕೆ ಒಳಗಾದವು; ಮತ್ತು ಅಲ್ಲಿ ವಿದ್ಯಾರ್ಥಿಗಳ ಸ್ವಭಾಷೆಗೆ ಪ್ರಾಧಾನ್ಯ ದೊರೆಯಲಿಲ್ಲ. ಆದಾಗ್ಯೂ ಅವು ಸ್ವತಂತ್ರ ಶಿಕ್ಷಣ ಪ್ರಯತ್ನಗಳು. ಜಮಾಯತ-ಉಲ್-ಉಲೇಮಾ ಎಂಬ ಸಂಸ್ಥೆಯಿಂದ ಅನೇಕ ರಾಷ್ಟ್ರೀಯ ಶಾಲೆಗಳು ತೆರೆಯಲ್ಪಟ್ಟವು. ಇಂಥ ಪ್ರಯತ್ನಗಳಿಗೆ ೧೯೦೬ರಲ್ಲಿ ಕಾಂಗ್ರೆಸ್ಸಿನ ಮುದ್ರೆ ಬಿದ್ದಿತು.

**ಆಂದೋಲನ:**

೧೯೦೫-೬ ರಲ್ಲಿ ವಂಗಭಂಗ ಚಳವಳಿಯು ಆರಂಭವಾಯಿತು. ಅಂದಿನ ವ್ಹಾಯಿಸರಾಯರಾದ ಲಾರ್ಡ ಕರ್ಝನರು ಬಂಗಾಲ ವಿಭಜನೆಗೆ ಪುಷ್ಟಿ ಕೊಟ್ಟರು. ಅವರು ಸಾಮ್ರಾಜ್ಯವಾದಿಗಳು. ಶಿಕ್ಷಣದ ನಿಯಂತ್ರಣವನ್ನು ಸರಕಾರದ ಹತೋಟಿಯಲ್ಲಿ ಇಟ್ಟರು. ಬಂಗಾಲವು ಇಬ್ಭಾಗವಾಗಕೂಡದೆಂಬ ಚಳವಳಿಯು ಆರಂಭವಾಗಿ, ಇಡಿ ಹಿಂದುಸ್ಥಾನದಿಂದ ಬ್ರಿಟಿಶರನ್ನು ಹೊರಗಿಡಬೇಕೆಂಬ ಚಳವಳಿಯ ಸ್ವರೂಪವನ್ನು ತಾಳಿತು. ಈ ಆಂದೋಲನವನ್ನು ಹತ್ತಿಕ್ಕಲು ಯತ್ನಗಳು ನಡೆದವು. ಈ ಆಂದೋಲನದ ಅಂಗವಾಗಿ ರಾಷ್ಟ್ರೀಯ ಶಾಲೆಗಳು ಹುಟ್ಟಿದವು. ೧೯೦೬ ರಲ್ಲಿ ಕಲಕತ್ತೆಯಲ್ಲಿ ಕೂಡಿದ ಕಾಂಗ್ರೆಸ್ಸು ಸ್ವರಾಜ್ಯದ ಬೇಡಿಕೆಯನ್ನು ಮುಂದು ಮಾಡಿತು. ರಾಷ್ಟ್ರೀಯ ಶಿಕ್ಷಣವನ್ನು ನಡಿಸಬೇಕೆಂಬ ಗೊತ್ತುವಳಿಯನ್ನು ಸ್ವೀಕರಿಸಿತು. ಅದರ ಸಾಧನವಾಗಿ ಸ್ವರಾಜ್ಯ, ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಎಂಬ ಚತುರ್ಮುಖ ಕಾರ್ಯಕ್ರಮವನ್ನು ಕಾಂಗ್ರೆಸ್ಸು ಕೈ ಕೊಂಡಿತು. ರಾಷ್ಟ್ರೀಯ ಶಾಲೆ-ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಸೇರಬಾರದೆಂಬ ನಿರ್ಬಂಧಗಳನ್ನು ಸರಕಾರೀ ಅಧಿಕಾರಿಗಳು ಹಾಕಿದರು. ಮೆರವಣಿಗೆ ತೆಗೆಯಕೂಡದು, ವಂದೇ ಮಾತರಂ ಅನ್ನಕೂಡದು, ಎಂಬ ಹುಕುಮುಗಳೂ ಹೊರಟವು. ರಾಷ್ಟ್ರೀಯ ಮನೋವೃತ್ತಿಯುಳ್ಳ ವಿದ್ಯಾರ್ಥಿಗಳಿಗೆ ಸಿಡಿಲು ಬಡಿದಂತಾಯಿತು. ಹುಕುಮುಗಳಿಗೆ ಅವಮಾ

ನ್ಯತೆ ಆರಂಭಿಸಿತು. ಇದುವೇ ಸವಿನಯ ಕಾಯದೇ ಭಂಗದ ಪ್ರಥಮ ಸೋಪಾನ. ಎಚ್ಚತ್ತ ಬಂಗಾಲವು ಭಾರತವನ್ನೆಚ್ಚರಗೊಳಿಸಿತು. ವಂಗಭಂಗ ಚಳವಳಿಯು ಕಾಯದೇಭಂಗ ಚಳವಳಿಗೆ ಕಾರಣವಾಯಿತು. ಕರ್ಝನರ ಕೃಪಾದೃಷ್ಟಿ ಅಸಹಕಾರ ಆಂದೋಲನಕ್ಕೆ ಅನುವುಕೊಟ್ಟಿತು. ಜನಜಾಗ್ರ ತಿಯ ಫಲವಾಗಿ ರಾಷ್ಟ್ರೀಯ ಶಿಕ್ಷಣಕ್ಕೆ ಆಶ್ರಯ ದೊರೆಯಿತು. ಅಂದಿನ ರಾಷ್ಟ್ರಧುರೀಣರು ಶಿಕ್ಷಣದ ಬಗೆಗೆ ತಳೆದ ಧೋರಣವನ್ನು ದೇ. ಭ. ದಿವಾ ಕರರ ಶಬ್ದಗಳಲ್ಲಿ ಹೇಳುವವಾದರೆ "ಎಳೆ ಮಕ್ಕಳ ಮನಸ್ಸಿನಲ್ಲಿ ಸ್ವದೇಶ, ಸ್ವಭಾಷೆ, ಸ್ವಸಂಸ್ಕೃತಿ ಇವುಗಳ ಸಾಧಾರ ಸ್ವಾಭಿಮಾನದ ಬೀಜವನ್ನು ಬಿತ್ತಲು ಅಡ್ಡಿ ಮಾಡುವ ಶಾಲೆಗಳು ಇದ್ದರೇನು? ಹೋದರೇನು? ಪರಭಾಷೆ, ಪರರಾಜ್ಯ ಇವುಗಳ ಬಗ್ಗೆಯಷ್ಟೇ ನಿಷ್ಠೆಯನ್ನುಂಟು ಮಾಡಲು ಹಗಲಿರುಳು ಹೆಣಗುವ ಶಾಲೆಗಳು ಶಾಲೆಗಳಲ್ಲ. ಅವು ದೊಡ್ಡಿಗಳು, ಗುಲಾಮರನ್ನು ತಯಾರು ಮಾಡುವ ಗಿರಣಿಗಳು-ಅಥವಾ ಲೋಕಮಾನ್ಯರು ಅಂದಂತೆ ಅವು "ಕಾರಕೂನರನ್ನು ನಿರ್ಮಿಸುವ ಹಮಾಲಖಾನೆಗಳು." ತತ್ಪರಿಣಾಮವಾಗಿ ಕೂಡಲೆ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು ಉಪಕ್ರಮವಾದವು. ನಿವೃತ್ತ ನ್ಯಾಯಾಧೀಶರಾಗಿದ್ದ ಶ್ರೀ ಗುರುದಾಸ ಬ್ಯಾನರ್ಜಿ ಅವರ ಅಧ್ಯಕ್ಷತೆಯಲ್ಲಿ ವಿದ್ಯಾ ಪರಿಷತ್ ಎಂಬ ಶಿಕ್ಷಣ ಸಂಸ್ಥೆಯು ಸ್ಥಾಪಿಸಲ್ಪಟ್ಟಿತು. ಪೂರ್ವ ಬಂಗಾ ಲದಲ್ಲಿ ೨೪ ರಾಷ್ಟ್ರೀಯ ಹಾಯಸ್ಕೂಲುಗಳು ತೆರೆಯಲ್ಪಟ್ಟವು. ಈಗ ಪಾಂಡಿ ಚೇರಿಯಲ್ಲಿರುವ ಯೋಗಿ ಅರವಿಂದರು ಆಗ ಬಡೋದೆಯಲ್ಲಿ ಪ್ರಾಧ್ಯಾಪಕ ರಾಗಿದ್ದರು. ಅವರು ಅದನ್ನು ಬಿಟ್ಟುಕೊಟ್ಟು ಬಂಗಾಲದ ರಾಷ್ಟ್ರೀಯ ಕಾಲೇ ಜದ ಮುಖ್ಯಾಧ್ಯಾಪಕರಾದರು.

ಅವರ ಅಂದಿನ ಘೋಷಣೆಯು ರಾಷ್ಟ್ರದ ಕರೆಯಾಯಿತು. ರಾಷ್ಟ್ರೀಯ ಶಿಕ್ಷಣವನ್ನು ಸರಕಾರವು ಸದೆಬಡಿಯಬಹುದೆಂದೂ, ಸುಶಿಕ್ಷಿತರು ಆ ಪುಂಜನ್ನು ಮನೆ ಮನೆಗೆ ಮುಟ್ಟಿಸಬೇಕೆಂದೂ ಅವರು ಕಳಕಳಿಯಿಂದ ಕೂಗಿದರು. ಬಿಪಿನಚಂದ್ರ ಪಾಲರು ಹಿಂದುಸ್ತಾನದ ತುಂಬೆಲ್ಲ ಸಂಚರಿಸಿ ರಾಷ್ಟ್ರೀಯ ಶಿಕ್ಷಣದ ತತ್ವಗಳನ್ನು ಪ್ರಚಾರ ಮಾಡಿದರು. ಮಹಾರಾಷ್ಟ್ರದಲ್ಲಿ ಸಮರ್ಥ ವಿದ್ಯಾಲಯ, ಆಂಧ್ರದಲ್ಲಿ ಜಾತೀಯ ಕಲಾಶಾಲಾ, ಕರ್ನಾಟಕದಲ್ಲಿ ರಾಷ್ಟ್ರೀಯಶಾಲೆ, ಗಣೇಶ ವಿದ್ಯಾಲಯಗಳು ಸುರುವಾದವು. ಮಧ್ಯಪ್ರಾಂತ

ಮತ್ತು ಪಂಜಾಬಗಳಲ್ಲಿಯೂ ಅಂಥ ಸಂಸ್ಥೆಗಳು ಹೊರಟವು. ರಾಷ್ಟ್ರೀಯ ಆಂದೋಲನದ ಅಂಗವಾಗಿ ರಾಷ್ಟ್ರೀಯ ಶಿಕ್ಷಣವು ಆರಂಭವಾಯಿತು. ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯ ಮನೋವೃತ್ತಿಯನ್ನು ನಿರ್ಮಾಣ ಮಾಡುವದು ಅದರ ಸಾಧನವಾಯಿತು. ರಾಷ್ಟ್ರವನ್ನು ಸ್ವತಂತ್ರಗೊಳಿಸುವದು ಅದರ ಗುರಿಯಾಯಿತು. ಈ ಆದರ್ಶವನ್ನಿಟ್ಟುಕೊಂಡು ಸಾಗಿದ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಲ್ಲಿದ್ದ ಅಧ್ಯಾಪಕರು ಎಂಥ ಕರ್ತೃತ್ವಶಾಲಿಗಳು, ದೇಶ ಪ್ರೇಮಿಗಳು, ತ್ಯಾಗವೀರರು, ಆದರ್ಶಜೀವಿಗಳು ಆಗಿದ್ದರೆಂಬುದನ್ನು ಇಲ್ಲಿ ಬೇರೆ ಹೇಳಬೇಕಾಗಿಲ್ಲ. ಇಟಲಿ, ಫ್ರಾನ್ಸ, ಅಮೇರಿಕೆಗಳಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಚರಿತ್ರೆಗಳೂ, ಹಿಂದುಸ್ತಾನದ ಸಾಂಸ್ಕೃತಿಕ ಬೆಳವಣಿಗೆಗೆ ಕಾರಣೀಭೂತರಾದ ಮಹಾ ವ್ಯಕ್ತಿಗಳ ಜೀವನ ಚರಿತ್ರೆಗಳೂ, ರಾಷ್ಟ್ರಾಭಿಮಾನವನ್ನು ಹುಟ್ಟಿಸುವ ಹೊತ್ತಿಗೆಗಳೂ ಶಿಕ್ಷಣ ಸಾಧನ ಸಾಮುಗ್ರಿಗಳಾಗಿದ್ದವು. ಆಗಲೆ ಅನೇಕ ಜನರು ರೇಲ್ವೆ, ತಂತಿ, ಟಪಾಲು ಮುಂತಾದ ಸೌಕರ್ಯಗಳಿಗಾಗಿ, ಬ್ರಿಟಿಶರ ಬಟ್ಟಂಗಿಗಳಾಗತೊಡಗಿದ್ದರು. ರಾಜಕೀಯ ದಾಸ್ಯವು ನೈತಿಕ ಅಧೋಗತಿಗೆ ಕಾರಣ ವಾಗಿತ್ತು. ಈ ಅರಿವನ್ನುಂಟು ಮಾಡುವದು ಮಹತ್ವದ್ದಾಗಿತ್ತು.

**ಅರುಣೋದಯ:**

೧೯೦೫ರಲ್ಲಿ ಹುಟ್ಟಿದ ಸ್ವದೇಶಿ ಚಳವಳಿಯು ೨-೩ ವರ್ಷ ಭರಂದಿದ ಸಾಗಿತು. ೧೯೦೮ರಲ್ಲಿ ಲೋಕಮಾನ್ಯ ಟಿಳಕರು ಸೆರೆಮನೆ ಸೇರಿದರು. ಅರವಿಂದರು ಒಂದು ವರ್ಷ ಸೆರೆಮನೆಯಲ್ಲಿ ಕಾಲ ಕಳೆದರು. ಮುಂದೆ ಅವರು ಪಾಂಡಿಚೇರಿಗೆ ತೆರಳಿದರು ರಾಷ್ಟ್ರೀಯ ಶಾಲೆಗಳಲ್ಲಿದ್ದ ವಿದ್ಯಾರ್ಥಿಗಳನ್ನು ಬೇರೆ ಶಾಲೆಗಳಲ್ಲಿ ಸೇರಿಸಕೂಡದೆಂಬ ನಿರ್ಬಂಧವು ಹೇರಲಾಯಿತು. ಎಷ್ಟೋ ಶಾಲೆಗಳನ್ನು ಹುಕುಮಿನ ಬಲತ್ಕಾರದಿಂದ ಬಂದು ಮಾಡಿಸಿದರು. ಚಿಗುರುತ್ತಿರುವಾಗಲೇ ಚಿವುಟುವ ಸರಕಾರದ ಈ ಧೋರಣದಿಂದ ರಾಷ್ಟ್ರೀಯ ಶಿಕ್ಷಣದ ಕಾರ್ಯವು ಮಂದಗಾಮಿಯಾಗಿ ಸಾಗಿತು. ೧೯೧೬-೧೭ರಲ್ಲಿ ಉದಯಿಸಿದ ಹೋಮರೂಲ ಚಳವಳಿಯ ಪರಿಣಾಮವಾಗಿ, ರಾಷ್ಟ್ರೀಯ ಶಿಕ್ಷಣದ ಎರಡನೆಯ ಅಂಕು ಪ್ರಾರಂಭವಾಯಿತು. ಆದಾಗ್ಯೂ ಅಷ್ಟು ಬಲವಾಗಿ ಕಾರ್ಯ ನಡೆಯಲಿಲ್ಲ. ರಾಷ್ಟ್ರೀಯ ಶಿಕ್ಷಣ ಸಂಸ್ಥೆ

ಗಳನ್ನು ಸರಕಾರವು ಬಗ್ಗು ಬಡೆದದ್ದರಿಂದ ಪ್ರಚಲಿತ ಶಿಕ್ಷಣವು ಪೂರ್ಣ ಶಿಕ್ಷಣವೂ ಆಗಲಿಲ್ಲ. ಇಷ್ಟವಾದ ಶಿಕ್ಷಣವೂ ಅಲ್ಲ ಎಂದು ಮುಂದಾಳುಗಳಿಗೆ ಮನವರಿಕೆಯಾಯಿತು. ಜನಜಾಗ್ರತಿಗೆ ಬಲ ಕೊಟ್ಟಿತು. ತಾ.೧-೮-೧೯೨೦ ನೆಯ ದಿನ ಅಸಹಕಾರದ ಕಹಳೆ ಊದಲಾಯಿತು. ಅದೇವರ್ಷ ಡಿಶಂಬರ ತಿಂಗಳಲ್ಲಿ ನಾಗಪುರದಲ್ಲಿ ಸೇರಿದ ಕಾಂಗ್ರೆಸ್ಸು ಪಂಜಾಬ ಮತ್ತು ಖಿಲಾಫತ್ತುಗಳ ಅನ್ಯಾಯ ನಿಷೇದ ವ್ಯಕ್ತ ಮಾಡಿತು. ಅಹಿಂಸಾಮಯ ಅಸಹಕಾರವು ಸ್ವರಾಜ್ಯ ಗಳಿಸುವ ಶಸ್ತ್ರವೆಂದು ಸಾರಿತು; ಮತ್ತು ಸರಕಾರೀ ಹಾಗೂ ಸರಕಾರ ನಿಯಂತ್ರಿತ ಶಾಲೆ ಕಾಲೇಜುಗಳಿಗೆ ಬಹಿಷ್ಕಾರ ಹಾಕಿತು; ಅಷ್ಟೇ ಅಲ್ಲ, ಪ್ರತ್ಯಕ್ಷ ಪಿಕೆಟಿಂಗ ಪ್ರಾರಂಭವಾಯಿತು. ಅನೇಕ ವಿದ್ಯಾರ್ಥಿಗಳು ಶಾಲೆ ಕಾಲೇಜುಗಳಿಗೆ ಶರಣು ಹೊಡೆದರು. ೧೯೨೧ರಲ್ಲಿ ಎಷ್ಟೋ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು ಉದಯವಾದವು. ಮೂರನೆಯ ಅಂಕು ಆರಂಭವಾಯಿತು. ಗುಜರಾತ ವಿದ್ಯಾಪೀಠ, ಮಹಾರಾಷ್ಟ್ರ ವಿದ್ಯಾಪೀಠ, ಕರ್ನಾಟಕ ವಿದ್ಯಾಲಯ, ಬಿಹಾರ ವಿದ್ಯಾಪೀಠ, ಕಾಶೀ ವಿದ್ಯಾಪೀಠ ಇತ್ಯಾದಿ ಸಂಸ್ಥೆಗಳು ಹುಟ್ಟಿದವು. ಇವಲ್ಲದೆ ಎಷ್ಟೋ ಶಾಲೆಗಳು ಅಲ್ಲಲ್ಲಿ ತೆರೆಯಲ್ಪಟ್ಟವು. ಅಲ್ಲಿಯ ಶಿಕ್ಷಕರೆಲ್ಲ ಸಾದಾ ಜೀವಿಗಳು, ಉದಾತ್ತ ವಿಚಾರದವರು. ಆ ಶಾಲೆಗೆ ಆಡಂಬರದ ಕಟ್ಟಡಗಳಿರಲಿಲ್ಲ; ಅಲ್ಲಿ ಬೆಂಚುಗಿಂಚುಗಳಿರಲಿಲ್ಲ. ಅಗತ್ಯವಿದ್ದಾಗ ಅವರು ಗುಡಿಸಲುಗಳನ್ನು ಕಟ್ಟಿದರು. ವಿದ್ಯಾರ್ಥಿಗಳೊಡನೆ ಸಹಕಾರ ಸೌಹಾರ್ದ ಭಾವವನ್ನು ಬೆಳೆಸಿದರು. ಮಾತೃ ಭಾಷೆ, ಕೈಗಾರಿಕೆ, ಸ್ವದೇಶಿ ಆಟ ಇವುಗಳಿಗೆ ವಿಶೇಷ ಗಮನ ಕೊಡಲಾಯಿತು. ವಿದ್ಯಾರ್ಥಿಗಳು ಇತಿಹಾಸ, ಭೂಗೋಲ, ಅರ್ಥಶಾಸ್ತ್ರ ಈ ವಿಷಯಗಳನ್ನು ರಾಷ್ಟ್ರೀಯ ದೃಷ್ಟಿಯಿಂದ ಕಲಿಯುತ್ತಿದ್ದರು. ರಾಷ್ಟ್ರೀಯ ಸೇವೆಯಲ್ಲಿಯೇ ತಮ್ಮ ಜೀವನವನ್ನು ಮೀಸಲಿರಿಸಲು ನಿರ್ಧರಿಸಿದವರು ಮಾತ್ರ ಶಾಲೆ ಕಾಲೇಜುಗಳನ್ನು ಬಿಡಬೇಕೆಂದು ಮಹಾತ್ಮಾಗಾಂಧಿಯವರು ಎಚ್ಚರಿಕೆ ಕೊಟ್ಟಿದ್ದರು. ಬರಬರುತ್ತ ಈ ಶಾಲೆಗಳು ಮತ್ತೆ ಕರಗಹತ್ತಿದವು. ೧೯೨೮ ರಲ್ಲಿ ಗಾಂಧೀಜಿಯವರು ಈ ಶಿಕ್ಷಣವು ಕಾಂಗ್ರೆಸ್ಸಿನ ವಿಧಾಯಕ ಕಾರ್ಯಕ್ರಮಗಳಲ್ಲೊಂದಾಗಬೇಕೆಂದು ತಿಳಿಸಿದರು. ೧೯೩೦ ರಲ್ಲಿ ಅಸಹಕಾರದ ಆಂದೋಲನದ ಬಿರುಗಾಳಿಯು ಬೀಸಿತು.

೧೯೩೧-೩೭ ರಲ್ಲಿ ರಾಷ್ಟ್ರೀಯಶಿಕ್ಷಣ ಕಹಳೆಯು ಕೇಳ ಬಂತು; ಆದರೆ ಮಹತ್ವದ ಕಾರ್ಯವಾಗಲಿಲ್ಲ, ೧೯೩೭-೩೮ ರಲ್ಲಿ ಮಹಾತ್ಮಾಜಿಯವರ ಅಮರವಾಣಿಯ ಫಲವಾಗಿ ವರ್ಧಾ ಶಿಕ್ಷಣದ ಯೊಜನೆಯು ತಲೆಯೆತ್ತಿತು. ಅದರ ಪ್ರಯೋಗ ನಡೆಯಿತು. ೧೯೩೮ ರಲ್ಲಿ ಜರುಗಿದ ಹರಿಪೂರ ಕಾಂಗ್ರೆಸ್ಸು ವರ್ಧಾ ಶಿಕ್ಷಣ ಯೋಜನೆಯ ತತ್ವಗಳನ್ನು ಮಾನ್ಯ ಮಾಡಿ, ಅದು ರಾಷ್ಟ್ರೀಯ ಶಿಕ್ಷಣವೆಂದು ಮುದ್ರೆಹಾಕಿತು. ದೇ. ಭ. ದಿವಾಕರ ರಂಗರಾಯರ ಶಬ್ದಗಳಲ್ಲಿ ಮುಗಿಸುವದಾದರೆ, "ರಾಷ್ಟ್ರೀಯ ಜಾಗ್ರತಿಯೊಡನೆ ರಾಷ್ಟ್ರೀಯ ಶಿಕ್ಷಣದ ಅವಶ್ಯಕತೆಯ ಅರಿವು ಉಂಟಾಯಿತು. ರಾಷ್ಟ್ರೀಯ ಚಳವಳಿಗಳೊಡನೆ ಆ ಶಿಕ್ಷಣದ ಮಹತ್ವ ಹಾಗೂ ಪ್ರಾಬಲ್ಯ ಬೆಳೆಯಿತು. ರಾಷ್ಟ್ರೀಯ ಹೊಣೆಗಾರಿಕೆ ಬಂದೊಡನೆ ಅದಕ್ಕೆ ಚಿರ, ಸ್ಥಿರ ಸ್ವರೂಪ ಬಂದಿತು."

## ೧೮. ಸಹ ಶಿಕ್ಷಣ

ಸಹ ಶಿಕ್ಷಣವು ಒಂದು ಸಮಸ್ಯೆ. ಒಂದು ಕಾಲದಲ್ಲಿ ಸ್ತ್ರೀಯರನ್ನೂ ಶೂದ್ರರನ್ನೂ ಸಮಾಜದಲ್ಲಿ ಕೆಳವರ್ಜೆಯಲ್ಲಿ ಇಡಲಾಗಿತ್ತು. ಸ್ತ್ರೀಗೆ ವಿದ್ಯಾಭ್ಯಾಸವಿಲ್ಲ; ಧಾರ್ಮಿಕ ಹಕ್ಕು ಇಲ್ಲ ಅರ್ಥಾತ್ ಸಂಸ್ಕಾರವಿಲ್ಲ. ಸ್ತ್ರೀಯು ಮನೆಗೆಲಸದ ದಾಸಿ, ಪರಾವಲಂಬಿ. ಬಾಲ್ಯ ಜೀವನದಲ್ಲಿ ಪಿತ, ಪ್ರೌಢ ಜೀವನದಲ್ಲ ಪತಿ, ಇಳಿ ವಯಸ್ಸಿನಲ್ಲಿ ಸುತ ಇವರ ಮೇಲೆ ಅವಳ ಜೀವನ ಅವಲಂಬನ. ಮನೆಯ ಹೊರಗಿನ ಜಗತ್ತು ಸ್ತ್ರೀಗೆ ಅವಶ್ಯವಾದುದಲ್ಲ. ಪುರುಷನ ಕಾರ್ಯದಲ್ಲಿ ಸ್ತ್ರೀಯು ಸಹಾಯಕಳು. ಇವು ಬಹಳ ಹಳೆಯ ಕಾಲದ ವಿಚಾರಗಳು. ಈ ವಿಚಾರಗಳು ಈಗ ಉಳಿದಿಲ್ಲ. ಸ್ತ್ರೀಯು ವಿದ್ಯಾಭ್ಯಾಸ ಪಡೆಯ ಬಲ್ಲಳು, ಸತ್ಯ ಮಾರ್ಗದಿಂದ ಮುಕ್ತಿ ಹೊಂದಬಲ್ಲಳು. ತನ್ನ ವೈ ಮನಗಳನ್ನು ಬಳಸಿ, ಬೆಳಸಿ ಸ್ವಾವಲಂಬಿಯಾಗಬಲ್ಲಳು. ರಾಜಕಾರಣದಲ್ಲಿಯೂ ಭಾಗವಹಿಸಬಲ್ಲಳು. ಸುಸಂಸ್ಕೃತ ನಾಗರಿಕಳಾಗಿ ಅವಳು ಸಮಾಜದಲ್ಲಿ ಬಾಳಿ ಬೆಳೆಯ ಬಲ್ಲಳು.

**ಸ್ತ್ರೀ ಶಿಕ್ಷಣ:**

ವಿಚಾರಗಳೇನೋ ಬದಲಾದವು. ಪ್ರಗತಿಪರ ವಿಚಾರಗಳು ಪ್ರಸಾರ

ವಾದವು; ಆದರೆ ಸ್ತ್ರೀ ಶಿಕ್ಷಣವು ಮಾತ್ರ ಪ್ರಸಾರವಾಗಲಿಲ್ಲ. ನಮ್ಮ ನಾಡಿನಲ್ಲಿ ನೂರಕ್ಕೆ ನಾಲ್ಕರಷ್ಟು ಮಾತ್ರ ಸ್ತ್ರೀಯರು ಓದು ಬರೆಹ ಬಲ್ಲವರಿದ್ದಾರೆ. ಮನುಷ್ಯನಿಗೆ ದೇಹ ಪೋಷಣೆಗೆ ಆಹಾರ ಬೇಕು. ಜವನ ಪೋಷಣೆಗೆ ಶಿಕ್ಷಣ ಬೇಕು. ಸ್ತ್ರೀಗೆ ಶಿಕ್ಷಣವು ಅಗತ್ಯವಾಗಿ ಬೇಕು. ಸ್ತ್ರೀಯ ಹೊಣೆ ಹೆಚ್ಚಿನದು. ಮಗುವಿನ ಶಿಕ್ಷಣ ಆರಂಭವಾಗುವದು ಮನೆಯಲ್ಲಿಯೇ. ಶಾಲೆಯ ಪೂರ್ವ ಅವಧಿಯಲ್ಲಿ ಮಗುವು ತಾಯಿಯನ್ನೇ ಹೆಚ್ಚಾಗಿ ಅವಲಂಬಿಸುವದು. ಮಗುವಿನ ದೇಹ ಸ್ವಚ್ಛತೆ, ಬಟ್ಟೆಯ ಸ್ವಚ್ಛತೆ, ಆಹಾರ, ಆಟ ನೋಟಗಳು ಇವುಗಳ ಬಗೆಗೆ ತಾಯಿಯೇ ಎಚ್ಚರ ಪಡಬೇಕು. ಅಶಿಕ್ಷಿತ ತಾಯಿಯ ಕೈಯಲ್ಲಿ ಮಕ್ಕಳ ಆರೋಗ್ಯ ಕೆಡಬಹುದು; ಅವರ ಬೆಳವಣಿಗೆ ಕುಗ್ಗಬಹುದು. ಅಲ್ಲದೆ, ಮನೆಗೆಲಸಗಳಲ್ಲಿ ಅಚ್ಚುಕಟ್ಟುತನ ಇರಬೇಕು. ಸ್ತ್ರೀಯರಿಗೆ ಕಲಾಪೋಷಕ ಚಟುವಟಿಕೆಗಳು ಬೇಕು; ಎಂದರೆ ಅವರಲ್ಲಿ ಸಾಂಸ್ಕೃತಿಕ ಜೀವನದ ಕಲ್ಪನೆಯು ಉಂಟಾಗುವದು. ಸ್ತ್ರೀಯರಿಗೆ ಶಿಕ್ಷಣವು ಅಗತ್ಯವೆಂದು ಈಗ ಹೇಳುವ ಕಾಲ ಉಳಿದಿಲ್ಲ. ಮೂಲ ಶಿಕ್ಷಣವು ಈ ಮಾರ್ಗದಲ್ಲಿ ಮುಂದಡಿ ಇಟ್ಟಿದೆ.

**ಸಹ ಶಿಕ್ಷಣ:**

ಏಳು ವರುಷಗಳ ಮೂಲ ಶಿಕ್ಷಣವು ಪ್ರತಿಯೊಬ್ಬ ಬಾಲಕ ಬಾಲಕಿಯರಿಗೆ ಅವಶ್ಯವಾಗಿ ದೊರೆಯಬೇಕು. ಇಂದಿನ ಬಾಲಕನು ನಾಳಿನ ನಾಗರಿಕನು. ಇಂದಿನ ಬಾಲಿಕೆಯು ನಾಳಿನ ನಾಗರಿಕಳು. ಸ್ವತಂತ್ರ ಭಾರತದಲ್ಲಿ ಸ್ತ್ರೀ ಪುರುಷರಿಗೆ ಸಮಾನ ಹಕ್ಕುಗಳಿವೆ. ಸ್ತ್ರೀ ಪುರುಷರು ಕೂಡಿಯೇ ಬಾಳುವದು ಎಷ್ಟು ಅಗತ್ಯವಿದೆಯೋ, ಕೂಡಿ ಶಿಕ್ಷಣ ಪಡೆಯುವದೂ ಅಷ್ಟೇ ಅಗತ್ಯವು. ಆರಂಭದಿಂದಲೇ ಬಾಲಕ-ಬಾಲಿಕೆಯರನ್ನು ಬೇರೆ ಬೇರೆಯಾಗಿ ಇಡುವದು, ಅವರನ್ನು ಹಾಗೆ ಬೆಳೆಸುವದು ವಿಹಿತವಲ್ಲ. ಸಹ ಶಿಕ್ಷಣದಿಂದ ಮಕ್ಕಳಿಗೆ ಸಾಮಾಜಿಕ ಶಿಕ್ಷಣ ದೊರೆಯುವದು. ಸಮಾಜದಲ್ಲಿ ಮಕ್ಕಳು ಹೇಗೆ ನಡೆಯಬೇಕು? ಪರಸ್ಪರ ಸಹಕಾರ, ಸಹಿಷ್ಣುತೆ, ಸಮತೆ, ಈ ಗುಣಗಳು ಮಕ್ಕಳಲ್ಲಿ ಹೇಗೆ ನೆಲೆಗೊಳ್ಳಬೇಕು? ಅವು ಜೀವನ ಶಿಕ್ಷಣದ ಸಮಸ್ಯೆಗಳು. ಸಹ ಶಿಕ್ಷಣದಿಂದ ಈ ಸಮಸ್ಯೆಗಳನ್ನು ಸುಲಭವಾಗಿ ಬಿಡಿಸಬಹುದು; ಯಾಕಂದರೆ ಮಕ್ಕಳ ಜೀವಿಕೆಯ ಮುಖಾಂತರವೇ ಅವರ ಶಿಕ್ಷಣ

ನಡೆಯುವದು. ಸ್ತ್ರೀಯು ಕಲಾಜೀವಿ. ಮೂಲ ಶಿಕ್ಷಣ ಯೋಜನೆಯಲ್ಲಿ ಕೈಗಾರಿಕೆಗಳಿಗೆ ಮಹತ್ವದ ಸ್ಥಾನವಿದೆ. ಕಲೆಯು ಶಿಕ್ಷಣದ ಕೇಂದ್ರವು. ಸ್ತ್ರೀಜೀವನಕ್ಕೆ ಮೂಲ ಶಿಕ್ಷಣವು ಹೊಂದಿಕೆಯಾಗಿದೆ. ಇದಲ್ಲದೆ, ಸಾಮುದಾಯಿಕ ( Community ) ಜೀವನವು ಶಿಕ್ಷಣದ ಕ್ಷೇತ್ರವು. ಈ ಸಮೂಹದಲ್ಲಿ ಕೇವಲ ಬಾಲಕರೇ ಇರುವುದಾಗಲಿ, ಕೇವಲ ಬಾಲಿಕೆಯರೇ ಇರುವುದಾಗಲಿ ಒಳಿತಲ್ಲ. ಸ್ತ್ರೀ ಪುರುಷರು ಕೂಡಿ ಬಾಳನ್ನೆ ಸಾಗಿಸಬೇಕಾಗುವದು; ಆದ್ದರಿಂದ ಬಾಲಕ ಬಾಲಿಕೆಯರು ಕೂಡಿ ಬಾಳ ಶಿಕ್ಷಣ ಹೊಂದುವುದು ಅಗತ್ಯವು.

**ಆನಂದ ನಿಕೇತನ:**

ಸೇವಾಗ್ರಾಮದ ಆನಂದ ನಿಕೇತನದಲ್ಲಿ ೭-೧೪ ವಯಸ್ಸಿನ ವರೆಗೆ ಎಂದರೆ ಮೂಲ ಶಿಕ್ಷಣದ ಪೂರ್ಣ ಅವಧಿಯ ವರೆಗೆ ಬಾಲಕ ಬಾಲಿಕೆಯರು ಕೂಡಿಯೇ ಶಿಕ್ಷಣ ಹೊಂದುವರು. ಅಲ್ಲಿ ಮಕ್ಕಳ ಬಾಳಿನ ಮುಖಾಂತರವೇ ಅವರ ಶಿಕ್ಷಣ ನಡೆಯುವದು. ನೂಲುವ-ನೇಯುವ ಉದ್ಯೋಗವೇ ಮೂಲ ಉದ್ಯೋಗವು. ಬಾಲಿಕೆಯರು ಒಳ್ಳೇ ಉತ್ಸಾಹದಿಂದ ನೇಗಿಯ ಕೆಲಸ ಮಾಡುವರು. ಅವರಿಗೆ ಆ ಕೆಲಸವು ಜಡವೆಂದು ಎನಿಸುವದಿಲ್ಲ. ನೇಗಿಯ ಕೆಲಸದಲ್ಲಿ ಪ್ರಗತಿ ಹೊಂದಬೇಕಾದರೆ ಸಹನ ಗುಣವು ವ್ಯಕ್ತಿಯಲ್ಲಿ ಅಗತ್ಯವಾಗಿ ಬೇಕು. ನೂಲು ತೋಡುವಾಗ, ಕೆಚ್ಚುವಾಗ, ಎಳೆ ತುಂಬುವಾಗ ಗಂಡಸಿಗೆ ಒಮ್ಮೊಮ್ಮೆ ತಲೆಬೇಸರವಾಗುವದು; ಆದರೆ ಸ್ತ್ರೀಗೆ ಹಾಗಲ್ಲ. ಸ್ತ್ರೀಯು ಸ್ವಭಾವತಃ ಸಹನ ಮೂರ್ತಿ. ಆನಂದ ನಿಕೇತನದಲ್ಲಿ ಬಾಲಿಕೆಯರು ಕೆಲಸ ಮಾಡುವಾಗ ಇದನ್ನು ಪ್ರತ್ಯಕ್ಷ ಕಾಣಬಹುದು. ಕೈ ತೋಟದ ಕೆಲಸವು ಅಲ್ಲಿ ಪೂರಕ ಉದ್ಯೋಗವು. ಈ ಕೆಲಸಗಳಲ್ಲಿಯೂ ಬಾಲಿಕೆಯರು ಒಳ್ಳೇ ಉತ್ಸಾಹದಿಂದ ಕೆಲಸ ಮಾಡುವರು. ಅಡಿಗೆ, ಸ್ವಚ್ಛತಾ ಹಾಗೂ ಇತರ ಸಾಮೂಹಿಕ ಕೆಲಸಗಳನ್ನು ಬಾಲಕ-ಬಾಲಿಕೆಯರು ಕೂಡಿಯೇ ಮಾಡುವರು. ಮೂಲ ಶಿಕ್ಷಣದ ಸಮಗ್ರ ಅಭ್ಯಾಸ ಕ್ರಮವನ್ನು ಸಹ ಶಿಕ್ಷಣದ ಮುಖಾಂತರವೇ ಸಾಗಿಸಬೇಕೆಂಬುದು, ಸಾಗಿಸಲು ಸಾಧ್ಯವೆಂಬುದು ಆನಂದ ನಿಕೇತನವು ಸಿದ್ಧ ಮಾಡಿದೆ. ಮಕ್ಕಳ ಯೋಗ್ಯ ಪೋಷಣೆಯ ದೃಷ್ಟಿಯಿಂದಲೂ, ಸಮಾಜದ ಹಿತದ ದೃಷ್ಟಿ

ಯಿಂದಲೂ ಸಹ ಶಿಕ್ಷಣವೇ ಯೋಗ್ಯವೆಂದು ಶ್ರೀ ಆರ್ಯನಾಯಕಂ ಅವರು ಅಭಿಪ್ರಾಯ ಕೊಟ್ಟಿದ್ದಾರೆ. ಈ ವಿಚಾರವಲ್ಲಿ ಅವರ ಸಂಬಗೆ ಯಿದೆ. ಶಾಂತಿನಿಕೇತನದಲ್ಲಿಯೂ ಸಹ ಶಿಕ್ಷಣದ ಪ್ರಯೋಗವಿದೆ.

**ಸಹ ಶಿಕ್ಷಣದ ಲಾಭಗಳು:**

(೧) ಸ್ತ್ರೀ ಪುರುಷರಲ್ಲಿ ಸಮಭಾವ ಬೆಳೆಯುವದು. (೨) ಸ್ತ್ರೀಯರಲ್ಲಿ ಸ್ವಾವಲಂಬನ ಪ್ರವೃತ್ತಿ ಬೆಳೆಯುವದು. (೩) ಸ್ತ್ರೀಯರು ಸಮಾಜದಲ್ಲಿ ಬುದ್ಧಿವಂತರಾಗಿ ಬಾಳಿ ಬೆಳೆಯಲು ಅವಕಾಶ ದೊರೆಯುವದು (೪) ಸ್ತ್ರೀಯರಿಗೆ ಸಮಾಜದಲ್ಲಿಯ ತಮ್ಮ ಸ್ಥಾನ ಮಾನಗಳ ಅರಿವು ಉಂಟಾಗುವದು (೫) ಸಾಮುದಾಯಿಕ ಜೀವನದ ಫಲವಾಗಿ ಸ್ತ್ರೀಯರಿಗೆ ನವ ನಾಗರಿಕತೆಯ ಕಲ್ಪನೆ ಉಂಟಾಗುವದು (೬) ಕೈಗಾರಿಕೆ ಹಾಗು ಲಲಿತ ಕಲೆಗಳಲ್ಲಿ ಬಾಲಿಕೆಯರು ಬಾಲಕರಿಗಿಂತ ಮುಂದೆ ಹೋಗಬಲ್ಲರೆಂಬುದು ಪ್ರತ್ಯಕ್ಷ ತೋರಿ, ಬಾಲಿಕೆಯರಿಗೆ ಉತ್ತೇಜನ ದೊರೆಯುವದು. (೭) ಬಾಲಿಕೆಯರಿಗೆ ಸಾಂಸ್ಕೃತಿಕ ಜೀವನದ ಕಲ್ಪನೆ ಉಂಟಾಗುವದು (೮) ಪರಸ್ಪರ ಸಹಕಾರ, ಸ್ವಾವಲಂಬನ, ಆತ್ಮಸಂಯಮ, ಧೈರ್ಯ ಈ ಗುಣಗಳು ಬಾಲಿಕೆಯರಲ್ಲಿ ಉಂಟಾಗುವವು (೯) ಸಹಶಿಕ್ಷಣವು ಸ್ತ್ರೀಯರಲ್ಲಿ ಯೋಗ್ಯ ಮನೋವೃತ್ತಿಯನ್ನು ಉಂಟು ಮಾಡುವದು.

**ಅಭಿಪ್ರಾಯಗಳು:**

ಝುಕೀರ ಸಮಿತಿಯವರು ಏಳು ವರುಷಗಳ ಅವಧಿಯವರೆಗೆ ಸಹ ಶಿಕ್ಷಣವನ್ನು ಕಡ್ಡಾಯವಾಗಿ ಇಟ್ಟಿಲ್ಲ. "೧೪ನೆಯ ವರುಷ ಮುಗಿದ ನಂತರ ಹೆಣ್ಣು ಮಕ್ಕಳನ್ನು ಬೇರೆ ಇಡಲು ಪಾಲಕರು ಇಚ್ಛಿಸಿದಲ್ಲಿ, ಅವರು ಹಾಗೆ ಮಾಡಬಹುದು" ಎಂದು ಸ್ಪಷ್ಟ ಮಾಡಲಾಗಿದೆ. ಸಹಶಿಕ್ಷಣವು ರಶಿಯಾದಲ್ಲಿ ಸುಗಮವಾಗಿ ಸಾಗಿವೆ. ಬಿಯಾಟ್ರಿಸ್ ಕಿಂಗ ಅವರು ಸಹಶಿಕ್ಷಣದಿಂದ ರಶಿಯನ್ ತರುಣರಲ್ಲಿ ಲೈಂಗಿಕ ಅರಿವು ಮರೆಯಾಗುತ್ತಿದೆ ಎಂದೂ ಯೋಗ್ಯ ಮಾರ್ಗದಲ್ಲಿ ಲೈಂಗಿಕ ಸಂಬಂಧವು ಸ್ಥಿರಗೊಳ್ಳುವುದು ಎಂದೂ ಅಭಿ ಪ್ರಾಯ ವ್ಯಕ್ತ ಮಾಡಿದ್ದಾರೆ. ಆದರೆ ಸಾಮಾಜಿಕ ರೂಢಿಗಳು, ನೀತಿ ನಡಾವಳಿಗಳು ರಶಿಯನ್‌ರಿಗಿಂತ ನಮ್ಮವು ಬಹು ವಿಧವಾಗಿ ಭಿನ್ನವಾಗಿವೆ ಎಂದು ಕೆಲವರ ಮತ. ಆದರಿಂದ ಝುಕೀರ ಸಮಿತಿಯವರು ಈ ಪ್ರಶ್ನೆಯನ್ನು ಸಾರ್ವಜನಿಕರ

ಇಚ್ಛೆಗೆ ಬಿಟ್ಟಿರುವರೆಂದು ಕಾಣುತ್ತದೆ. ಸಹ ಶಿಕ್ಷಣಕ್ಕೆ ಇಸ್ಲಾಮ ಧರ್ಮವು ಮನ್ನಿಸುವದಿಲ್ಲೆಂದು ಕೆಲವರು ವಾದಿಸುವರು. ಅದರಂತೆ ಮಹಾತ್ಮಾಜಿಯ ವರಿಗೆ ಪತ್ರವೂ ಕಳಿಸಲಾಗಿತ್ತು. ಅದಕ್ಕೆ ಅವರು ಹರಿಜನದಲ್ಲಿ ಉತ್ತರ ಕೊಟ್ಟಿದ್ದಾರೆ. "ಸಹಶಿಕ್ಷಣಕ್ಕೆ ಎಷ್ಟು ಕಾರಣಗಳು ಅನುಕೂಲವಾಗಿವೆಯೋ, ಅಷ್ಟೇ ಕಾರಣಗಳು ಪ್ರತಿಕೂಲವಾಗಿವೆ ಎಂದು ನಾನು ತಿಳಿಯುತ್ತೇನೆ. ಶಕ್ಯವಿದ್ದಲ್ಲಿ ಈ ಪ್ರಯೋಗವನ್ನು ನಡೆಯಿಸಲಿಕ್ಕೆ ನಾನು ವಿರೋಧಿಸುವದಿಲ್ಲ"

**ಗಾಂಧೀಜಿ.**

'ನಾನು ಮುಫ್ತಿ ಅಲ್ಲ. ಆದರೆ ಕೆಲವೊಂದು ವಯಸ್ಸಿನ ವರೆಗೆ ಇಸ್ಲಾಮ ಧರ್ಮವು ಸಹಶಿಕ್ಷಣಕ್ಕೆ ಪರವಾನಗಿ ಕೊಟ್ಟಿದೆ ಎಂದು ನಾನು ನಂಬುತ್ತೇನೆ. ಸಾಧ್ಯವಾದಲ್ಲಿ ೧೦ ರ ಮೇಲ್ಪಟ್ಟ ವಯಸ್ಸಿನ ಮಕ್ಕಳನ್ನು ಪ್ರತ್ಯೇಕ ಸಾಲೆಗಳಲ್ಲಿಡಬಹುದು."

**ಡಾ. ಝಾಕೀರಹುಸೇನ.**

ಸ್ತ್ರೀಪುರುಷರ ದೇಹರಚನೆಯಲ್ಲಿ ಭಿನ್ನತೆಯಿದೆ. ತುಸುಮಟ್ಟಿಗೆ ಮಾನಸಿಕ ಭೇದಗಳೂ ಒಡೆದು ಕಾಣುವವು. ಅಲ್ಲದೆ ಸ್ತ್ರೀಗೆ ಕೊಡುವ ಶಿಕ್ಷಣದ ಉದ್ದಿಷ್ಟಗಳೂ ಕೆಲವು ಬೇರೆ ಇವೆ. ಮನೆತನದ ಒಳ ಆಡಳಿತ ನಡೆಸುವುದು, ಮಕ್ಕಳನ್ನು ಹಡೆಯುವದು ಹಾಗು ಜೋಪಾನ ಮಾಡುವದು ಸ್ತ್ರೀ ಜೀವನಕ್ಕೆ ಹೊಂದಿಕೆಯಾಗುವ ಮುಖ್ಯ ಕೆಲಸಗಳು; ಇವುಗಳಲ್ಲಿ ಅವರಿಗೆ ಯೋಗ್ಯ ಶಿಕ್ಷಣ ದೊರೆಯಬೇಕು. ಅದರಿಂದ ತಾಯ್ತನ(Mother Craft) ಮನೆಗೆಲಸ(House Craft) ಇವು ಮೂಲಕ ಉದ್ಯೋಗಗಳಾಗಬೇಕು. ಮೇಲಿನ ವರ್ಗದಲ್ಲಿ ಬಾಲಿಕೆಯರಿಗೆ ಈ ವಿಷಯಗಳನ್ನೆಲ್ಲ ಕೇಂದ್ರವಾಗಿಟ್ಟು ಇತರ ವಿಷಯಗಳನ್ನು ಕಲಿಸುವದು ಒಳಿತು. ಈ ಸಂಗತಿಯನ್ನು ನಾವು ಲಕ್ಷಕ್ಕೆ ತಂದುಕೊಂಡರೆ ೧೦ ವರುಷದ ವರೆಗೆ ಎಂದರೆ ೪ ನೆಯ ವರ್ಗದವರೆಗೆ ಬಾಲಕ ಬಾಲಿಕೆಯರನ್ನು ಕೂಡಿಯೇ ವಿದ್ಯಾಭ್ಯಾಸ ಮಾಡುವದು ಅಗತ್ಯವು. ನಂತರ ೫-೬-೭ನೇ ವರ್ಗಗಳಲ್ಲಿ ಬಾಲಕ ಬಾಲಿಕೆಯರನ್ನು ಪ್ರತ್ಯೇಕಿಸಬಹುದು. ಮನೆಗೆಲಸ, ತಾಯ್ತನ, ಹೊಲಿಗೆಯ ಕೆಲಸ ಇವುಗಳಲ್ಲಿ ಬಾಲಿಕೆಯರಿಗೆ ವಿಶೇಷ ತರಬೇತಿ ಕೊಡಬೇಕು. ಇದು ಅನೇಕರ ಮತವಿದೆ ಎಂದು ಹೇಳಬಹುದು. ಆದರೆ ಪುರೋಗಾಮಿ ಶಿಕ್ಷಣ ತಜ್ಞರ ಅಭಿಪ್ರಾಯ ಹಾಗಿಲ್ಲ. ನಾನೆಯ ಸ್ವಚ್ಛತೆ, ಸಾ

ಮಾನುಗಳನ್ನು ಅಚ್ಚುಕಟ್ಟುತನದಿಂದ ಇಡುವದು, ಅಡಿಗೆಮಾಡುವದು, ಮನೆಯ ವೆಚ್ಚದ ಲೆಕ್ಕ ಪತ್ರ ಇಡುವದು, ಮಕ್ಕಳ ಆರೈಕೆ ಮಾಡುವದು, ಬೇನೆಯವರನ್ನು ಉಪಚರಿಸುವದು, ಪ್ರಥಮ ಚಿಕಿತ್ಸೆ, ಸಮಾಜದಲ್ಲಿ ವ್ಯಕ್ತಿಯ ಸ್ಥಾನ, ನಾಗರಿಕತೆಗೆ ಅವಶ್ಯಕ ಸಾಮಾನ್ಯ ಜ್ಞಾನ ಇವುಗಳನ್ನು ಬಾಲಕ ಬಾಲಿಕೆಯರು ಕೂಡಿಯೇ ಕಲಿಯಬೇಕೆಂಬುದು ಶ್ರೀ. ಆರ್ಯನಾಯಕಂ ಅವರ ಅಭಿಪ್ರಾಯವಿದೆ. ಬಾಳು ಶಿಕ್ಷಣದ ಪರಿಚಯವು ಬಾಳಿನಿಂದಲೇ ದೊರೆಯಬೇಕು. ಮಕ್ಕಳು ಅನೈತಿಕ ಮಾರ್ಗದಲ್ಲಿ ಬೀಳಬಹುದೆಂಬದು ಒಂದು ದೊಡ್ಡ ಭಯವಿದೆ; ಆದರೆ ಬಾಲಕ-ಬಾಲಿಕೆಯರನ್ನು ಪ್ರತ್ಯೇಕಿಸುವದರಿಂದಲೂ, ಲೈಂಗಿಕ ಶಿಕ್ಷಣವನ್ನು ಅವರಿಗೆ ಕೊಡದೆ ಇರುವದರಿಂದಲೂ ಈ ಭಯವು ದೂರಾಗುವದಿಲ್ಲವೆಂದು ಶ್ರೀಮತಿ ಉಮಾ ನೆಹರು ಅವರು ಸ್ಪಷ್ಟವಾಗಿ ಹೇಳಿದ್ದಾರೆ. ಲೈಂಗಿಕ ಶಿಕ್ಷಣ(Sex Education) ವಿಲ್ಲದೆ ಶೀಲ ಶಿಕ್ಷಣವು ಪೂರ್ತಿಯಾಗುವದಿಲ್ಲವೆಂದು ಡಾ. ಪಿ. ಜಿ. ಭಾಗವತ ಅವರು ಹೇಳಿದ್ದಾರೆ. ಮದುವೆಯ ಮುಂಚೆ ಲೈಂಗಿಕಶಿಕ್ಷಣದ ಅವಶ್ಯಕತೆಯುಳ್ಳವೆಂದು ಬಹುಜನರು ತಿಳಿಯುತ್ತಾರೆ. ಜೀವನ ಸನ್ನಿವೇಶಗಳ ಮುಖಾಂತರ ಮಕ್ಕಳಿಗೂ ಶಿಕ್ಷಣ ಕೊಡುವದು ಮೂಲ ಉದ್ದಿಶ್ಯವು; ಎಂದ ಮೇಲೆ ಲೈಂಗಿಕ ಶಿಕ್ಷಣವನ್ನು ಕೊಡದಿರುವದು ತಪ್ಪು. ಮನುಷ್ಯನಲ್ಲಿ ಹುದುಗಿದ ಶಕ್ತಿಯುತ ಸಹಜ ಪ್ರವೃತ್ತಿಯ ಬಗೆಗೆ ಯೋಗ್ಯ ದಾರಿ ತೋರಿಸದಿದ್ದರೆ ತೆರೆಯ ಮರೆಯಲ್ಲಿ ಅನಾಹುತ ಘಟನೆಗಳು ಸಂಭವಿಸಬಹುದು. ತರುಣರಲ್ಲಿ ಕುತೂಹಲ ಕವರಿ, ತಂದೆ-ತಾಯಿಗಳಿಂದ ದೊರೆಯದ ಜ್ಞಾನವನ್ನು ಗೆಳೆಯರಿಂದ ಕಲಿಯಲು ಯತ್ನಿಸುವರು. ಲೈಂಗಿಕ ಶಿಕ್ಷಣವು ಅಯೋಗ್ಯವಾದುದೆಂಬ ಭಾವನೆಯೇ ಬೆಳೆದು ಸ್ತ್ರೀ ಪುರುಷರಲ್ಲಿ ಸ್ವಾಭಾವಿಕ ಹಾಗು ಸುಂದರ ಬಾಂಧವ್ಯವೇ ಬಾಡುವದು. ಶರೀರ ವಿಜ್ಞಾನವನ್ನು ಕಲಿಸುವಾಗ ಲೈಂಗಿಕ ಆರೋಗ್ಯ(Sex Hygiene)ವನ್ನು ಕಲಿಸುವದು ಒಳ್ಳೆಯದು. ಸಕಾಲಕ್ಕೆ ಲೈಂಗಿಕ ಶಿಕ್ಷಣವನ್ನು ಕೊಟ್ಟರೆ ಮುಂಬರುವ ಅನೇಕ ತೊಡಕುಗಳನ್ನು ಚಿಗುರುತ್ತಿರುವಾಗಲೇ ಚಿವುಟಿದಂತಾಗುವದು. ಈ ಸಮಸ್ಯೆಯನ್ನು ಬಿಡಿಸಲು ಸಹಶಿಕ್ಷಣವು ಅತ್ಯಂತ ಸಹಾಯಕವಾಗಿದೆ.

---

# ೧೫. ಶಾರೀರಿಕ ಶಿಕ್ಷಣ

ಶಾರೀರಕ ಶಿಕ್ಷಣವೆಂದರೆ ಶರೀರದ ಶಿಕ್ಷಣವೆಂದು ಬಹುಕಾಲದಿಂದ ನಂಬಲಾಗಿದೆ. ಶರೀರದ ಅಂಗಗಳು ಉತ್ಕೃಷ್ಟವಾಗಿಯೂ, ಪ್ರಮಾಣಬದ್ಧವಾಗಿಯೂ ಬೆಳೆಯಬೇಕೆಂದು ಎಲ್ಲರೂ ಬಯಸುವರು. ಶರೀರದ ಅಚ್ಚುಕಟ್ಟುತನಕ್ಕೆ ಮೆಚ್ಚಿದ ಕಲಾಸ್ಮೃತಿಗಳನ್ನು ಜಗತ್ತಿನಲ್ಲಿ ಕಾಣಬಹುದು. ಗ್ರೀಕರ ಶಿಲ್ಪಕಲೆಯು ಸೌಂದರ್ಯದ ಪ್ರತೀಕವಾಗಿದೆ. ಶರೀರವು ಸುಂದರವಾಗಬೇಕೆಂದು ಸರ್ವಗ್ರಾಹ್ಯವಾಯಿತು. ದೇಶ ರಕ್ಷಣೆಗೆ, ಮಾನರಕ್ಷಣೆಗೆ ದೇಹ ಪೋಷಣೆಯು ಅಗತ್ಯವಾಯಿತು. ದೇಹ ಧಾರ್ಢ್ಯದಿಂದ ಧೈರ್ಯಶೌರ್ಯಗಳು ಉಂಟಾಗುವವು. ಕಷ್ಟಸಷ್ಟಗಳನ್ನು ಸಹಿಸಲು ಮನುಷ್ಯನು ಸಮರ್ಥನಾಗುವನು. ತ್ಯಾಗ ಬುದ್ಧಿಯು ಬೆಳೆಯುವದು; ಪರೋಪಕಾರ ಸ್ಫುಟಗೊಳ್ಳುವದು; ಪುರುಷಾರ್ಥ ನೆಲೆಸುವದು. ಅದರಿಂದ "ಶರೀರಮಾದ್ಯಂ ಖಲು ಧರ್ಮ ಸಾಧನಂ" ಎಂದು ಹಿರಿಯರು ಹೇಳುವರು. ನಿಜವಾದ ಧಾರ್ಮಿಕ ಜೀವಿಗೆ ಶರೀರ ಪೋಷಣೆಯು ಅಗತ್ಯ. ಮನುಷ್ಯತ್ವವನ್ನು ತಂದು ಕೊಡುವ ಧರ್ಮವು ಬೇಕೆಂದು ಶ್ರೀ. ಸ್ವಾಮಿ ವಿವೇಕಾನಂದರು ಹೇಳಿದ ಮಾತಿನಲ್ಲಿ ಪುರುಷಾರ್ಥದ ಕಲ್ಪನೆಯಿದೆ.

**ಹೊಸ ದೃಷ್ಟಿ:**

ದೇಹ ಪೋಷಣೆಗಾಗಿ ವ್ಯಾಯಾಮ, ಅಂಗಸಾಧನ, ಶರೀರ ಸಂಸ್ಕೃತಿ ಎಂಬ ಹೆಸರುಗಳಿಂದ ಬೇರೆ ಬೇರೆ ಕ್ರಮಗಳು ರೂಢವಾದವು. ಸ್ನಾಯುಗಳನ್ನು ಬಲಪಡಿಸುವದು, ದೇಹದ ಅಂಗಗಳನ್ನು ಪುಷ್ಟಿಗೊಳಿಸುವದು ಈ ಕ್ರಮಗಳ ಉದ್ದಿಶ್ಯಗಳು. ಆ ಕ್ರಮಗಳು ಮನುಷ್ಯನ ದೇಹವನ್ನು ಬೆಳೆಸುವ ಸಾಧನಗಳು ಮಾತ್ರ; ಅವು ವ್ಯಕ್ತಿಯ ಶಿಕ್ಷಣದ ಸಾಧನಗಳಲ್ಲ. ಇತ್ತೀಚೆಗೆ ಶಾರೀರಕ ಶಿಕ್ಷಣದ ಬಗೆಗೆ ಹೊಸ ದೃಷ್ಟಿಯುಂಟಾಗಿದೆ. "ಶಾರೀರಕ ಶಿಕ್ಷಣವು ಶರೀರದ ಶಿಕ್ಷಣವು ಮಾತ್ರವಲ್ಲ; ಅದು ಶಾರೀರಕ ಚಟುವಟಿಕೆಯ ಮುಖಾಂತರ ಮಗುವಿಗೆ ಕೊಡಬೇಕಾದ ಶಿಕ್ಷಣವು," ಪ್ರೊ. ವಿಲಿಯಮ್ಸ್. ಇದು ಪ್ರಗತಿಪರ ವಿಚಾರವು. ಆಧುನಿಕ ಶಿಕ್ಷಣ ತಜ್ಞರ ವಿಚಾರಸರಣಿಯನ್ನೇ ಅನುಸರಿಸಲಾಗಿದೆ.

ಮೂಲ ಶಿಕ್ಷಣ ಪುರಸ್ಕರ್ತರು ಈ ವಿಚಾರವನ್ನೇ ಮುಂದುವರಿಸಿದ್ದಾರೆ.

ಮಗುವಿನ ಸಮವಾಯ ವಿಕಾಸದಲ್ಲಿ ಅವರ ಶ್ರದ್ಧೆಯಿದೆ. ಮಗುವಿನ ದೇಹ–ಮನಸ್ಸುಗಳು ಒಂದಕ್ಕೊಂದು ಪೂರಕವಾಗಿವೆ; ಅವು ಪರಸ್ಪರ ಪೋಷಕವಾಗಿ ಬೆಳೆಯುತ್ತವೆ. ಮಗುವು ಇಡಿಯಾಗಿ ಬೆಳೆಯುವದು. ಕಸಗೂಡಿಸುವಾಗ, ನೀರು ಜಗ್ಗುವಾಗ, ಆಗಿಗಳನ್ನು ಹಚ್ಚುವಾಗ. ನೂಲುವಾಗ, ನೇಯುವಾಗ ಮಕ್ಕಳ ಶಾರೀರಕ ಹಾಗು ಬೌದ್ಧಿಕ ಬೆಳವಣಿಗೆಗೆ ಸಾಕಷ್ಟು ಅವಕಾಶವುಂಟು. ಮಕ್ಕಳ ನಿತ್ಯಜೀವನದ ಚಟುವಟಿಕೆಗಳೆಲ್ಲ ಶಿಕ್ಷಣದ ಸಾಧನಗಳು; ಎಂದ ಮೇಲೆ ದೇಹ-ಮನಸ್ಸುಗಳೆರಡೂ ಕೂಡಿಯೇ ಬೆಳೆಯಲು ಅನುವು ಕೊಡಲಾಗಿದೆ.

**ಆಕ್ಷೇಪಣೆಗೆ ಉತ್ತರ:**

ವರ್ಧಾ ಶಿಕ್ಷಣ ಯೋಜನೆಯಲ್ಲಿ ಶಾರೀರಕ ಶಿಕ್ಷಣಕ್ಕೆ ತಕ್ಕ ಸ್ಥಾನ ಕೊಟ್ಟಿಲ್ಲವೆಂದು ಕೆಲವರ ಆಕ್ಷೇಪಣೆಯಿದೆ. ಇದಕ್ಕೆ ಮೂಲ ಕಾರಣವೆಂದರೆ, ಝುಕೀರ ವರದಿಯಲ್ಲಿ ತೋರಿಸಿದ ವೇಳಾ ಪತ್ರಕದಲ್ಲಿ ೧೦ನಿಮಿಷ ಕೊಡಲಾಗಿದೆ. ಆದರಿಂದ ಶಾರೀರಕ ಶಿಕ್ಷಣವನ್ನು ಅಲಕ್ಷಿಸಲಾಗಿದೆ ಎಂದು ಆರೋಪ ಕೊಟ್ಟಿದ್ದಾರೆ. ಯೋಜನೆಯ ಪುರಸ್ಕರ್ತರಿಗೆ ಶಾರೀರಕ ಶಿಕ್ಷಣದ ಮಹತ್ವವು ಗೊತ್ತಿಲ್ಲವೆಂದಲ್ಲ. ಅವರೂ ದೃಢಕಾಯದ ಮಕ್ಕಳೇ ಬೇಕೆಂದು ಅನ್ನುವರು. ಈ ಪ್ರಸಂಗದಲ್ಲಿ ಶ್ರೀ. ಬಾಬುಲಾಲ ಗುಪ್ತ ಅವರು "ಹುಡುಗರು ಅಲ್ಪಾವಧಿ ವಿಶ್ರಾಂತಿಯ ಸಮಯದಲ್ಲಿ ತಮ್ಮ ಇಚ್ಛಿತ ಆಟಗಳನ್ನು ಆಡುತ್ತಾರೆ. ಕಾರಣ ಶಾರೀರಿಕ ಶಿಕ್ಷಣಕ್ಕೆ ೨೦ ನಿಮಿಷಗಳು ದೊರೆತಂತಾದವು," ಎಂದು ಉತ್ತರ ಕೊಟ್ಟಿದ್ದಾರೆ. ಇದು ಸಮರ್ಪಕವಲ್ಲ. ವಿಶ್ರಾಂತಿ ಸಮಯದಲ್ಲಿ ಹುಡುಗರು ಇತರ ಕೆಲಸಗಳನ್ನು ಮಾಡುವರು; ಕೆಲವರು ಮಲಮೂತ್ರ ವಿಸರ್ಜನೆಗೆ ಹೋಗುವರು. ಅಲ್ಲದೆ ಹುಡುಗರು ತಾವೇ ಆಡಿದ ಆಟಗಳಿಗೆ ಶೈಕ್ಷಣಿಕ ಮಹತ್ವ ಬರುವದಿಲ್ಲ; ವ್ಯಾಯಾಮ ದೊರೆಯಬಹುದು; ಅದು ಶಿಕ್ಷಣವಲ್ಲ. ಶಿಕ್ಷಕರ ಮೇಲ್ವಿಚಾರಣೆಯಲ್ಲಿಯೇ ಮಕ್ಕಳು ಆಡಬೇಕು; ಆಡುತ್ತ ಹೊಸ ಸಂಗತಿಗಳನ್ನು ಕಲಿಯಬೇಕು. ಆಟಗಳೇ ಪಾಠಗಳಾಗಬೇಕು. ಕಾಲ್ಡವೆಲ್ ಕುಕ್ ಅವರು– ವರ್ಗದ ಕೋಣೆಯು ಆಚ್ಛಾದನವಿದ್ದ ಆಟದ ಬಯಲು; ಆಟದ ಬಯಲು ಆಚ್ಛಾದನವಿಲ್ಲದ ವರ್ಗದ ಕೋಣೆ,"

ಎಂದು ಹೇಳಿರುವರು. ವರ್ಗದ ಕೋಣೆಯಲ್ಲಿ ಮಾಡುವ ಕೆಲಸಗಳಿಗೆ ಆಟದ ಸ್ವರೂಪ ಕೊಡಬೇಕು; ಎಂದರೆ ಮಕ್ಕಳು ಸ್ವಯಂ ಸ್ಫೂರ್ತಿಯಿಂದ, ಪ್ರೇಮ ದಿಂದ ಕೆಲಸಗಳನ್ನು ಮಾಡುತ್ತಿರಬೇಕು. ಹೀಗಾದರೆ, ಕೆಲಸವು ಮಕ್ಕಳಿಗೆ ಆಟವೆಂದು ಪರಿಣಮಿಸುವದು. ಮಕ್ಕಳೇ ಈಗ ನೀವು ಆಡಬೇಕು ಎಂದು ಶಿಕ್ಷ ಕನು ಹೇಳಿದಾಗ, ಆಟವು ಕೆಲ ಬಾಲಕರಿಗೆ ಕೆಲಸವೆಂದು ಪರಿಣಮಿಸುವದು; ಯಾಕಂದರೆ ಅವರು ಸ್ವಯಂಸ್ಫೂರ್ತಿಯಿಂದ ಆಟದಲ್ಲಿ ಭಾಗವಹಿಸುವದಿಲ್ಲ. **ಆಟ** ಮತ್ತು **ಕೆಲಸ** ಇವುಗಳ ಸೂಕ್ಷ್ಮ ಭೇಧವನ್ನು ಆಧುನಿಕ ಮನಶ್ಶಾಸ್ತ್ರ ಜ್ಞರು ತಿಳಿಸಿದ್ದಾರೆ. ಮೂಲ ಶಿಕ್ಷಣ ಶಾಲೆಗಳಲ್ಲಿ ಈ ಹೊಸ ವಿಚಾರವು ಸೇರಿದೆ. ಆಟಗಳು ಮಕ್ಕಳ ಸಹಜ ಪ್ರವೃತ್ತಿಗಳ ವ್ಯಕ್ತತೆಗೆ ಅನುವು ಕೊಡುತ್ತವೆ. ಸೌಹಾರ್ದ ಭಾವ, ಸಹನಶೀಲತೆ, ಸಹಕಾರ, ಸರಳತನ ಮುಂತಾದ ಸದ್ ಭಾವನೆಗಳು ಮಕ್ಕಳಲ್ಲಿ ನೆಲೆಗೊಳ್ಳುವದು ಆಟದ ಬಯಲಿ ನಲ್ಲಿಯೇ. ಮೂಲಶಿಕ್ಷಣ ಯೋಜನೆಯ ಪುರೋಹಿತರು ಈ ಸಂಗತಿ ಯನ್ನು ಒಪ್ಪುವರು. ಝಾಕೀರ ವರದಿ:

"ಯೋಜನೆಯಲ್ಲಿ ಆಟಕ್ಕೆ ಪ್ರತ್ಯೇಕ ಹಾಗು ನಿರ್ದಿಷ್ಟ ಸ್ಥಾನವನ್ನು ನಾವು ಕೊಟ್ಟಿಲ್ಲ; ಯಾಕಂದರೆ ಮುಖ್ಯವಾಗಿ ಅದು ಅಭ್ಯಾಸ ಪತ್ರಿಕಾತೀತ ಚಟುವಟಿಕೆಯು. ಅಭ್ಯಾಸ ಪತ್ರಿಕೆಯ ಆವಶ್ಯಕ ಭಾಗವನ್ನಾಗಿ ಅದು (ಆಟವು) ಸೇರಿಸಲ್ಪಟ್ಟರೆ, ಅದರಲ್ಲಿದ್ದ ಸ್ವಯಂಸ್ಫೂರ್ತಿ ಮಾಯವಾಗುವದು ಮತ್ತು ಮನಶ್ಶಾಸ್ತ್ರದ ದೃಷ್ಟಿಯಿಂದ ಅದು ಆಟವಾಗುವದಿಲ್ಲ."

ಆಟಗಳಿಗೆ ಸ್ಥಾನ ಕೊಟ್ಟಿದೆ ಎಂಬುದೇನೋ ನಿಜ. ಆದರೆ ವೇಳಾ ಪತ್ರಿಕೆಯಲ್ಲಿ ಆಟಕ್ಕೆ ಸಮಯ ಕೊಟ್ಟರೆ, ಆಟದ ಮಹತ್ವವು ಕಡಿಮೆ ಯಾಗುವದು, ಅರ್ಥಾತ್ ಸ್ವಯಂಸ್ಫೂರ್ತಿ ಮಾಯವಾಗುವದು ಎಂದು ತಿಳಿಯುವದು ಅಷ್ಟೊಂದು ಸರಿ ತೋರುವದಿಲ್ಲ. ಶಾರೀರಿಕ ಶಿಕ್ಷಣದ ಬಗೆಗೆ ಆಸ್ಥೆಯುಳ್ಳವರೆಲ್ಲ ವೇಳಾಪತ್ರಿಕೆಯಲ್ಲಿ ಶಾರೀರಿಕ ಶಿಕ್ಷಣಕ್ಕೆ ಪ್ರತ್ಯೇಕ ಸ್ಥಾನವನ್ನು ಕೊಡಬೇಕೆಂದು ಹೇಳುತ್ತಾರೆ. ಮೂಲ ಶಿಕ್ಷಣ ಶಾಲೆಗಳಲ್ಲಿ ದಿನಾಲು ಈಗ ಅರ್ಧಗಂಟೆ ಶಾರೀರಿಕ ಶಿಕ್ಷಣದ ಕಾರ್ಯಕ್ರಮಗಳು ನಡೆಯು ವವು. ಉಪಕರಣಗಳಿಲ್ಲದ ಆಟಗಳು, ಲೋಕನೃತ್ಯ, ತಾಳಬದ್ಧ ಕವಾ ಯತು ಇತ್ಯಾದಿ ಚಟುವಟಿಕೆಗಳು ನಡೆಯುವವು.

ಬಾಳು ಶಿಕ್ಷಣವು ಮೂಲಶಿಕ್ಷಣದ ಮೂಲ ಉದ್ದಿಶ್ಯವಾದುದರಿಂದ ಮಕ್ಕಳ ನಿತ್ಯ ಚಟುವಟಿಕೆಗಳಲ್ಲಿ ದೈಹಿಕ ಶ್ರಮವು ಸಾಕಷ್ಟು ಆಗುವದು. ಅದರಿಂದ ಸ್ವಚ್ಛಂದ ಆಟಗಳಿಗಾಗಿ ಅರ್ಧಗಂಟೆ ಕೊಡಲಾಗಿದೆ. ಈ ಸಂಗತಿಗಳನ್ನೆಲ್ಲ ಸರಿಯಾಗಿ ಅರ್ಥ ಮಾಡಿಕೊಂಡರೆ, ಮೂಲ ಶಿಕ್ಷಣ ಯೋಜನೆಯಲ್ಲಿ ಶಾರೀರಿಕ ಶಿಕ್ಷಣಕ್ಕೆ ತಕ್ಕ ಪ್ರಾಶಸ್ತ್ಯ ಕೊಡಲಾಗಿದೆ ಎಂಬುದು ತಿಳಿಯದಿರಲಾರದು.

ಇತ್ತೀಚೆಗೆ ಸಾಮಾಜಿಕ ಶಿಕ್ಷಣವು ಭರದಿಂದ ಸಾಗಿದೆ. ಗ್ರಾಮ ನೈರ್ಮಲ್ಯ, ರೋಗ ನಿವಾರಣೆ, ಗೊಬ್ಬರ, ಜತನ, ಗಿಡಗಳ ಪೋಷಣೆ. ಆಹಾರ ಸಾಮಗ್ರಿಗಳ ರಕ್ಷಣೆ, ಮೊದಲಾದ ಚಟುವಟಿಕೆಗಳಲ್ಲಿಯೂ ಮಕ್ಕಳು ಆಸ್ಥೆಯಿಂದ ಕೆಲಸ ಮಾಡಬೇಕಾಗಿದೆ. ಇದರಿಂದ ಶಾರೀರಿಕ ಶ್ರಮದ ಕೆಲಸಗಳು ಹೆಚ್ಚಾಗಿವೆ.

ಶಾಲೆಯ ವಾರ್ಷಿಕೋತ್ಸವ, ಮಕ್ಕಳ ದಿನ, ಪಾಲಕರ ದಿನ, ಆರೋಗ್ಯ ಸಪ್ತಾಹ, ಮೊದಲಾದ ವಿಶೇಷ ಪ್ರಸಂಗಗಳಲ್ಲಿ ಶಾರೀರಿಕ ಶಿಕ್ಷಣಕ್ಕೆ ಸಂಬಂಧ ಪಟ್ಟ ವಿಶೇಷ ಚಟುವಟಿಕೆಗಳನ್ನು ಮಕ್ಕಳಿಗೆ ಕಲಿಸಬಹುದು.



# ೧೬. ಕ್ರಿಯಾತ್ಮಕ ಶಿಕ್ಷಣ

ನಿಷ್ಕ್ರಿಯ ಶಿಕ್ಷಣವು ಮರಣಕ್ಕಿಂತ ಕೀಳೆಂದು ಶ್ರೀ. ಸ್ವಾಮಿ ವಿವೇಕಾನಂದರು ಹೇಳಿದರು. ಚಟುವಟಿಕೆಯು ಜೀವನದ ಚೇತನ ಸ್ವರೂಪವು. ಯಾವುದೊಂದು ಪ್ರಾಣಿಯಲ್ಲಿ ಚಲನವಲನಗಳು ತೋರದಿದ್ದರೆ, ಅದು ನಿಸ್ಸತ್ವವಾಗಿದೆ, ನಿರ್ಜೀವವಾಗಿದೆ, ಮರಣೋನ್ಮುಖಿಯಾಗಿದೆ ಎಂದು ಹೇಳಬಹುದು. ಚಲನೆಯು ಜೀವನದ ಸಾಕಾರ ಸ್ವರೂಪ. ಜೀವಿಯ ಜೀವಾಳ. ಚಲನೆರಹಿತವಾದುದು ನಿಸ್ಸತ್ವವಾದುದು, ನಿರ್ಜೀವವಾದುದು. ಜೀವಿಯ ನಿಯಮಕ್ಕೆ ಯಾವುದು ಹೊಂದಿಕೆಯಾಗುವದೋ ಅದು ಶಿಕ್ಷಣಕ್ಕೂ ಹೊಂದಿಕೆಯಾಗುವದು. ಜೀವಿಯು ಜೀವನದ ಮುಖಾಂತರವೇ ಜೀವನ ಶಿಕ್ಷಣ ದೊರೆಯುವದು ಎಂದ ಮೇಲೆ ನಿಜವಾದ ಶಿಕ್ಷಣವು ಕ್ರಿಯಾತ್ಮಕವಾದುದು. ಕ್ರಿಯಾ ರಹಿತ ಶಿಕ್ಷಣವು ಸುಳ್ಳು ಶಿಕ್ಷಣವು: ಅದು ನಿಸ್ಸಾರವಾದುದು, ನಿಸ್ತೇಜವಾದುದು. ಆದುದರಿಂದಲೇ "ಈಗಿನ ಶಿಕ್ಷಣದಿಂದ ಸಿದ್ಧವಾಗುವದು ಸಾವೇ" ಎಂದು ವಿನೋಬಾಜಿ ಹೇಳಿದರು.

**ಸಜೀವ ಶಿಕ್ಷಣ:**

ಜೀವಿಯ ಶಿಕ್ಷಣವು ಸಜೀವ ಮಾರ್ಗದಿಂದ ದೊರೆಯಬೇಕಾದರೆ, ಅದು ಕ್ರಿಯಾತ್ಮಕವಾದುದು ಇರಬೇಕು. ಇದು ಮೊದಲ ಲಕ್ಷಣ. ಮಕ್ಕಳ ನಿತ್ಯದ ಚಟುವಟಿಕೆಗಳೆಲ್ಲ ಶಿಕ್ಷಣದ ಸಾಧನಗಳಾಗಬೇಕು; ಎಂದರೆ ಶಿಕ್ಷಣವೂ ಜೀವನವೂ ಕೂಡಿಯೇ ಸಾಗುವವು. ಮಕ್ಕಳಿಗೆ ಸಜೀವ ಶಿಕ್ಷಣ ಸಿಗುವದು. ನಮ್ಮ ಶಾಲೆಗಳಲ್ಲಿ ಹೊಸ ಕಳೆ ತುಂಬುವದು. ಮಕ್ಕಳು ಕೈ ಕಟ್ಟಿಕೊಂಡು ಕವಿತೆಗಳನ್ನು ಅನ್ನುವದನ್ನು ನೋಡಿದರೆ, ನಮ್ಮ ಶಾಲೆಯಲ್ಲಿ ನಿರ್ಜೀವತೆ ಎಷ್ಟು ಮಟ್ಟಿಗೆ ತುಂಬಿದೆ ಎಂಬುದು ಸ್ಪಷ್ಟವಾಗುವದು. ಉತ್ತಮ ಶಾಲೆ ಯಾವುದು ಎಂದು ಯಾರನ್ನಾದರೂ ಕೇಳಿದರೆ, ಎಲ್ಲಿ ಮಕ್ಕಳು ಸುಮ್ಮನೆ ಕುಳಿತು, ಪಾಠಗಳನ್ನು ಓದುವರೋ, ಎಲ್ಲಿ ಸಪ್ಪಳವಿಲ್ಲದೆ ವಿದ್ಯಾಭ್ಯಾಸ ಸಾಗುವದೋ, ಅದು ಉತ್ತಮ ಶಾಲೆಯೆಂದು ಅವರು ತಟ್ಟನೆ ಹೇಳಬಹುದು. ನಿಜವಾಗಿ ನೋಡಿದರೆ, ಅದು ಉತ್ತಮ ಶಾಲೆಯಲ್ಲ; ಅದು ಉತ್ತಮ ಸೆರೆಮನೆ; ಯಾಕಂದರೆ ಮಕ್ಕಳ ಸ್ವಭಾವಕ್ಕೆ ವಿರುದ್ಧವಾದ ಸಂಗತಿಗಳೇ ಇವು. ಕೃತಿ ಶಾಲೆಯ ತಾತ ಎಂದು ಹೆಸರಾದ

**ಅಡಾಲ್ಫ ಫೆರಿಯೆರ ಅವರು:**

"ಮಗುವಿನ ದೇಹ, ಮನಸ್ಸುಗಳ ಮೇಲೆ ಬಲಾತ್ಕಾರ ಮಾಡುವದನ್ನು ನಾವು ಇನ್ನು ಸಹಿಸಕೂಡದು. ಅದರಿಂದ ಮಗುವಿನ ಬೆಳವಣಿಗೆ ಕುಗ್ಗುವದು. ನಾವು (ಸ್ವಾತಂತ್ರ್ಯದ) ಗಾಳಿ, ಚೇತನ, ಪ್ರೇಮ ಇವುಗಳನ್ನು ತುಂಬಬೇಕು; ಎಂದರೆ ಮಗುವು ವಿಕಾಸವಾಗಿ, ಅವನ ಅಂತರಾಳದಲ್ಲಿ ಹುದುಗಿದ ಹಿತಕರ ಚೈತನ್ಯಗಳನ್ನು ಬಯಲಿಗೆಳೆಯಲು ಅನುಕೂಲವಾಗುವದು. ಇದು ಬಾಳುವ, ಬೆಳೆಯುವ ಎಲ್ಲ ಜೀವಿಗೆ ಸ್ವಾಭಾವಿಕವಾದುದು. ಮಗುವಿನಲ್ಲಡಗಿದ ಉತ್ತಮಾಂಶವೆಲ್ಲ ಹೊರಹೊಮ್ಮುವ ಹಾದಿಯನ್ನೇ ನಾವು ನೋಡಬೇಕು." ಸಾಲೆಯು ಹೆಸರಿಗೆ ತಕ್ಕುದಾಗಬೇಕಾದರೆ, ಅಕ್ಷರ ಓದಿಗಿಂತ ಕೃತಿಗೆ ಹೆಚ್ಚು ಪ್ರಾಧಾನ್ಯ ಇರಬೇಕು. ಅದು ಸಜೀವ ಶಿಕ್ಷಣದ ಮನೆಯಾಗಬೇಕು. ಅದು ಕೃತಿ ಸಾಲೆಯಾಗಬೇಕು.

**ಕೃತಿ ಸಾಲೆ** (Activity School):

ಕೃತಿ ಸಾಲೆಯೆಂದರೆ ಕೃತಿ ಮೂಲ ಸಾಲೆ; ಕೃತಿಶಾಲಿಗಳನ್ನು ತಯಾರಿಸುವ ಸಾಲೆ. ಕೃತಿಸಾಲೆಯ ಅಡಿಗಲ್ಲು ಮನಶ್ಶಾಸ್ತ್ರವೇ. "ಕೃತಿ ಸಾಲೆಯು ಮಗುವಿನ ವಿಜ್ಞಾನದ ಮೇಲೆ ಅವಲಂಬಿಸಿದೆ. ಅದು ಉತ್ಕ್ರಾಂತಿಯ ಅವಸ್ಥೆಯಲ್ಲಿದೆ; ಅದು ಇನ್ನೂ ವಿಕಸಿತವಾಗುವದು........ (ನಮ್ಮ) ಸಾಲೆಯನ್ನು ಪರಿವರ್ತಿಸಬೇಕು." **ಅಡಾಲ್ಫ ಫೆರಿಯೆರ.** ಕೃತಿಸಾಲೆಯು ಶಿಕ್ಷಣ ತಜ್ಞರ ಪ್ರಗತಿಪರ ವಿಚಾರಗಳ ಮುನ್ನೋಟವನ್ನು ತೋರಿಸುತ್ತದೆ.

**ಕೃತಿ ಸಾಲೆಯ ಲಕ್ಷಣಗಳು:**

**(೧) ವಿವಿಧ ಚಟುವಟಿಕೆಗಳು**

ಮಗುವಿಗಾಗಿ ಶಿಕ್ಷಣ ಎಂಬುದು ಅತ್ಯಂತ ಮಹತ್ವದ್ದು. ಕಲಿಸುವ ವಿಷಯಗಳಿಗಿಂತ ಕಲಿಯುವ ಜೀವಿಗೆ ಪ್ರಾಧಾನ್ಯ ಕೊಡಬೇಕು. ಕಲಿಯುವ ಜೀವಿಗೆ ಬೆಳೆಯುವ ಆಶೆಯಿದೆ. ಅವನ ಬೆಳವಣಿಗೆಗೆ ಅಗತ್ಯವಾದವುಗಳೆಂದರೆ ಚಟುವಟಿಕೆಗಳು. ವಿವಿಧ ಚಟುವಟಿಕೆಗಳನ್ನು ಮಾಡುವಾಗ ಅವನು ವಿವಿಧ ವಿಷಯಗಳ ಜ್ಞಾನ ಸಂಗ್ರಹಿಸುವನು. ಇದು ಮಗುವಿನ ಮೂಲ ಸ್ವಭಾವವು. ಅವನ ಬೆಳವಣಿಗೆಗೆ ಆಹಾರ ಬೇಕು; ಆಹಾರವನ್ನು

ತರಗಸಿಕೊಳ್ಳಲು ಅವನಿಗೆ ಚಟುವಟಿಕೆಗಳು ಬೇಕು; ಚಟುವಟಿಕೆಯು ಬೆಳಗೆಯು ಆಧಾರವು. ಆದರಿಂದ ಹೊಸ ಸಾಲೆಗಳಲ್ಲಿ ವಿವಿಧ ಚಟುವಟಿಕೆ ಗಳಿಗೆ ಸ್ಥಾನವಿರಬೇಕು.

**(೨) ನಿತ್ಯಜೀವನದ ಚಟುವಟಿಕೆಗಳು:**

ಮೂಲಶಿಕ್ಷಣವು ಬಾಳಿನ ಶಿಕ್ಷಣವು. ಮಕ್ಕಳು ತಮ್ಮ ಜೀವಿಕೆ ಯೊಂದಿಗೆ ಶಿಕ್ಷಣ ಹೊಂದಬೇಕು. ಅವರ ಜೀವಿಕೆಯ ಚಟುವಟಿಕೆಗಳೇ ಅವರ ಶಿಕ್ಷಣದ ಸಾಮಗ್ರಿಗಳು. ಮಕ್ಕಳು ಸ್ವಯಂ ಸ್ಫೂರ್ತಿಯಿಂದ ಮಾಡುವಂತಹ ಚಟುವಟಿಕೆಗಳಿರಬೇಕು. ಉತ್ಪಾದಕ ಉದ್ಯಮಕ್ಕೆ ಸಂಬಂಧಿಸಿದ ಚಟುವಟಿಕೆಗಳಿರಬೇಕು. ಜ್ಞಾನವನ್ನು ಜೀವನಕ್ಕೆ ಸಂಬಂಧಿಸಬೇಕು.

**(೩) ಸಾಮಾಜಿಕ ಚಟುವಟಿಕೆಗಳು:**

ಕೃತಿಸಾಲೆಯು ಮಗುವಿನ ಆತ್ಮಪಿಕಾಸಕ್ಕೆ ಸಂಪೂರ್ಣ ಅವ ಕಾಶ ಕಲ್ಪಿಸಿ ಕೊಡಬೇಕು .ಮಗುವು ಬುದ್ಧಿಜೀವಿಯಾಗಿ ಬೆಳೆಯಬೇಕು. ಆವನ ವ್ಯಕ್ತಿತ್ವವು ಪ್ರಕಟವಾಗಬೇಕು. ಅವನು ರಚನಾತ್ಮಕ ಕೃತಿಗಳನ್ನು ಮಾಡುವಂತಾಗಬೇಕು. ಅವನ ಬೋಧಕ ಪ್ರವೃತ್ತಿಯು ಪ್ರಚೋದನೆ ಯಾಗಿ, ಅವನಿಗೆ ನಾಡಿನಲ್ಲಿ ಹಿರಿಮೆ ದೊರೆಯಬೇಕು. ಅವನ ಬುದ್ಧಿ ಪ್ರಭಾವ, ಕಾರ್ಯ ಸಾಮರ್ಥ್ಯ, ವ್ಯಕ್ತಿತ್ವದ ಪ್ರತಿಭೆ ಅವೆಲ್ಲವೂ ಆವನ ಸಾಮಾಜಿಕ ಚಟುವಟಿಕೆಗಳಲ್ಲಿ ಪ್ರತಿಬಿಂಬಿತವಾಗಬೇಕು. 'ಸಮಾಜ ಸೇವೆಯ ಮುಖಾಂತರ ಆತ್ಮಸಿದ್ಧಿ (Self Realisation through Social Service)' ದೊರೆಯಬೇಕು. ಜಗತ್ತಿನಲ್ಲಿ ನ್ಯಾಯ ನೆಮ್ಮದಿಗ ಳನ್ನು ಪ್ರಸ್ಥಾಪಿಸಲು ಶ್ರಮಿಸುವ ವಿಧಾಯಕ ಕಾರ್ಯಕರ್ತರು ತಯಾರಾಗಬೇಕು. ಕೃತಿ ಸಾಲೆಯು ಸಮತೋಲ ಹಾಗೂ ಸಮನ್ವಿತ ವ್ಯಕ್ತಿತ್ವವುಳ್ಳ ವ್ಯಕ್ತಿಗಳನ್ನು ತಯಾರಿಸುವದು. ಪುನರ್ರಚನೆಯ ಕಾರ್ಯ ಗಳಲ್ಲಿ ಚೈತನ್ಯಯುಕ್ತ ಘಟಕಗಳನ್ನು ಸಿದ್ಧಗೊಳಿಸುವದು. ಜನಾಬ ಕೆ. ಜಿ. ಸೈಯದೈನ ಅವರ ಶಬ್ದಗಳಲ್ಲಿ ಹೇಳುವುದಾದರೆ, "ಈ ಪುನರ್ರ- ಚನೆಯ ಕಾರ್ಯದಲ್ಲಿ ಮಗುವಿನ ಚೈತನ್ಯಯುಕ್ತ ಹಾಗು ರಚನಾತ್ಮಕ ಸ್ವಭಾ ವಕ್ಕೆ ನಾವು ಗೌರವಿಸಬೇಕು. ಅವನ ನಿರಂತರ ಹಾಗು ಆನಂದದಾಯಿ

ಆವಿರ್ಭಾವಕ್ಕೆ ಅವಕಾಶ ಕಲ್ಪಿಸಿ ಕೊಡಬೇಕು. ಕೈ-ಮಿದುಳುಗಳ ಫಲೋತ್ಪಾದಕ ಬಾಂಧವ್ಯ, ಸಿದ್ಧಾಂತ ಹಾಗು ರೂಢಿ ಜ್ಞಾನ ಹಾಗು ಕೃತಿ-ಇವುಗಳ ಸಂಬಂಧವನ್ನು ಪುನಃ ಪ್ರಸ್ಥಾಪಿಸಬೇಕು.

**(೪) ರಚನಾತ್ಮಕ ಕೃತಿಗಳು.**

ಮಗುವು ಸಾಮಾಜಿಕ ವಾತಾವರಣದಲ್ಲಿ ಬೆಳೆಯಬೇಕು. ಸಮಾಜ ಸಂಪರ್ಕದಿಂದ ಅವನ ಯೋಗ್ಯ ಜೀವನವು ಪೋಷಕವಾಗಬೇಕ. ಅವನಿಂದ ಸಾಹಿತ್ಯ, ವಿಜ್ಞಾನ, ಕಲೆ ಮುಂತಾದ ವಿಷಯಗಳಲ್ಲಿಯೂ ರಚನಾತ್ಮಕ ಕೃತಿಗಳು ಹೊರಬೀಳುವವು. ಅವನಿಗೆ ತುಂಬು ಜೀವನದ ಅರಿವು ಉಂಟಾಗಬೇಕು; ಅವನ ಬಾಳ ಬೆಳಕು ಪ್ರಜ್ವಲಿಸಬೇಕು; ಎಂದರೆ ಕೃತಿಸಾಲೆಯು ನಿಜವಾದ ಕೃತಿಶಾಲಿಗಳನ್ನು ಸಿದ್ಧಗೊಳಿಸುವದು ಸಾಧ್ಯ. "ಕ್ರಿಯಾಪ್ರೇರಿತ ಸಚೇತನ ವ್ಯಕ್ತಿಗಳನ್ನು ತಯಾರಿಸುವುದೇ ಕ್ರಿಯಾತ್ಮಕ ಶಿಕ್ಷಣದ ಹಿರಿ ಗುರಿಯು'' ಎಂದು ರೆ. ರಾಯಬರ್ನ ಅವರು ಹೇಳಿದ್ದಾರೆ. ಪ್ರತಿಕೂಲ ಪರಿಸ್ಥಿತಿಗೆ ತಾನು ಬಲಿಬೀಳದೆ, ಅದನ್ನು ಎದುರಿಸಿ, ಅದನ್ನು ಪರಿವರ್ತಿಸಿ, ಹೊಸ ಜಗತ್ತು ನಿರ್ಮಾಣ ಮಾಡುವಲ್ಲಿ, ಹೊಸ ಯುಗವನ್ನು ಆರಂಭಿಸುವಲ್ಲಿ ಬಾಲಕನು ಭಾಗಿಯಾಗಬೇಕು. ಸಮಾಜದ ಪುನರ್ರಚನೆ ಮಾಡುವದು ಕ್ರಿಯಾತ್ಮಕ ಶಿಕ್ಷಣದ ಮುಖ್ಯ ಉದ್ದೇಶವು. ಅದು ಒತ್ತಾಯದಿ-ದಾಗಲಿ, ಕಾನೂನಿನಿಂದಾಗಲಿ ಮಾಡತಕ್ಕ ಕಾರ್ಯವಲ್ಲ. ಕ್ರಿಯಾತ್ಮಕ ಶಕ್ತಿಗಳುಳ್ಳ ಹಾಗೂ ಉದಾತ್ತ ಧ್ಯೇಯಗಳುಳ್ಳ ವ್ಯಕ್ತಿಗಳಿಂದ ಕೂಡಿದ ಸಮಾಜವು ಕ್ರಿಯಾತ್ಮಕ ಶಿಕ್ಷಣದ ವಿಧಾಯಕ ಕಾರ್ಯದ ಫಲವಾಗಿ ರಚಿತವಾಗಬೇಕು.

ಪ್ರತಿಭಾಸಂಪನ್ನ ವ್ಯಕ್ತಿಗಳನ್ನು ಜಗತ್ತಿನ ಇತಿಹಾಸದಲ್ಲಿ ನಾವು ಕಾಣುತ್ತೇವೆ. ಪ್ರಚಲಿತ ವಿಚಾರಗಳಿಗೆ ಹೊಸ ರೂಪು-ಕೊಟ್ಟು ಹೊಸ ಯುಗ ನಿರ್ಮಾಣಕ್ಕೆ ಕಾರಣರಾದ ವ್ಯಕ್ತಿಗಳ ಬಗೆಗೆ ನಾವು ಓದಿದ್ದೇವೆ. ಅಂಥವರು ಮಹಾ ಪುರುಷರೆಂದು ಹೆಸರಾದರು. ಬುದ್ಧ, ಕ್ರೈಸ್ತ, ಮಹಮ್ಮದ, ನಾನಕ, ಬಸವ ಮುಂತಾದ ಧಾರ್ಮಿಕ ಗುರುಗಳೂ, ಗ್ಯಾಲಿಲಿಯೋ, ನ್ಯೂಟನ್, ಜೇಮ್ಸ ವ್ಯಾಟ್, ಈನ್ಸ್ಟನ್, ಮಾರ್ಕೋನಿ ಮುಂತಾದ ವಿಜ್ಞಾನಿಗಳೂ, ಪ್ಲೇಟೋ, ಅರಿಸ್ಟಾಟಲ್, ಕಾಂಟ್, ಹೆಗಲ್, ವಿವೇಕಾನಂದ ಮುಂತಾದ

ತತ್ತ್ವಜ್ಞಾನಿಗಳೂ ಜಗತ್ತಿನಲ್ಲಿ ಉದಯವಾಗಿ ಮಾನವ ಪ್ರಪಂಚದ ಇತಿಹಾಸದಲ್ಲಿ ಬೆಳಗಿದ್ದಾರೆ. ಇವರೆಲ್ಲ ದಾರ್ಶನಿಕರು. ಶಾಲೆಯಲ್ಲಿ ದೊರೆತ ಶಿಕ್ಷಣದ, ಫಲವಾಗಿ ಅವರ ವ್ಯಕ್ತಿತ್ವವು ವಿಕಾಸವಾಗಲಿಲ್ಲ, ಅವರ ಅರುಹಿನ ಕಣ್ಣಿನ ಕಿಡಿ ಪ್ರಕಾಶಮಯವಾಗಿ ಬೆಳೆಯಿತು. ನಾಳೆಯ ಶಿಕ್ಷಣ ಕ್ರಮದಲ್ಲಿ ಅಗತ್ಯವಿದ್ದ ಬೇಡಿಕೆಯಾವುದು? ಜೀವನದಲ್ಲಿ ಕಣ್ತೆರೆದು ಮುಂದೆ ಸಾಗುವ ವ್ಯಕ್ತಿಗಳು ತಯಾರಾಗಬೇಕು. ಅಂಧಶ್ರದ್ಧೆಯಿಂದ ಕತ್ತಲೆಯಲ್ಲಿ ಅಲೆಯುವ ವ್ಯಕ್ತಿಗಳು ಬೇಕಿಲ್ಲ. ಎಲ್ಲ ವ್ಯಕ್ತಿಗಳೂ ಕವಿ ರವೀಂದ್ರ ಮಹಾತ್ಮಾ ಗಾಂಧಿಯವರಂತೆ ಮಹಾಪುರುಷರಾಗುವದಿಲ್ಲವೇನೋ ನಿಜ. ಆದರೆ ಪ್ರತಿಯೊಬ್ಬನಲ್ಲಿ ರಚನಾ ಪ್ರವೃತ್ತಿಗಳು ಹುದುಗಿವೆ; ಅವು ಪ್ರಕಟವಾಗುವಂತೆ ಶಾಲೆಗಳಲ್ಲಿ ಸನ್ನಿವೇಶಗಳು ದೊರೆಯಬೇಕು. ಏನೊಂದು ಕಾರ್ಯವನ್ನು ಮಾಡಬೇಕೆಂಬ ಪ್ರೇರಣೆ, ಹುಮ್ಮಸಗಳುಳ್ಳ ವ್ಯಕ್ತಿಗಳು ತಯಾರಾಗಬೇಕು.

"ನನ್ನ ಅನಿಸಿಕೆಗೆ ರೂಪುಕೊಡಲು ತಕ್ಕ ಇಚ್ಛೆ ದಯಪಾಲಿಸು. ನನಗೆ ತಿಳಿದಂತೆ ಮಾಡಲು ತಕ್ಕ ಶಕ್ತಿ ದಯಪಾಲಿಸು" ಎಂದು ಕವಿ. **ಡ್ರಿಂಕ ವಾಟರ** ಹೇಳಿದಂತೆ,

"ಜೀವನದ ರಹಸ್ಯವು ಕೃತಿಯಲ್ಲಿ ಅಡಗಿದೆ. ರಚನೆಯಲ್ಲಿ ಆನಂದ ಹೊಂದುವನು. ಜೀವನದ ನಿಯಾಮಕ. ಹಳೆ ಮತ್ತು ಹೊಸ ಜಗತ್ತನ್ನು ನಿರ್ಮಿಸು" ಎಂದು ಕವಿ **ಇಕ್‌ಬಾಲ** ಹಾಡಿದಂತೆ. ಬಾಲಕರು ಸಿದ್ಧರಾಗಬೇಕು. ಇದು ಕ್ರಿಯಾತ್ಮಕ ಶಿಕ್ಷಣದ ಗುಟ್ಟು.



## ೧೭. ಕೆಲಸದ ಸಿದ್ಧಾಂತ

"ಬಾಪೂಜಿ ಪ್ರತಿಯೊಂದನ್ನು ಸತ್ಯ-ಅಹಿಂಸೆಗ ಮುಖಾಂತರ ನೋಡು ವರು; ಆದರೆ ನಾನು ಕೆಲಸದ ಮುಖಾಂತರ ನೋಡುತ್ತೇನೆ" ಎಂದು **ಶ್ರೀ. ಜೆ. ಸಿ. ಕುಮಾರಪ್ಪಾ ಅವರು** ತಾ|| ೨೨-೯-೧೯೪೬ನೇ ದಿನ ಸೇವಾಗ್ರಾಮದಲ್ಲಿ ಹೇಳಿದರು. ಮೂಲ ಶಿಕ್ಷಣವು ಕೆಲಸ ಕೇಂದ್ರವಾದುದು. ಆದರಿಂದ ಕೆಲಸದ ಸಿದ್ಧಾಂತವನ್ನು ಅರಿಯುವುದು ಅಗತ್ಯ.

### ಕೆಲಸವು ಶಾಪ:

ಕೆಲಸದ ಸಿದ್ಧಾಂತವನ್ನು ತಿಳಿಸುವದಕ್ಕೋಸ್ಕರ ದೇವರು ಆಡಾಮು ನನ್ನು ಭೂಮಿಗೆ ಕಳುಹಿದನೆಂದು ಯಹುದಿ ಜನರು ಹೇಳುವರು. ಬೆವರು ಸುರಿಸಿ ಉಣ್ಣು ಎಂದು ಕ್ರೈಸ್ತನು ಬೋಧಿಸಿದನು. ಇನ್ನೊಬ್ಬನು ದುಡಿಯಲಿ ನಾನು ಸುಖವಾಗಿ ಉಣ್ಣುವೆ ಎಂಬುದು ಕೆಲಜನರ ಮತವಾಗಿತ್ತು. ಹಣವಿದ್ದವ ಸುದೈವಿ, ದುಡಿಯುವವ ದುರ್ದೈವಿ ಎಂಬ ವಿಚಾರವು ಬಲಿ ಯಿತು. ದೇವರ ಅನುಗ್ರಹವಿದ್ದವರು ಸಿರಿವಂತರು; ದೇವರ ಅನುಗ್ರಹ ದೊರೆಯದವರು ಬಡವರು; ಆದರಿಂದ ಬಡವರು ಅನ್ನಕ್ಕಾಗಿ ಶ್ರಮಿಸಬೇಕು. ಶ್ರಮಜೀವಿಗಳ ಕೆಲಸವು ಶಾಪವೆಂದು ಊಹಿಸಿದರು.

### ಕೆಲಸವು ಶಿಕ್ಷೆ:

ಕೆಲಸ ಮಾಡುವವರು ಕೆಳದರ್ಜೆಯವರೆಂದು ತಿಳಿದ ಕಾಲವೂ ಗತಿಸಿದೆ. ದುಡಿಯುವವರು ಗುಲಾಮರಾದರು; ದುಡಿಸಿಕೊಳ್ಳುವವರು ಒಡೆಯರಾದರು. ಕೆಲಸವು ಶಾಪವೆಂಬ ವಿಚಾರದ ಪರಿಣಾಮದಿಂದಲೋ, ಕೆಲಸವು ಕೀಳು ಎಂಬ ಗ್ರಹಿಕೆಯಿಂದಲೋ ಮಾನವಕುಲದಲ್ಲಿ ಗುಲಾಮಗಿರಿಯು ಸೇರಿಕೊಂಡಿತು. ಕೆಲಸ ಮಾಡುವದು ಶಿಕ್ಷೆ ಎಂಬ ವಿಚಾರವೂ ತಲೆಯೆ ತ್ತಿತು. ಜೇಲಿನಲ್ಲಿರುವ ಕೈದಿಗಳಿಗೆ ಕೆಲಸ ಕೊಡುವರು. ಅದು ಶಿಕ್ಷೆಯ ಸ್ವರೂಪವೇ ಎಂದು ಹೇಳಬಹುದು. ಉದಾಹರಣೆಗಾಗಿ, ಬೀ

ಮತ್ತು ಕರಿ ಉಣ್ಣೆ ಕೂಡಿದ ಒಂದು ಪೆಂಡಿಯನ್ನು ಮುಂದೆ ಒಗೆದು, ಅದನ್ನು ಬೇರೆ ಮಾಡಲು ಒಬ್ಬನಿಗೆ ಹೇಳುವರು. ಅವನು ಬೇರೆ ಮಾಡಿದ್ದನ್ನು ಮತ್ತೆ ಕೂಡಿಸಿ, ಇನ್ನೊಬ್ಬನಿಗೆ ಕರಿ, ಬಿಳಿ ಉಣ್ಣೆ ಬೇರ್ಪಡಿಸಲು ಹೇಳುವರು. ಇಲ್ಲಿ ಕೆಲಸವು ಕೈದಿಗಳಿಗೆ ಕೊಟ್ಟ ಶಿಕ್ಷೆಯ ಪ್ರತೀಕವೇ ಹೊರತು, ಅದು ಕೆಲಸವಲ್ಲ. ಕೆಲಸ ಪ್ರಯೋಜನವುಳ್ಳದ್ದಿರಬೇಕು. ಈಗ ಕೈದಿಗಳಿಗೆ ಸಹ ಉಪಯುಕ್ತ ಕೆಲಸಗಳನ್ನು ಕೊಡುವರು.

**ಕೆಲಸವು ಕೀಳು:**

ಕೆಲಸವು ಕೀಳೆಂದು ತಿಳಿಯಲು ಮೇಲಿನ ಎರಡೂ ವಿಚಾರಗಳು ಕಾರಣವಾದವು. ಅಲ್ಲದೆ ಯಂತ್ರ ಯುಗವು ಆರಂಭವಾದ ನಂತರ ಸಿರಿವಂತರು ಇನ್ನೂ ಸಿರಿವಂತರಾದರು. ಬಡವರು ಇನ್ನೂ ಬಡವರಾದರು, ವಿಷಮತೆ ಹೆಚ್ಚಾಯಿತು. ಕೂಲಿಕಾರರ ಬಾಳು ಬಲು ಗೋಳಾಯಿತು, ಅವರಿಗೆ ಪೂರ್ತಿ ಊಟವಿಲ್ಲ, ಮೈತುಂಬ ಬಟ್ಟೆಯಿಲ್ಲ, ಇರಲು ಮನೆಯಿಲ್ಲ. ಒಂದು ಕಡೆಗೆ ಲಕ್ಷಾಂತರ ಜೇಲು ಅರಿವೆ ತಯಾರಾಗುತ್ತಿದೆ, ಮತ್ತೊಂದು ಕಡೆ ಲಕ್ಷಾಂತರ ಬರಿಮೈ ಜನರು ಓಡಾಡುವರು. ದುಡಿತಕ್ಕೆ ತಕ್ಕ ವೇತನ ಹಾಗು ಜೀವನ ಸೌಕರ್ಯಗಳು ಶ್ರಮಜೀವಿಗಳಿಗೆ ದೊರೆಯಬೇಕೆಂದು ರಾಬರ್ಟ ಓವೆನ್, ಕಾರ್ಲಾಯಿಲ್ ಮೊದಲಾದವರು ಮಾನವತೆಯ ಚಳವಳಿಯನ್ನು ಹೂಡಿದರು, ಮುಂದೆ ಸಮತಾವಾದಿಗಳು ಈ ಸಿಟ್ಟಿನಲ್ಲಿ ಯತ್ನಿಸಿದರು. ರಶಿಯನ್ ಕ್ರಾಂತಿಯಂತೂ ಕೂಲಿಕಾರರ ರಾಜ್ಯವನ್ನೇ ಪ್ರಸ್ಥಾಪಿಸಿತು. ಈಗ ಶ್ರಮಜೀವಿಗಳಿಗೆ ರಾಜಕೀಯ ಹಕ್ಕುಗಳು ದೊರೆತವು, ಸಮಾಜದಲ್ಲಿ ಸ್ಥಾನಮಾನಗಳು ದೊರೆತಿವೆ. ಹಿಂದುಸ್ಥಾನದಲ್ಲಿ ಔದ್ಯೋಗಿಕ ಕ್ರಾಂತಿಯ ಪರಿಣಾಮವೇನೂ ಆಗಲಿಲ್ಲ; ಯಾಕಂದರೆ ಅಂಗ್ಲರಿಗೆ ಅದು ಬೇಕಾಗಿರಲಿಲ್ಲ. ಹಿಂದುಸ್ಥಾನವು ಕಚ್ಚಾ ಮಾಲನ್ನು ಪೂರೈಸುವ ದೇಶವಾಗಬೇಕೆಂಬುದೇ ಅವರ ಹಿರಿ ಗುರಿಯಾಗಿತ್ತು. ಶ್ರೀಮಂತ—ಬಡವ ಈ ದ್ವಂದ್ವವು ಅಷ್ಟು ಬಲಿಯಲಿಲ್ಲ. ಆದರೆ ಹಳ್ಳಿಯ ಉದ್ಯೋಗ—ಧಂದೆಗಳು ಹಾಳಾದವು. ಕಸಬುದಾರರ ಸ್ಥಾನಮಾನಗಳು ಕಡಿಮೆಯಾದವು. "ಗ್ರಾಮೋದ್ಯೋಗಗಳ ಬಗೆಗೆ ತಕ್ಕಷ್ಟು ನಾವು ವಿಚಾರಿಸಿಲ್ಲ; ಯಾಕಂದರೆ ಕೈಕುಸುರನ್ನು ಶಿಕ್ಷಣದಿಂದ ಬೇರ್ಪಡಿಸಿದ್ದೇವೆ. ಕೈಕುಸುರು ಕೀಳೆಂದು

ಗಣಿಸಲಾಗಿದೆ. ವರ್ಣಪದ್ಧತಿಯ ಅನಿಷ್ಟ ಪರಿಣಾಮವಾಗಿ ನೂಲುವವರು, ನೇಕಾರರು, ಬಡಿಗರು, ಕಾಲ್ಮರಿ ಮಾಡುವವರು ಮುಂತಾದವರೆಲ್ಲ ಕೆಳ ವರ್ಗದವರು—ಕೂಲಿಕಾರರು—ಎಂದು ನಾವು ನಂಬುವ ಮಟ್ಟಕ್ಕೆ ಮುಟ್ಟಿದ್ದೇವೆ. ನಮ್ಮಲ್ಲಿ ಕ್ರಾಂಪ್ಟನ್ ಮತ್ತು ಹಾರಗ್ರೀವರು ಹುಟ್ಟಲಿಲ್ಲ: ಯಾಕಂದರೆ ಕೈಗಾರಿಕೆಗಳು ಕೀಳು ತರಗತಿಯವೆಂಬ ಭಾವನೆಯ ಮೂಲಕ ಅವು ಕುಶಲ ಕೆಲಸಗಳಿಂದ ಬೇರ್ಪಡಿಸಲ್ಪಟ್ಟವು. ಅವು ಸ್ವತಂತ್ರ ದರ್ಜೆಗಳುಳ್ಳ ಧಂದೆಗಳಾಗಿ, ವಿಸ್ಯೆಗೆ ದೊರೆತ ಮಾನ ಅವುಗಳಿಗೆ ದೊರೆತಿದ್ದರೆ ನಮ್ಮ ಕೈಗಾರಿಕೆಯ ಉದ್ಯೋಗಸ್ಥರಲ್ಲಿ ಮಹಾ ಶೋಧಕರು ಹೊರಡುತ್ತಿದ್ದರು.''  ಹರಿಜನ, ೧೪–೯–೧೯೩೭, **ಗಾಂಧೀಜಿ.**

ಕಸಬುದಾರರ ಆರ್ಥಿಕ ಮಟ್ಟವು ಏರಿಲ್ಲ; ಅವರಿಗೆ ಸಮಾಜದಲ್ಲಿ ತಕ್ಕ ಸ್ಥಾನಮಾನಗಳು ದೊರೆಯಲಿಲ್ಲ. ಅವರು ಬುದ್ಧಿ ಜೀವಿಗಳಾಗಿ ಬೆಳೆಯಲಿಲ್ಲ. ಅದರಿಂದ ಕೆಲಸಕ್ಕೆ ಮಾನ ಕಡಿಮೆಯಾಯಿತು.

**ಕೆಲಸಕ್ಕೆ ಗೌರವ** (Respect for Labour):

ಪ್ರಜಾಸತ್ತೆಯ ಗಾಳಿಯು ಜಗತ್ತಿನ ತುಂಬ ಬೀಸತೊಡಗಿತು. ಪ್ರಜಾಸತ್ತೆಯಲ್ಲಿ ಪ್ರತಿಯೊಬ್ಬ ನಾಗರಿಕನಿಗೆ ಸಮಾನ ಹಕ್ಕುಗಳು ಇರಬೇಕೆಂಬ ಅರಿವು ಉಂಟಾಗತೊಡಗಿತು. ಉದ್ಯೋಗಗಳಿಂದ ಮೇಲು–ಕೀಳು ಕಲ್ಪಿಸುವದು ತಪ್ಪೆಂದೂ, ಜಾತಿಯಿಂದ ಮೇಲು ಕೀಳು ಬಗೆಯುವದು ಮೂರ್ಖತನವೆಂದೂ ವಿಚಾರವಾದಿಗಳಿಗೆ ಹೊಳೆಯಿತು. ಸಾಮಾಜಿಕ ಸಮತೆ ಇಂದಿನ ಕೂಗು. ಕಸಬುದಾರರ ಬುದ್ಧಿಮತ್ತೆ ಬೆಳೆದಾಗ, ರಾಷ್ಟ್ರದ ಉತ್ಪತ್ತಿಯು ಹೆಚ್ಚುವದು. ರಾಷ್ಟ್ರವು ಘನತೆಗೇರುವದು. ದುಡಿತಕ್ಕೆ ಗೌರವ ದೊರೆತಿದೆ. ಶ್ರಮಗೌರವ ತತ್ವ(Dignity of Labour)ವು ಬೆಳೆಯಲಾರಂಭಿಸಿದೆ.

**ಕೆಲಸವು ಪೂಜೆ** (Work is Worship):

ದೇವರನ್ನು ಮೆಚ್ಚಿಸುವದಕ್ಕಾಗಿ ಅನೇಕರು ಅನೇಕ ವಿಧವಾಗಿ ಪೂಜೆ ಪುನಸ್ಕಾರಗಳನ್ನು ಮಾಡುವರು. ಅನ್ಯರಿಗೆ ಮಾಡಿದ ಅನ್ಯಾಯದ ಪರಿ

ಮಾರ್ಜನೆಗೆ ಕೆಲವರು ಪೂಜಿ ಮಾಡುವರು. ಸಣ್ಣ ಪೂಜೆ, ದೊಡ್ಡ ಪೂಜೆ ಎಂದು ಪೂಜಾರಿಗಳು ಜನರಿಂದ ಹಣ ಎತ್ತುವ ಹೊಂಚು ಹಾಕುವರು. ಇದೆಲ್ಲವೂ ಭಾವನೆಯ ಮೇಲೆ ಅವಲಂಬಿಸಿದೆ. ಶ್ರದ್ಧೆಯಿದ್ದರೆ ಮಾತ್ರ ಅದರ ಫಲ ದೊರೆಯುವದು. ನಾವು ಮಾಡುವ ಪೂಜೆಯ ಆಡಂಬರವು ಮಹತ್ವದ್ದೊ, ನಮ್ಮ ಪೂಜೆಯ ಕೆಲಸದಲ್ಲಿ ಶ್ರದ್ಧೆ ಮಹತ್ವದ್ದೊ ಎಂದು ವಿಚಾರಿಸಿದಲ್ಲಿ ಎರಡನೆಯದೇ ಹೆಚ್ಚಿನದೆಂದು ಹೊಳೆಯದಿರದು. ಪೂಜೆಯ ಬಾಹ್ಯಾಡಂಬರವು ದೇವರನ್ನು ಮೆಚ್ಚಿಸುವ ಸಾಧನವಲ್ಲ; ದೇವರಲ್ಲಿ ಶ್ರದ್ಧೆ ಯಿಟ್ಟು ಕೆಲಸ ಮಾಡುವುದೇ ದೇವರನ್ನು ಮೆಚ್ಚಿಸುವ ನಿಜವಾದ ಮಾರ್ಗವು. ನಾವು ಮಾಡತಕ್ಕ ಕೆಲಸವು ಒಳ್ಳೆಯದಿರಬೇಕು. ಆ ಕೆಲಸವನ್ನು ಶ್ರದ್ಧೆ ಯಿಂದ ಮಾಡಬೇಕು. ಆ ಕೆಲಸವೇ ಪೂಜೆಯಾಗುವದು. ಗಾಂಧೀಜಿ ಯವರು ನೂಲುವಾಗ ಪ್ರತಿಯೊಂದು ಎಳೆಯಲ್ಲಿ ಶ್ರೀರಾಮನನ್ನು ನೋಡುತ್ತೇನೆಂದು ಹೇಳಿದರು. ಶ್ರೀರಾಮನ ಧ್ಯಾನಾಸಕ್ತರಾಗಿ ಅವರು ನೂಲುತ್ತಿದ್ದರು. ಇಂಥ ಶ್ರದ್ಧೆಯಿಂದ ಮಾಡಿದ ಕೆಲಸವು ಪವಿತ್ರವಾದುದು; ಅದುವೇ ದೇವರ ಪೂಜೆ. ಅದುವೇ ಧರ್ಮ ಮಾರ್ಗ. ಆದುದರಿಂದ ಕರ್ಮವೇ ಧರ್ಮವೆಂದು ಹೇಳಬಹುದು. ಕಾಯಕವೇ ಕೈಲಾಸ ಎಂದು ಶ್ರೀ. ಬಸವೇಶ್ವರರು ಹೇಳಿದ ಮಾತಿನ ಮರ್ಮವಾದರೂ ಅದೇ!

**ಕೆಲಸವು ಶಿಕ್ಷಣ:**

ನಾವು ಬಹುಕಾಲದಿಂದ ಕೆಲಸ ಮಾಡುತ್ತಿದ್ದೇವೆ; ಆದರೆ ಕೆಲಸವು ಶಿಕ್ಷಣವೆಂಬ ಅರಿವು ನಮಗೆ ಉಂಟಾಗಿರಲಿಲ್ಲ. ಕಿರಿಯರು ಹಿರಿಯ ರೊಡನೆ ಕೆಲಸ ಮಾಡುತ್ತ ಉದ್ಯೋಗಗಳಲ್ಲಿ ತರಬೇತು ಹೊಂದುವರು. ಅದು ಔದ್ಯೋಗಿಕ ಶಿಕ್ಷಣವೆಂದು ಹೆಸರಾಗಿದೆ. ಈ ಉದ್ಯಮದಲ್ಲಿಯೂ ಯಾಂತ್ರಿಕ ರೀತಿಯಿಂದ ತರಬೇತು ಹೊಂದುವರು. ಕೆಲಸ ಮಾಡುವ ದಕ್ಕೆ ಅಗತ್ಯವಿದ್ದಷ್ಟು ಜ್ಞಾನ ಪಡೆಯುವರು. ಆದರೆ ಉದ್ಯೋಗವನ್ನು ಶಾಸ್ತ್ರಬದ್ಧವಾಗಿ ಕಲಿಯುವ ರೂಢಿ ಬೆಳೆಯಲಿಲ್ಲ. ಬಡಿಗನು ತನ್ನ ತಂದೆ ಯಿಂದ ಬಡಿಗತನ ಉದ್ಯೋಗವನ್ನು ಕಲಿತಿರುವನು. ತಾವು ಉಪಯೋಗಿ

ಸುವ ಕಟ್ಟಿಗೆ ಹಾಗು ಇತರ ಸಾಧನಗಳ ಬಗೆಗೆ ಸಾಕಷ್ಟು ಜ್ಞಾನ ಮೂಡಿ ಕೊಂಡಿರುವದಿಲ್ಲ. ಆ ಉದ್ಯೋಗವು ತನಗೆ ಆವಶ್ಯಕವಿದ್ದ ಗಣಿತ, ಭೂಮಿತಿ, ಇತಿಹಾಸ, ಭೂಗೋಲ ಇತ್ಯಾದಿ ವಿಷಯಗಳ ಜ್ಞಾನ ಸಾಧನವಾಗಲಿಲ್ಲ. ಒಂದು ಫ್ಯಾಕ್ಟರಿಯಲ್ಲಿ ಕೆಲಸ ಮಾಡುತ್ತಿರುವವರನ್ನು ತುಸು ಹೊತ್ತು ಸಿರೀಕ್ಷಿಸಿರಿ, ಒಬ್ಬೊಬ್ಬರು ಒಂದೊಂದು ತೆರನಾಗಿ ಕೆಲಸ ಮಾಡುವರು. ಅವರು ಯಾಂತ್ರಿಕ ರೀತಿಯಿಂದ ಕೆಲಸ ಮಾಡುತ್ತಿರುವರು. ಅವರ ಕೆಲಸದಲ್ಲಿ ಬುದ್ಧಿ ಪ್ರಚೋದನೆಗೆ ಅವಕಾಶವಿಲ್ಲ. ಇಂಥ ಕೆಲಸಗಳು ಹೊಟ್ಟೆಯ ಹೋರೆಗಳೇ ಹೊರತು ಅವು ಶಿಕ್ಷಣದ ಸಾಧನಗಳಲ್ಲ. ಮೂಲ ಶಿಕ್ಷಣ ಯೋಜನೆಯಲ್ಲಿ ಕೆಲಸವು ಮಗುವಿನ ಶಿಕ್ಷಣದ ಸಾಧನವು: ಮಗುವಿಗೆ ಕೆಲಸವೇ ಶಿಕ್ಷಣವು (Work is Education).

**ದೈಹಿಕ ಶ್ರಮ** (Manual Labour):

ಹಳೆಯ ಶಿಕ್ಷಣ ಕ್ರಮದಲ್ಲಿ ದೈಹಿಕ ಶ್ರಮಕ್ಕೆ ತಕ್ಕ ಸ್ಥಾನ ದೊರೆಯ ಲಿಲ್ಲ. ಗಣಿತ, ಇತಿಹಾಸ, ಭೂಗೋಲ, ವಿಜ್ಞಾನ ಇತ್ಯಾದಿ ವಿಷಯ ಗಳನ್ನು ಶಾಲೆಗಳಲ್ಲಿ ಕಲಿಸುವದು ಮುಖ್ಯವಾಗಿದ್ದರಿಂದ ಮತ್ತು ಅವು ಬೌದ್ಧಿಕ ವಿಷಯಗಳೆಂದು ಗಣ್ಯವಾಗಿದ್ದರಿಂದ ಅವುಗಳಿಗೇ ಪ್ರಾಧಾನ್ಯ ದೊರೆಯಿತು. ದೈಹಿಕ ಶ್ರಮವು ಶ್ರಮಜೀವಿಗಳು ಮಾಡತಕ್ಕದ್ದೆಂದು ತಿಳಿಯಲಾಯಿತು. ಅದರ ಪರಿಣಾಮವಾಗಿ ಶ್ರಮಜೀವಿಗಳು, ಬುದ್ಧಿ ಜೀವಿಗಳು ಇವರ ನಡುವೆ ಕೃತ್ರಿಮ ಅಂತರವು ಬೆಳೆದು, ಬುದ್ಧಿ ಜೀವಿಗಳಿಗೆ ಸ್ಥಾನಮಾನಗಳು ದೊರೆತವು. ಪ್ರಗತಿಪರ ವಿಚಾರಗಳಿಗೆ ಇದು ಹೊಂದಿಕೆ ಯಾಗುವದಿಲ್ಲ. ಶ್ರಮಜೀವಿಗಳಿಗೆ ರಾಜಕೀಯ ಹಕ್ಕುಗಳನ್ನು, ನಾಗರಿ ಕತೆಯ ಹಕ್ಕುಬಾಧ್ಯತೆಗಳನ್ನು ಮತ್ತು ಜೀವನ ಸೌಕರ್ಯಗಳನ್ನು ಸಾಮಾ ಜಿಕ ಸಮತೆಯ ತತ್ವದ ಮೇಲೆ ಸ್ವತಂತ್ರ ಭಾರತವು ಒದಗಿಸುವದು. ಸದ್ಯದ ಅನಿಷ್ಟವನ್ನು ದೂರ ಮಾಡಲು ಮೂಲ ಶಿಕ್ಷಣವು ಅತ್ಯಂತ ಸಹಾ ಯಕವಿದೆ. ದೈಹಿಕ ಶ್ರಮವು ಶಿಕ್ಷಣದ ಸಾಧನವಾಗಿದೆ. ಮಗುವು ಜೀ ಪುವ ಜೀವಿ. ಚಟುವಟಿಕೆಗಳ ಮುಖಾಂತರವೇ ಮಗುವಿನ ದೇಹ

ಬುದ್ಧಿ—ನೀತಿಗಳು ವಿಕಾಸವಾಗುವವು, ಹೊಸ ಶಿಕ್ಷಣವು ಮಗುವಿನ ಸಮ ಪಾಯ ವಿಕಾಸ ತತ್ವವನ್ನೇ ಆಧಾರವಾಗಿಟ್ಟುಕೊಂಡಿದೆ. ಆದರಿಂದ ಮಗು ವಿನ ಯಾವುದೊಂದು ಕೆಲಸವು ಅವನ ವಿಕಾಸಕ್ಕೆ ಪೋಷಕವಾಗಿದೆ. ಕೆಲಸವು ಆಟವಾಗಬೇಕು, ಆಟವು ಪಾಠ ಆಗಬೇಕು. ಕೆಲಸವು ಶಿಕ್ಷಣವಾಗಬೇಕು.

**ದೈಹಿಕ ಶ್ರಮವೂ ಬುದ್ಧಿ ವಿಕಾಸವೂ:**

ಒಂದು ಕೆಲಸವನ್ನು ಆರಂಭಿಸುವ ಪೂರ್ವದಲ್ಲಿ ಯಾವ ಕೆಲಸವನ್ನು ಮಾಡಬೇಕಾಗಿದೆ, ಆ ಕೆಲಸವನ್ನು ಮಾಡಲು ಯಾವ ಸಾಧನಗಳು ಬೇಕು, ನಮಗೆ ಎಷ್ಟು ಸಮಯ ಹತ್ತುವದು? ಎಂದು ಮುಂತಾಗಿ ಆಲೋಚಿಸ ಬೇಕಾಗುವದು. ಅವಶ್ಯವಿದ್ದ ಉಪಕರಣಗಳನ್ನು ಸಂಗ್ರಹಿಸುವಾಗ ಅವು ಯಾತರಿಂದ ಮಾಡಿದವು, ಅವು ಎಲ್ಲಿ ದೊರೆಯುವವು, ಬೆಲೆ ಎಷ್ಟು? ಎಂದು ಮುಂತಾಗಿ ಕೆಲವು ಸಂಗತಿಗಳ ಜ್ಞಾನ ದೊರೆಯುವದು. ಪ್ರತ್ಯಕ್ಷ ಕಾರ್ಯ ಮಾಡುವಾಗ್ಗೆ, ಅದು ಒಳ್ಳೆಯದಾಗಬೇಕಾದರೆ, ಅದನ್ನು ಹೇಗೆ ಮಾಡ ಬೇಕು, ಹಾಗೆಯೆ ಏಕೆ ಮಾಡಬೇಕು? ಒಂದು ಮನಸ್ಸು ಚುರುಕಾಗಿ ಕೆಲಸ ಮಾಡುವದು. ಕೆಲಸ ಮುಗಿದ ಮೇಲೆ, ಕೆಲಸದ ಪರಿಣಾಮ ನೋಡಿ, ಕೆಲವೊಂದು ನಿರ್ಣಯಗಳಿಗೆ ಬರುತ್ತೇವೆ. ಮೊದಲು ಯೋಚಿಸಿ ದಂತೆ ಕೆಲಸವು ನಡೆಯಿತೋ ಇಲ್ಲವೋ ಎಂದು ತುಲನೆ ಮಾಡಬಹುದು. ಒಂದು ಕೆಲಸವನ್ನು ಶಾಸ್ತ್ರಬದ್ಧವಾಗಿ ಮಾಡಬೇಕಾದರೆ, ಇವೆಲ್ಲ ಮಾನಸಿಕ ಕ್ರಿಯೆಗಳು ನಡೆಯುವವು. ಕೆಲಸವು ಬುದ್ಧಿಯ ಪ್ರಚೋದನೆಗೆ ಸಾಧನ ವಾಗಲಿಲ್ಲವೇ? ಯಾವುದೊಂದು ಕೆಲಸ ಮಾಡುವಾಗ ಕೆಲವೊಂದು ಮಟ್ಟಿಗೆ ಗಣಿತ, ಭೂಗೋಲ, ವಿಜ್ಞಾನ ಇತ್ಯಾದಿ ವಿಷಯಗಳ ಜ್ಞಾನವೂ ದೊರೆ ಯುವದು; ಕೆಲಸವು ಬೌದ್ಧಿಕ ಶಿಕ್ಷಣದ ಸಾಧನವಾಗಲಿಲ್ಲವೇ?

ಒಂದು ಕೆಲಸವನ್ನು ಸಶಾಸ್ತ್ರವಾಗಿ ಮಾಡಬೇಕಾದರೆ, ● **ರಾಜ ನಾಯಗಂ** ಅವರು ತೋರಿಸಿದ ನಾಲ್ಕು ಮೆಟ್ಟಿಲುಗಳನ್ನು ಗಮನಿಸಬೇಕು- ಅವು ಯಾವವೆಂದರೆ: (೧) ಉದ್ದೇಶ ನಿರ್ದಿಷ್ಟಗೊಳಿಸುವದು. (೨) ಯೋಜನೆ. (೩) ಕ್ರಿಯೆ (೪) ಪರಿಶೀಲನೆ. ಮೂಲ ಶಿಕ್ಷಣ ಶಾಲೆ ಯಲ್ಲಿ ಸಾಮುದಾಯಿಕ ಜೀವನಕ್ಕೆ ಪ್ರಾಶಸ್ತ್ಯ ಕೊಡಲಾಗಿದೆ. ಸಾವ

ದಾಯಿಕವಾಗಿ ಒಂದು ಕೆಲಸವನ್ನು ಕೈಕೊಳ್ಳಬೇಕಾದರೆ, ಮೇಲಿನ ಮೆಟ್ಟುಗಳಂತೆ ಕಾರ್ಯವು ಸಾಗಲೇ ಬೇಕು; ಅಂದರೆ ಮಾತ್ರ ಕೆಲಸವು ಶಿಕ್ಷಣವಾಗುವದು. ಕೆಲಸ ಮಾಡುತ್ತ ಮಾಡುತ್ತ ಮಕ್ಕಳಲ್ಲಿ ಕೆಲವು ಉತ್ತಮ ಚಟಗಳು ನೆಲೆಗೊಳ್ಳುವವು. ಒಳ್ಳೇ ರೀತಿಯಿಂದ ಕೆಲಸ ಮಾಡಬೇಕೆಂಬುದು ತಿಳಿಯುವದು. ಕೆಲಸದ ಕಡೆಗೆ ಒಲವು ಹುಟ್ಟುವದು. ಕೆಲಸದ ಹತೋಟಿ ಸಿಗುವದು. ಹಸ್ತ ಚಾಪಲ್ಯ ಬೆಳೆಯುವದು. ಸುಂದರ ಕೃತಿಗಳಲ್ಲಿ ಪ್ರೇಮ ಹುಟ್ಟುವದು. ರಚನಾ ಪ್ರವೃತ್ತಿ ಪ್ರಚೋದನೆಯಾಗುವದು. ಕಾರ್ಯ ಪ್ರೇರಣೆ ಹುಟ್ಟಿ ಬೆಳೆಯುವದು. ಪ್ರತ್ಯಕ್ಷ ನಿರೀಕ್ಷಣ, ಪರೀಕ್ಷಣಗಳ ಮುಖಾಂತರ ಹೊಸ ಸಂಗತಿಗಳ ಜ್ಞಾನ ಸಿಗುವದು, ಇವೆಲ್ಲ ಕೆಲಸದ ಮುಖಾಂತರ ನಡೆಯುವ ಬೌದ್ಧಿಕ ಚಟುವಟಿಕೆಗಳಲ್ಲವೇ? ಒಂದು ದೊಡ್ಡ ಕೋಣೆಯನ್ನು ಕಸಗೂಡಿಸುವದದೆ ಎಂದು ತಿಳಿಯುವಾ. ಎಂಥ ಕಸಬರಿಗೆಯನ್ನು ಉಪಯೋಗಿಸಬೇಕು, ಕಸಬರಿಗೆಯನ್ನು ಯಾವ ಕೋನದಲ್ಲಿ ಹಿಡಿದರೆ ಹೆಚ್ಚು ಕಸ ಮುಂದೆ ಸರಿಯುವದು, ಗಾಳಿಯು ಹೇಗೆ ಬೀಸುತ್ತಿರುವದು? ಮುಂತಾದ ಪ್ರಶ್ನೆಗಳನ್ನು ವಿಚಾರಿಸಿದರೆ ಮಾತ್ರ ಆ ಕೆಲಸವು ಸಶಾಸ್ತ್ರವಾಗುವದು. ಕಸ ಚಲ್ಲುವದಕ್ಕಾಗಿ ತಗ್ಗು ತೋಡುವದಿದೆ. ಎಂದು ತಿಳಿಯುವಾ. ತಗ್ಗು ಎಷ್ಟು ಉದ್ದ, ಅಗಲ, ಆಳ ಇರಬೇಕೆಂಬುವನ್ನು ನಿರ್ಣಯಿಸಬೇಕು. ತಗ್ಗು ತೋಡುವ ಜನರೆಷ್ಟು, ಆ ಕೆಲಸಕ್ಕೆ ಬೇಕಾಗುವ ಸಮಯವೆಷ್ಟು, ಅಗತ್ಯವಿದ್ದ ಸಾಮಾನುಗಳು ಯಾವವು? ಎಂದು ಮುಂತಾಗಿ ಆಲೋಚಿಸಬೇಕು. ಹೀಗೆ ಮಾಡಿದರೆ, ಆ ಕೆಲಸವು ಒಳ್ಳೆಯದಾಗುವದು. ಜೀವನಕ್ಕೆ ಸಂಬಂಧಿಸಿದ ಯಾವುದೊಂದು ಕೆಲಸವನ್ನು ಆರಿಸಿಕೊಂಡರೂ, ಅದನ್ನು ಸಶಾಸ್ತ್ರವಾಗಿ ಮಾಡಿದರೆ, ಅದು ಶಿಕ್ಷಣವಾಗುವದು, ಅರ್ಥಾತ್ ಮಗುವಿನ ಜೀವನ ತಿದ್ದುವಿಕೆಗೆ ನೆರವಾಗುವದು.

"೭–೧೩ ವಯಸ್ಸಿನ ಮಕ್ಕಳ ಶಿಕ್ಷಣದಲ್ಲಿ ದೈಹಿಕ ಶ್ರಮವು ಶಗ ಗಳ್ಳಾಗಬೇಕು. ಅದು ಮಗುವಿನ ಮನೆತನದ ಪರಂಪರೆಯ ಬೇಡಿಕೆಗಳನ್ನು ಪೂರೈಸಿದರೆ, ಅದು ಅವನ ಮನಸ್ಸಿನ ಬೇಡಿಕೆಗಳನ್ನು ಪೂರೈಸು

ವದು. ಅವನ ಮನಸ್ಸು ವಸ್ತುವಾಚಕದಿಂದ ಭಾವವಾಚಕದ ಕಡೆಗೆ ನಿಧಾನವಾಗಿ ಸಾಗುವದು." **ಜನಾಬ ಕೆ. ಜಿ. ಸೈಯದೈನ**

ಒಟ್ಟಿನಲ್ಲಿ ಹೇಳುವದಾದರೆ, ನಿರೀಕ್ಷಣೆ, ಆಲೋಚನೆ, ಸಂಕಲನ. ಸ್ಮರಣ, ತುಲನೆ; ಅನುಮಾನ, ನಿರ್ಣಯ ಮುಂತಾದ ಮನಸ್ಸಿನ ಶಕ್ತಿಗಳೆಲ್ಲ ದೈಹಿಕ ಶ್ರಮದ ಮುಖಾಂತರ ಜಾಗೃತವಾಗುವವು, ಅವು ಬೆಳೆಯುವವು. ದೈಹಿಕ ಕಾರ್ಯಕ್ಕೂ, ಮೆದುಳಿನ ಕಾರ್ಯಕ್ಕೂ ನಿಕಟ ಸಂಬಂಧವಿದೆ. ದೈಹಿಕ ಶ್ರಮವು ಮಗುವಿನ ಒಲವುಗಳನ್ನೂ, ಅಭಿರುಚಿಗಳನ್ನೂ, ಅಂತಃ ಶಕ್ತಿಗಳನ್ನೂ ಪ್ರಕಟಮಾಡುವದು. "ನಾನು ಕವಿಯಾಗಿದ್ದರೆ. ಐದು ಬೆರಳುಗಳು ಮಾಡಬಹುದಾದ ಅದ್ಭುತ ಕಾರ್ಯಗಳನ್ನು ವರ್ಣಿಸುತ್ತಿದ್ದೆ" ಎಂದು ಗಾಂಧೀಜಿ ಒಮ್ಮೆ ಉದ್ಗಾರ ತೆಗೆದರು. ಕೆಲಸವು ಕ್ರಿಯಾತ್ಮಕ ಚಟುವಟಿಕೆಯ ಸಾಧನವು.

ಜಾನ್ ಡ್ಯೂಯಿ ಅವರ ವಿಚಾರಪರ ಹಾಗು ಭಾವನಾಪರ ಕೃತಿಗಳಲ್ಲಿ ಅಂತರವಿದೆಯೆಂದು ತೋರಿಸಿರುವರು. ವಿಚಾರಪರ ಕೃತಿಯು ಕೆಳಗಿನ ಐದು ಮೆಟ್ಟಿಗಳನ್ನು ದಾಟುವದು:—(೧) ಬಿಡಿಸಬೇಕಾದ ಸಮಸ್ಯೆಯ ಪರಿಚಯ (೨) ಸರಿಯಾದ ಪರಿಹಾರಕ್ಕೆ ಸಹಾಯಕವಾಗುವ ಸಂಗತಿಗಳ ಸಂಗ್ರಹ (೩) ಪರಿಹಾರದ ತಾತ್ಪೂರ್ತಿಕ ಒಂದು ಸೂಚನೆ (ಯೋಜನೆ) (೪) ಅದರ ಪ್ರಯೋಗ (೫) ಸೂಚಿತ ಪರಿಹಾರ ಸ್ವೀಕಾರ ಇಲ್ಲವೆ ನಿರಾಕರಣೆ. ಭಾವನಾಪರ ಕೃತಿಯು ಕೆಳಗಿನ ಮೂರು ಮೆಟ್ಟಿಗಳನ್ನು ದಾಟುವದು:—(೧) ಸಮಸ್ಯೆಯ ಪರಿಚಯ (೨) ತೀವ್ರ ನಿರ್ಣಯ (೩) ಆದರಂತೆ ಕೃತಿ (ಕೆಲಸ).

ಕ್ರಾಫ್ಟ ಕೆಲಸದಲ್ಲಿ ಮಕ್ಕಳ ಭಾವನಾಪರ ಕೃತಿಯಿಂದ ಮೂರಿದ್ದು ವಿಚಾರಪರ ಕೃತಿಗೆ ತೆರಳುವಂತೆ ಮಾಡುವದು ಶಿಕ್ಷಕರ ಮಹತ್ವದ ಕೆಲಸ. ಇದುವೇ ಉದ್ಯಮ ಮೂಲ ಶಿಕ್ಷಣದ ಮೂಲ್ಯ. "ಕೆಲಸವು ಅನೇಕ ಉತ್ಪಾದಕ ಪ್ರೇರಣೆಗಳನ್ನು ಕೆರಳಿಸುತ್ತದೆ ಮತ್ತು ಬಗೆಬಗೆಯ ಬೌದ್ಧಿಕ ಶಕ್ತಿ ವೇತೆಗಗಳನ್ನು ಬಯಲಿಗೆಳೆಯುತ್ತದೆ; ಇದಕ್ಕೆ ಉತ್ಸಾಹ. ನಿರ್ಧಾರ. ವಿಚಾರ ಹಾಗು ಸ್ವಾತಂತ್ರ್ಯ ಇವು ಬೇಕು ಮತ್ತು ಇದು (ಕೆಲಸವು) ಶೀಲಸಂವರ್ಧನೆಗೆ ಆಗತ್ಯವಿದ್ದ ಉದ್ದೇಶ ಸ್ಥಿರತೆಯ ತರಬೇತಿಗೆ

ಉತ್ತಮ ಅನುಕೂಲತೆಯನ್ನು ಒದಗಿಸುತ್ತದೆ." **ಪ್ರೊ. ಸಿರ್ಮೊಕ್.**

**ದೈಹಿಕ ಶ್ರಮವೂ ಶೀಲ ಪೋಷಣೆಯೂ:**

ಮೂಲಶಿಕ್ಷಣ ಶಾಲೆಗಳಲ್ಲಿ ಮಕ್ಕಳು ಕೆಲಸಗಳನ್ನು ಒಂಟಿಯಾಗಿ ಮಾಡುವದಿಲ್ಲ; ಶಾಲೆಯ ಸಮಾಜದ ಘಟಕಗಳಾಗಿ ಮಾಡುವರು. ಆದರಿಂದ ಅವರಲ್ಲಿ ಸಾಮಾಜಿಕ ಭಾವನೆ (Social Spirit) ಬೆಳೆಯುವದು. ಸಹಕಾರ, ಸಹಾನುಭೂತಿ, ಸರಳತನ, ಶಿಸ್ತು ಈ ಗುಣಗಳು ಅವರಲ್ಲಿ ಸಾಂಘಿಕ ಜೀವನದ ಪರಿಣಾಮವಾಗಿ ಹುಟ್ಟುವವು. ಸ್ವಾವಲಂಬನ ಪ್ರವೃತ್ತಿ ಬೆಳೆಯುವದು. ಇತರರ ಅನುಭವದಲ್ಲಿ ಪಾಲುಗಾರರಾಗುವ ಇಚ್ಛೆ ಹುಟ್ಟುವದು. ಜೀವನದಲ್ಲಿ ತಮ್ಮ ದೋಷ-ಗುಣಗಳನ್ನು ಅರಿಯುವರು; ಪ್ರಸಂಗ ಬಿದ್ದರೆ ಯಾವ ಕಾರ್ಯವನ್ನಾದರೂ ಮಾಡಲು ಹಿಂಜರಿಯಬಾರದೆಂದು ಅವರು ಮನಗಾಣುವರು. ಮೂಲ ಶಿಕ್ಷಣ ಶಾಲೆಗಳಲ್ಲಿ ಎಲ್ಲ ಮಕ್ಕಳೂ ಹೆಗಲಿಗೆಹೆಗಲು ಹಚ್ಚಿ ಕೆಲಸ ಮಾಡುವರು. ಭಂಗೀ ಕೆಲಸವನ್ನು ಮಾಡುವದೂ ಕಡಿಮೆಯದಲ್ಲ ಎಂಬ ಭಾವನೆಯಿಂದ ಮಕ್ಕಳು ಬೆಳೆಯುವರು. ಇದರಿಂದ ಶ್ರಮಗೌರವ ತತ್ವವು ಅವರ ರಕ್ತನಾಳದಲ್ಲಿ ಸೇರುವದು. ಶ್ರಮಜೀವಿಗಳಿಗೆ ಗೌರವ ಕೊಡಲು ಅವರು ಕಲಿಯುವರು. ಮಕ್ಕಳು ಮನೆಗೆಲಸಗಳಲ್ಲಿ ತಮ್ಮ ತಂದೆ---ತಾಯಿಗಳಿಗೆ ನೆರವಾಗುವರು. ಹಿಂದುಸ್ತಾನದಲ್ಲಿ ನೂರಕ್ಕೆ ೯೦ ರಷ್ಟು ಜನರು ಶ್ರಮಜೀವಿಗಳಾಗಿದ್ದಾರೆ. ಆದರಿಂದ ಶ್ರಮಜೀವಿಗಳಿಗೂ ಬುದ್ಧಿಜೀವಿಗಳಿಗೂ ಇರುವ ಕೃತ್ರಿಮ ಅಂತರವು ಮಾಯವಾಗಬೇಕು. ಇದಕ್ಕೆ ಉದ್ಯಮ ಮೂಲ ಶಿಕ್ಷಣವೇ ತಕ್ಕ ಉಪಾಯ. ಉತ್ತಮ ಕೆಲಸ ಮಾಡಿದವರನ್ನು ಮೆಚ್ಚುವ, ಉತ್ತಮ ನಾಯಕರಿಗೆ ವಿಧೇಯರಾಗುವ, ಉತ್ತಮ ಕೆಲಸಗಳನ್ನು ತಾವು ಮಾಡಲು ಇಚ್ಛಿಸುವ ವ್ಯಕ್ತಿಗಳು ತಯಾರಾಗುವರು.

ಮಕ್ಕಳಿಗೆ ಕೆಲಸದ ಮುಖಾಂತರ ಶಿಕ್ಷಣ ದೊರೆಯುವದರಿಂದ ಅವರಲ್ಲಿ ಗಟ್ಟಿತನ (ಧೈರ್ಯ), ದೃಢನಿಶ್ಚಯ ಪರೋಪಕಾರ ಬುದ್ಧಿ ಇವು ಸ್ವಾಭಾವಿಕವಾಗಿ ಬೆಳೆಯುವವು. ಅವರಲ್ಲಿ ಉದಾತ್ತ ಧ್ಯೇಯಗಳು ನೆಲೆಗೊಳ್ಳುವವು. ಅವರು ಸುಸಂಸ್ಕೃತ ನಾಗರಿಕರಾಗಲು ಹಂಬಲಿಸುವರು. ಮಕ್ಕಳ ಶೀಲ ಪೋಷಣೆಯ ಕಾರ್ಯದಲ್ಲಿ ಇದಕ್ಕಿಂತ ಹೆಚ್ಚಿನದು ಯಾವದು

ಕೆಲಸವು ಮಕ್ಕಳ ಸ್ನಾಯುಗಳನ್ನು ಬಲಪಡಿಸುವದು; ಬೌದ್ಧಿಕ ಶಕ್ತಿಗಳನ್ನು ಬೆಳೆಸುವದು; ಶೀಲ ಪೋಷಣೆ ಮಾಡುವದು; ಮಗುವಿನ ಸಮುದಾಯ ಬೆಳವಣಿಗೆಯನ್ನು ನಿರ್ದೇಶಿಸುವದು; ಹೊಸ ಸಮಾಜ ರಚನೆಯ ಕಾರ್ಯಕ್ಕೆ ಬಾಲಕರನ್ನು ತೊಡಗಿಸುವದು. ಆದುದರಿಂದ ಕೆಲಸವೇ ಶಿಕ್ಷಣವೆಂದು ಶ್ರೀ. ಆರ್ಯನಾಯಕಂ ಅವರು ಒತ್ತಿ ಹೇಳುತ್ತಿದ್ದಾರೆ. ಇದು ಮೂಲ ಶಿಕ್ಷಣ ವಿಚಾರ ಪ್ರವಾಹದ ಇಂದಿನ ಕೊನೆಯ ಹಂತವೆಂದು ಹೇಳಬಹುದು.

---

## ೧೮ ಗುರೂಜಿ

ಶಿಕ್ಷಕರಿಗೆ ಬೇರೊಂದು ಹೆಸರಿನಿಂದ ಕರೆಯುವದು ಹೊಸ ಶಿಕ್ಷಣದ ಒಂದು ವೈಶಿಷ್ಟ್ಯವೆಂದೇ ಹೇಳಬಹುದು. ಅಮೇರಿಕೆಯಲ್ಲಿ ಶಿಕ್ಷಕನಿಗೆ ಡಾಯರೆಕ್ಟರ ಹಾಗೂ ಶಿಕ್ಷಿಕೆಗೆ ಡಾಯರೆಕ್ಟ್ರೆಸ್ ಎಂದು ಕರೆಯುವ ರೂಢಿಯುಂಟು. ಮಕ್ಕಳ ಬೆಳವಣಿಗೆಯನ್ನು ನಿರ್ದೇಶಿಸುವದು ಶಿಕ್ಷಕರ ಆದ್ಯ ಕರ್ತವ್ಯ ಎಂಬುದೇ ಈ ಹೊಸ ದೃಷ್ಟಿಯ ನಿರೂಪ. ಮೂಲ ಶಿಕ್ಷಣ ಯೋಜನೆಯಲ್ಲಿ ದುಡಿಯುತ್ತಿರುವ ಶಿಕ್ಷಕನಿಗೆ ಗುರೂಜಿ ಎಂದು ಮಕ್ಕಳು ಕರೆಯುವರು. ಶಿಕ್ಷಕನು ಮಕ್ಕಳ ಗುರು. ಶಾಲೆಯು ವಿದ್ಯಾಪೀಠ.

**ವಿದ್ಯಾಮಂದಿರ:**

ದಕ್ಷಿಣ ಭಾಗದ ವಿದ್ಯಾಧಿಕಾರಿಗಳಾದ ಶ್ರೀ. ಎ. ಎನ್. ಸಾನೆ ಅವರು ಒಮ್ಮೆ ಗೋಪನಕೊಪ್ಪದಲ್ಲಿ ನೂಲುವ ತರಬೇತಿ ವರ್ಗದ ಮುಕ್ತಾಯ ಸಮಾರಂಭದ ಅಧ್ಯಕ್ಷೀಯ ಭಾಷಣದಲ್ಲಿ—"ನಮ್ಮ ಶಾಲೆಯು ವಿದ್ಯಾಮಂದಿರವು; (Temple of Learning)ಒಂದು ದೇವ ಮಂದಿರವನ್ನು ನಾವು ಹೇಗೆ ಮಡಿಯಿಂದ, ನಿರ್ಮಲ ಮನಸ್ಸಿನಿಂದ, ಭಕ್ತಿ ವಿನಯಗಳಿಂದ ಪ್ರವೇಶಿಸುವೆವೋ ಹಾಗೆಯೇ ನಾವು ಶಾಲೆಯಲ್ಲಿ ಪ್ರವೇಶ ಮಾಡಬೇಕು; ಶಾಲೆಯು ಪವಿತ್ರವಾದ ಸ್ಥಾನವು; ಅಲ್ಲಿ ನಾವು ಪವಿತ್ರ ಮನಸ್ಸಿನಿಂದ ಹೋಗಬೇಕು ಎಂಬ ಭಾವನೆಯು ಮಕ್ಕಳಲ್ಲಿಯೂ ಶಿಕ್ಷಕರಲ್ಲಿಯೂ ಹುಟ್ಟಿ ಬೆಳೆಯಬೇಕು; ಎಂದರೆ ಶಿಕ್ಷಕನು ನಿಜವಾದ ಗುರೂಜಿಯ ಸ್ಥಾನಕ್ಕೆ ಏರುವನು" ಎಂದು ಮುಂಶಾಗಿ ಉಪದೇಶ ಮಾಡಿದರು. ಶಿಕ್ಷಣವು ಪವಿತ್ರವಾದ ಕಾರ್ಯವು; ಅದು ಕೇವಲ ಹೊಟ್ಟೆಯ ಹೋರೆಯಲ್ಲ. ಆದರಿಂದ ಶಿಕ್ಷಕನಿಗೆ ಗುರೂಜಿ ಎಂಬ ಹೆಸರು ಕೊಡಲಾಗಿದೆ.

**ವೃತ್ತಿಯಲ್ಲಿ ಶ್ರದ್ಧೆ:**

"ಏನೊಂದು ಕೆಲಸ ಮಾಡಬಲ್ಲವನು ಆ ಕೆಲಸ ಮಾಡುವನು. ಏನೂ ಮಾಡಲಾರದವನು ಶಿಕ್ಷಕನಾಗುವನು" ಎಂದು ಆಂಗ್ಲ ಭಾಷಾ

ವಿಶಾರದ ಜಾರ್ಜ ಬರ್ನಾರ್ಡ ಶಾ ಅವರು ಒಮ್ಮೆ ಉದ್ಗಾರ ತೆಗೆದಿರುವರು ಅದು ಅವರ ಸಾಮಾಜಿಕ ವಿಡಂಬನದ ಒಂದು ಚಿತ್ರ. ಯಾವುದೊಂದು ಪರೀಕ್ಷೆ ಪಾಸಾದ ಕೂಡಲೆ ಒಂದು ಕೆಲಸದಲ್ಲಿ ವ್ಯಕ್ತಿಯು ತೊಡಗುವನು. ಯಾವ ಕೆಲಸವೂ ಅವನಿಗೆ ದೊರೆಯದಿದ್ದರೆ, ಅವನು ಶಿಕ್ಷಕನಾಗುವನು. ಶಿಕ್ಷಕನಾಗುವದು ಅವನಿಗೆ ಅನಿವಾರ್ಯವಾದ ಕೆಲಸವಾಗುವದು; ಅವನ ಇಚ್ಛಿತ ಕೆಲಸವಲ್ಲ. ಆದರಿಂದ ಶಿಕ್ಷಣ ಕಾರ್ಯವು ಅವನಿಗೆ ಹೊಟ್ಟೆಯ ಹೋರೆ. ಅಂಥವನಿಗೆ ಆ ಕಾರ್ಯದಲ್ಲಿ ಶ್ರದ್ಧೆ ಹುಟ್ಟುವದೇ ಇಲ್ಲ; ಯಾಕಂದರೆ ಸ್ವಯಂಸ್ಫೂರ್ತಿಯೇ ಇಲ್ಲ. ಮೂಲ ಶಿಕ್ಷಣ ಯೋಜನೆಯಲ್ಲಿ ದುಡಿಯುವ ಶಿಕ್ಷಕರು ಇಚ್ಛಾ ಪ್ರೇರಿತರಿರಬೇಕು. ತಮ್ಮ ವೃತ್ತಿಯಲ್ಲಿ ಶ್ರದ್ಧೆಯುಳ್ಳವರಿರಬೇಕು. ಶಿಕ್ಷಣವು ರಾಷ್ಟ್ರನಿರ್ಮಾಣದ ಕಾರ್ಯವೆಂದು ತಿಳಿಯಬೇಕು. ಅವರಲ್ಲಿ ಸಮಾಜಿಕ ದೃಷ್ಟಿಕೋನವಿರಬೇಕು. ಝಾಕೀರರ ವರದಿ —“ ಕಲಿಸುವದಕ್ಕೆ ಸಮಾಜಿಕ ಹಾಗು ನೈತಿಕ ವಿಶೇಷ ಒಲವುಗಳು ಮತ್ತು ಗುಣಗಳು ಬೇಕು. ಈ ವೃತ್ತಿಗೆ ಬರಲು ಬಯಸುವ ಪ್ರತಿಯೊಬ್ಬ ವ್ಯಕ್ತಿಯೂ ಅದಕ್ಕೆ ಅರ್ಹನೆಂದು ಗ್ರಹಿಸುವದು ಸರಿಯಲ್ಲ. ಆದುದರಿಂದ ಬಹಳ ಕಾಳಜಿ ಹಾಗು ಮುಂಜಾಗ್ರತೆ ವಹಿಸಿ ನಾವು ( ಶಿಕ್ಷಕರನ್ನು ) ಆರಿಸಬೇಕು. ಮನಶ್ಶಾಸ್ತ್ರಜ್ಞರು ವರ್ಗೀಕರಿಸಿದಂತೆ ‘ ಸಾಮಾಜಿಕ ಗುಂಪಿಗೆ ’ ಸೇರಿದರೆ ಶಿಕ್ಷಕರಿಗೇ ನಾವು ಪ್ರಾಶಸ್ತ್ಯ ಕೊಡಬೇಕು........ಅಸ್ಪೃಶ್ಯತೆ ಹಾಗು ಸಹಭೋಜನ ಎಂಬ ಬೇಡಿಕೆಗಳಿಂದ ಮುಕ್ತರಾದಂಥವರು ನಮ್ಮ ಶಿಕ್ಷಕರಿರಬೇಕು. ”

**ಸಾಮಾಜಿಕ ಸಮತೆಯಲ್ಲಿ ಶ್ರದ್ಧೆ:**

ಅಹಿಂಸಾತ್ಮಕ ಸಮಾಜ ನಿರ್ಮಾಣ ಮಾಡುವುದು ಮಹಾತ್ಮರ ಮನೀಷೆಯಾಗಿತ್ತು. ಅದುವೇ ಮೂಲಶಿಕ್ಷಣದ ಆದರ್ಶವು. ಸಾಮಾಜಿಕ ಸಮತೆಯೇ ಅವರ ತಳಗಲ್ಲು. ಪ್ರತಿಯೊಬ್ಬ ಗುರುವಿನಲ್ಲಿ ಈ ಆದರ್ಶವನ್ನು ಮುಟ್ಟುವ ಹಂಬಲವಿರಬೇಕು. ಬಾಹ್ಯಾಡಂಬರವು ಇದರ ಒರೆಗಲ್ಲು ಅಲ್ಲ, ಪ್ರತ್ಯಕ್ಷ ಆಚರಣೆ ಅದರ ನಿದರ್ಶನ. ಸಾಮಾಜಿಕ ಸಮತೆಯಲ್ಲಿ ಶ್ರದ್ಧೆಯು ಗುರುಗಳಲ್ಲಿ ತೋರಬೇಕು; ಅದು ಮಕ್ಕಳಿಗೆ ಮಾರ್ಗದರ್ಶಕವಾಗಬೇಕು. ಇದರ ಮಹತ್ವವನ್ನು ಝಾಕೀರ ವರದಿಯಲ್ಲಿ ಸ್ಪಷ್ಟ

ಮಾಡಲಾಗಿದೆ. ಸಹಭೋಜನದಲ್ಲಿ ಯಾರಿಗೆ ಶ್ರದ್ಧೆಯಿಲ್ಲ—ಅಸ್ಪೃಶ್ಯತೆ ಯನ್ನು ದೂರ ಮಾಡುವ ಕಾರ್ಯದಲ್ಲಿ ಯಾರಿಗೆ ನಂಬಿಗೆಯಿಲ್ಲ—ಅಂಥವರಿಗೆ ಮೂಲ ಶಿಕ್ಷಣ ಯೋಜನೆಯಲ್ಲಿ ಸ್ಥಾನವೇ ಇಲ್ಲ.

**ಸೇವಾಬುದ್ಧಿ:**

ಮೂಲ ಶಿಕ್ಷಣ ಯೋಜನೆಯಲ್ಲಿ ಸಾಂಘಿಕ ಜೀವನದ ಹಾಗು ಸಾಮಾಜಿಕ ಸೇವೆಯ ಅನೇಕ ಚಟುವಟಿಕೆಗಳು ಸೇರಿವೆ. ಅದರಿಂದ ಗುರೂಜಿಯಲ್ಲಿ ಸೇವಾ ಬುದ್ಧಿ ಅವಶ್ಯವಾಗಿ ಇರಬೇಕು; ಇಲ್ಲವಾದರೆ ಸೇವೆ ಶಾಬ್ದಿಕವಾಗುವದು; ಕೃತಿ ಮೂಲ ಶಿಕ್ಷಣವು ಮಾತಿನ ಮಾಲೆಯನ್ನು ಹೆಣೆದಂತಾಗುವದು.

"ಹಳ್ಳಿಯ ಕೈಗಾರಿಕೆಗಳ ಮುಖಾಂತರ ನಮ್ಮ ಮಕ್ಕಳಿಗೆ ಶಿಕ್ಷಣ ಕೊಟ್ಟು ಹಳ್ಳಿಗಳನ್ನು ಜೀವಂತ ಇಡಬೇಕಾಗಿದೆ" ಎಂದು ಗಾಂಧೀಜಿ ಹೇಳಿದರು. ಹಳ್ಳಿಯ ಮಕ್ಕಳು ಒಳ್ಳೆಯವರಾಗಿ ಬೆಳೆಯ ಬೇಕು; ಹಳ್ಳಿಯ ಮನೆಗಳು ಸ್ವಚ್ಛಯಿರಬೇಕು: ಓಣಿಗಳು ಅಚ್ಚುಕಟ್ಟಾ ಗಿರಬೇಕು, ಉದ್ಯೋಗಗಳು ಬೆಳೆಯಬೇಕು; ಉತ್ಪಾದನ ಶಕ್ತಿ ಹೆಚ್ಚಾಗ ಬೇಕು; ಜನರ ಜೀವನಮಟ್ಟ ಏರಬೇಕು. ಇವೆಲ್ಲ ಕಾರ್ಯಗಳು ಶಿಕ್ಷಣದ ಮುಖಾಂತರ ಸಾಗಬೇಕು. ಶಿಕ್ಷಕನು ಮೈತುಂಬ ಕಣ್ಣುಳ್ಳವ ನಾದರೆ ಸಾಲಿಯನ್ನು ಸಾಮಾಜಿಕ ಪುನರ್ರಚನೆಯ ಕೇಂದ್ರ ವನ್ನಾಗಿ ಪರಿವರ್ತಿಸುವನು; ಅಜ್ಞಾನ ಜನರಿಗೆ ಜ್ಞಾನದ ಬೆಳಕು ತೋರಿಸು ವನು, ಮಬ್ಬಿನಲ್ಲಿ ಅಲೆಯುವವರಿಗೆ ಮುಂಗೈ ಕೊಡುವನು. ಹೊಸ ಶಿಕ್ಷಕನು ಹೇಳುವದೇನಂದರೆ, "ನನ್ನ ವಿದ್ಯಾರ್ಥಿಯನ್ನು ಉತ್ತಮ ಮನುಷ್ಯನನ್ನಾಗಿ ಮಾರ್ಪಡಿಸಿದ್ದರೆ ಮತ್ತು ಹಾಗೆ ಮಾಡುವಲ್ಲಿ ನನ್ನ ಎಲ್ಲ ಉಪಾಯಗಳನ್ನು ಉಪಯೋಗಿಸಿದ್ದರೆ, ಅವನ ಜೊತೆಗೆ ನನ್ನ ಕರ್ತವ್ಯ ಮಾಡಿದ್ದೇನೆ; ಅಷ್ಟೇ ಸಾಕು ನನಗೆ! ಎಂದು ಗಾಂಧೀಜಿ ಹೇಳಿದರು. ಈ ಗುರಿ ಸಾಧಿಸುವಲ್ಲಿ ಶಿಕ್ಷಕನು ನಿಜವಾದ ಸಮಾಜ ಸೇವಕನಾಗಬೇಕು. ತನ್ನ ಕರ್ತವ್ಯದ ಅರಿವು ಯಾವನಲ್ಲಿ ಕಂಡಬರುವದೋ ಆವನಲ್ಲಿ ಸೇವಾ ಬುದ್ಧಿಯೂ ಒಡಮೂಡುವದು.

**ಮೂಲ ಉದ್ಯೋಗದಲ್ಲಿ ಪ್ರಾವೀಣ್ಯತೆ:**

ಮೂಲ ಉದ್ಯೋಗದ ಮುಖಾಂತರ ಮಕ್ಕಳಿಗೆ ಶಿಕ್ಷಣ ಕೊಡಬೇಕಾಗುವದು. ಮೂಲ ಉದ್ಯೋಗದಲ್ಲಿ ಶಾಸ್ತ್ರೀಯ ಜ್ಞಾನ ಗುರುಗಳಿಗೆ ಇರಬೇಕು. ಉದ್ಯೋಗದ ವಿವಿಧ ಕ್ರಿಯೆಗಳಲ್ಲಿ ಅಡಗಿದ ಸಾಮಾನ್ಯ ಜ್ಞಾನವನ್ನು ಸಂಬಂಧೀಕರಿಸಲು ಅನುಕೂಲವಾಗುವದು. ಎಷ್ಟು ಹೆಚ್ಚು ಉದ್ಯಮದ ಶಾಸ್ತ್ರವನ್ನು ಆಳವಾಗಿ ಅಭ್ಯಾಸ ಮಾಡುವರೋ ಅಷ್ಟು ಹೆಚ್ಚು ಸುಲಭವಾಗಿ ಸಾಮಾನ್ಯ ಜ್ಞಾನವನ್ನು ಸಂಬಂಧೀಕರಿಸುವರು.

**ಪ್ರಯೋಗ ದೃಷ್ಟಿ:**

"ಇನ್ನುಮುಂದೆ ಸಾಲೆಗಳು ಪ್ರಯೋಗ, ಸಂಶೋಧನೆ ಹಾಗು ಕ್ರಿಯೆಗಳ ಸ್ಥಳಗಳಾಗುವವು. ಅಲ್ಲಿ ಉತ್ಪಾದಕ ಉದ್ಯಮ, ಸಾಮಾಜಿಕ ಹಾಗು ನೈಸರ್ಗಿಕ ವಾತಾವರಣಗಳಿಗೆ ಸಭಂಧಿತವಾದ ಪ್ರತ್ಯಕ್ಷ ಜೀವನ ಸನ್ನಿವೇಶಗಳ ಮುಖಾಂತರ ಶಿಕ್ಷಣ ಕಾರ್ಯವು ನಡೆಯುವದು."

**ಶ್ರೀ. ಬಾಬುಲಾಲ ಗುಪ್ತ**

ಮೂಲ ಶಿಕ್ಷಣವು ಹೊಸ ಶಿಕ್ಷಣವು. ಆದರಿಂದ ಶಿಕ್ಷಕರಲ್ಲಿ ಪ್ರತಿಯೊಂದನ್ನೂ ಪ್ರಯೋಗಿಸುವ ಬುದ್ಧಿ ಬೇಕು. ಹೊಸ ಸಂಗತಿಗಳನ್ನು ಕಂಡು ಹಿಡಿಯುವ ಪ್ರವೃತ್ತಿಯು ಬೇಕು. ಕಾರ್ಯ ಮಾಡಬೇಕೆಂಬ ಕಳಕಳಿಯು ಕುದಿಯಬೇಕು. ಗುರುಗಳಲ್ಲಿಯೇ ರಚನಾತ್ಮಕ ಪ್ರವೃತ್ತಿ ಪ್ರಕಟವಾಗುತ್ತಿರಬೇಕು. ಮಕ್ಕಳ ಕಾರ್ಯಕ್ಕೆ ಅದು ಪ್ರೇರಕವಾಗಬೇಕು. ಧಾರವಾಡ ತಾಲೂಕಿನಲ್ಲಿ ತಡಕೋಡ ಎಂಬ ಹಳ್ಳಿಯದೆ, ಅಲ್ಲಿ ಮೂಲ ಶಿಕ್ಷಣ ಶಾಲೆಯಿದೆ, ಅಲ್ಲಿಯ ಗುರುಗಳು ಕೆಲವು ಪ್ರಯೋಗಗಳನ್ನು ಮಾಡಿದ್ದಾರೆ. ಹಳ್ಳಿಯಲ್ಲಿ ದೊರೆಯುತ್ತಿರುವ ಎಲೆ, ಹೂವು, ಮಣ್ಣು ಇವುಗಳನ್ನು ಉಪಯೋಗಿಸಿ ತರತರದ ಬಣ್ಣಗಳನ್ನು ತಯಾರಿಸಿದ್ದಾರೆ. ಅವುಗಳನ್ನು ಚಿತ್ರ ಹಾಗು ರಟ್ಟಿನ ಕೈಕೆಲಸಗಳಿಗೆ ಉಪಯೋಗಿಸಿದ್ದಾರೆ. ಆದರಿಂದ ಹಳ್ಳಿಯಲ್ಲಿಯೇ ದೊರೆಯುವ ವಸ್ತುಗಳಲ್ಲಿಯ ಗುಣಧರ್ಮಗಳನ್ನು ಕಂಡುಹಿಡಿಯಬೇಕೆಂದು ಮಕ್ಕಳಿಗೆ ಮನವರಿಕೆಯಾಗುವದು. ಕಡಿಮೆ ವೆಚ್ಚದಲ್ಲಿ ಕಲಾಕೃತಿಗಳನ್ನು ತಯಾರಿಸಲು ಸಹಾಯವಾಗುವದು. ಸಂಶೋಧನಾ ಬುದ್ಧಿಗೆ ಪ್ರಚೋದನೆ ದೊರೆಯುವದು

ಉದ್ಯೋಗದ ವಿವಿಧ ಕ್ರಿಯೆಗಳನ್ನು ಸಶಾಸ್ತ್ರವಾಗಿ ಮಾಡಲು ಕಲಿಸುವಾಗ ಯಂತ್ರಶಾಸ್ತ್ರದ ಅಭ್ಯಾಸವು ತಾನಾಗಿಯೇ ಆಗುವದು. ಮಕ್ಕಳಲ್ಲಿ ಶಾಸ್ತ್ರೀಯ ದೃಷ್ಟಿ ವಿಕಾಸವಾಗುವದು. ಶಿಕ್ಷಣದಲ್ಲಿ ಇದು ಮಹತ್ವವಾದ ಅಂಗವು.

**ಪದ್ಧತಿಯಲ್ಲಿ ಅನುಭವ:**

ಅನುಬಂಧ ಪದ್ಧತಿಯು ಮೂಲ ಶಿಕ್ಷಣದ ಜೀವಾಳವು. ಅನುಬಂಧ ಪದ್ಧತಿಯಲ್ಲಿ ಹೆಚ್ಚು ಅನುಭವ ದೊರಕಿಸಿದಂತೆ ಗುರೂಜಿಯು ಹೆಚ್ಚು ಹೆಚ್ಚು ಸಾಮಾನ್ಯ ಜ್ಞಾನವನ್ನು ಮಕ್ಕಳಿಗೆ ಕೊಡಬಲ್ಲನು. ಸಾಮಾನ್ಯ ವಿಷಯಗಳಲ್ಲಿ ಗುರೂಜಿಗೆ ಆಳವಾದ ಜ್ಞಾನವೂ ಅವಶ್ಯಕ. ಟ್ರೇನಿಂಗು ಮುಗಿದ ನಂತರ ತಮ್ಮ ವಿದ್ಯಾಭ್ಯಾಸ ಮುಗಿಯಿತೆಂದು ತಿಳಿಯುವ ಶಿಕ್ಷಕರೇ ಬಹಳ. ಮೂಲ ಶಿಕ್ಷಣದ ಶಾಲೆಗಳಲ್ಲಿ ಕೆಲಸ ಮಾಡುವ ಗುರೂಜಿ ಯಾವಾಗಲೂ ವಿದ್ಯಾರ್ಥಿ; ಹೊಸತನ್ನು ತಿಳಿಯಬೇಕೆಂಬ ಕುತೂಹಲವುಳ್ಳ ವ್ಯಕ್ತಿ. ಮಕ್ಕಳಿಗೆ ಸ್ವಾತಂತ್ರ್ಯ ವಾತಾವರಣವನ್ನು ಕಲ್ಪಿಸಿ ಕೊಟ್ಟು, ರಚನಾತ್ಮಕ ಕ್ರಿಯೆಗಳನ್ನು ಮಾಡಹಚ್ಚಿ, ಹೊಸ ಜ್ಞಾನವನು ಅವರು ಸ್ವಾನುಭವದಿಂದ ಗಳಿಸುವಂತೆ ಗುರೂಜಿ ನಿರ್ದೇಶಿಸುವನು. ಮಗುವಿನ ಸಮವಾಯ ವಿಕಾಸವನ್ನು ಸಮವಾಯ ಪದ್ಧತಿಯಿಂದ ಮಾಡುವುದು ಸಣ್ಣ ಕೆಲಸವಲ್ಲ. ಗುರೂಜಿಗೆ ಸಾಕಷ್ಟು ಅನುಭವ ಬೇಕು; ನವೀನ ಪದ್ಧತಿಯಲ್ಲಿ ಶ್ರದ್ಧೆಯೂ ಬೇಕು.

**ಮನಶಾಸ್ತ್ರದ ಪರಿಚಯ:**

ಶಿಕ್ಷಣದ ಮೂಲ ತತ್ವಗಳು, ಪದ್ಧತಿಗಳು, ಶಾಲಾ ಸಂವಿಧಾನ ಮುಂತಾದ ವಿಷಯಗಳಲ್ಲಿ ಗುರೂಜಿಗೆ ಜ್ಞಾನವಿರಬೇಕು; ಆದರೆ ಇವೆಲ್ಲ ವಿಷಯಗಳು ಮನಶ್ಶಾಸ್ತ್ರದ ಮೇಲೆ ಅವಲಂಬಿಸಿವೆ. ಶೈಕ್ಷಣಿಕ ವಿಚಾರಗಳನ್ನು ಮಗುವಿನ ಮನಸ್ಸಿನ ಕ್ರಿಯೆಗಳನ್ನು ನಿರೀಕ್ಷಿಸುತ್ತ, ಕಲಿಯಬೇಕು." ಟ್ರೇನಿಂಗಿನ ಅವಧಿಯಲ್ಲಿ ಗುರುಗಳು ಮೂಲ ಉದ್ಯೋಗದ ಮುಖಾಂತರ ಈ ವಿಷಯಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಬೇಕು; ಟ್ರೇನಿಂಗ ಸಂಸ್ಥೆಯಲ್ಲಿ ಅಂತಹ ವ್ಯವಸ್ಥೆಯಿರಬೇಕು" ಎಂದು ಶ್ರೀ. **ಆರ್ಯನಾಯಕಂ** ಅವರ ಅಭಿಪ್ರಾಯವಿದೆ. ಮಕ್ಕಳ ಕ್ರಿಯೆ-ಪ್ರತಿಕ್ರಿಯೆಗಳ ಪರಿಪೂರ್ಣ ಅರ್ಥ ಮಾಡಿಕೊಳ್ಳಬೇಕಾದರೆ, ಅವರ ಮನಸ್ಸಿನ

ಒಳಕ್ಕೆ ಪ್ರವೇಶಿಸಬೇಕು. ಶಾಲೆಯಲ್ಲಿ ಮಕ್ಕಳು ಮೂಲ ಉದ್ಯೋಗವನ್ನು ಆರಂಭಿಸುವಾಗ ಅವರ ಮನೋವೃತ್ತಿ, ಅವರು ಮಾಡುತ್ತ ಹೋದಂತೆ ಅದರಲ್ಲಿ ತೋರಿಸುವ ಪ್ರಗತಿ, ಪ್ರಗತಿ ಮುಂದಗಾಮಿಯಾಗಿ ಸಾಗುವ ಅವಧಿ, ಅವರ ಪ್ರಗತಿ ಹೆಚ್ಚಾದಂತೆ ಅವರಿಗಾಗುವ ಆನಂದ ಇತ್ಯಾದಿಗಳನ್ನು ನಿರೀಕ್ಷಿಸಬೇಕು; ಪ್ರಗತಿಪಟಗಳನ್ನು ತಯಾರಿಸಬೇಕು; ಎಂದರೆ ಗುರೂಜಿಗೆ ಪ್ರಾಯೋಗಿಕ ಮನಶ್ಶಾಸ್ತ್ರದ ಪರಿಚಯವು ತಾನಾಗಿಯೇ ಆಗುವದು. ಗುರೂಜಿಗೆ ತಾಳ್ಮೆ, ಸಹಾನುಭೂತಿ, ಶಾಸ್ತ್ರೀಯ ದೃಷ್ಟಿ, ಮಕ್ಕಳಲ್ಲಿ ಮಮತೆ ಮುಂತಾದ ಗುಣಗಳು ಅವಶ್ಯಕವು.

**ಗುರೂಜಿ ಕಲಾಜೀವಿ:—**

ಸಾಹಿತ್ಯ, ಸಂಗೀತ, ಚಿತ್ರಕಲೆ ಹಾಗು ಕೈಕೆಲಸ ಮುಂತಾದವುಗಳಲ್ಲಿ ಮಕ್ಕಳ ಅಭಿರುಚಿಯು ಹುಟ್ಟಿ ಬೆಳೆಯಬೇಕಾದರೆ, ಗುರೂಜಿಯು ಸ್ವತಃ ಕಲಾಜೀವಿ ಆಗಿರಬೇಕು. ಮಕ್ಕಳಿಂದ ಕಲಾಕೃತಿಗಳು ಹೊರಬೀಳುವಂತೆ ಮಾಡುವದು ಸಾಧ್ಯವಾಗುವದು. ಮಕ್ಕಳ ಹಸ್ತಚಾಪಲ್ಯ, ಬುದ್ಧಿಸಾಮರ್ಥ್ಯಗಳಿಗೆ ಪೋಷಕವಾಗುವ ಯೋಗ್ಯ ಸನ್ನಿವೇಶವೆಂದರೆ ಗುರೂಜಿಯ ಸ್ಫೂರ್ತಿದಾಯಕ ವ್ಯಕ್ತಿತ್ವವೇ. "ಶಿಕ್ಷಕನು ಕಲಾವಂತ ಅವನು ಹುಲ್ಲು ಮಣ್ಣುಗಳಿಂದ ಮೂರ್ತಿ ಮಾಡುವಂತಹ ಕಲಾವಂತನಲ್ಲ. ಮಕ್ಕಳನ್ನು ಒಳ್ಳೆಯ ನಾಗರಿಕರನ್ನಾಗಿ ತಯಾರಿಸುವ ಕಲಾವಂತ."

**—ಆಚಾರ್ಯ ಕೃಪಲಾನಿ**

**ಸರ್ವ ಧರ್ಮಗಳಲ್ಲಿ ಸಮದೃಷ್ಟಿ:**

ಎಲ್ಲ ಧರ್ಮಗಳ ಮುಖ್ಯ ಹಬ್ಬಗಳನ್ನು, ಮಹಾಪುರುಷರ ಪುಣ್ಯತಿಥಿಗಳನ್ನೂ ಹೊಸ ಸಾಲೆಗಳಲ್ಲಿ ಆಚರಿಸುವರು; ಮಕ್ಕಳಲ್ಲಿ ಸಮದೃಷ್ಟಿ ಬೆಳೆಯಬೇಕೆಂಬುದು ಅದರ ಮುಖ್ಯ ಉದ್ದೇಶ. ಮೊದಲು ಗುರುಗಳು ಈ ತತ್ತ್ವದಲ್ಲಿ ಶ್ರದ್ಧೆಯಿಡಬೇಕೆಂದು ಗಾಂಧೀಜಿ ಹೇಳಿದರು. ಗುರುಗಳು ತಮ್ಮ ಆಚರಣೆಯಿಂದ ಈ ತತ್ತ್ವದ ಮಹತಿಯನ್ನು ತೋರಿಸಬೇಕು. ಮಾತಿಗಿಂತ ಕೃತಿಗೆ ಮಹತ್ವವಿದೆಯೆಂಬುದನ್ನು ಮರೆಯಕೂಡದು. ಇಂತಹ ಪ್ರಸಂಗಗಳಲ್ಲಿ ಬಾಲಕರನ್ನು ಕರೆಯಿಸಬೇಕು. ಅವರಲ್ಲಿಯೂ ವಿಶಾಲದೃಷ್ಟಿ ಉಂಟಾಗುವದು. ಸಾಲೆಗಳಲ್ಲಿ ಸಾಂಸ್ಕೃತಿಕ ಚಟುವಟಿಕೆಗಳು ನಡೆ

ದಾಗ ಪಾಲಕರಿಗೂ ಭಾಗವಹಿಸಲು ಅವಕಾಶ ಕೊಡಬೇಕು; ಎಂದರೆ ಶಾಲೆಯ ಬಗೆಗೆ ಅವರ ಅಭಿಮಾನ ಹೆಚ್ಚುವದು. ಮಕ್ಕಳ ಕೆಲಸಗಳನ್ನು ನೋಡಲು ಅವರಿಗೆ ಸಂಧಿ ಸಿಗುತ್ತದೆ. ಪಾಲಕರ ಸಂಪರ್ಕದಿಂದ ಗುರುಗಳ ಎಷ್ಟೋ ಸಮಸ್ಯೆಗಳು ಸುಲಭವಾಗಿ ಬಿಡಿಸಲ್ಪಡುವವು.

**ಉದ್ಯಮ ಶೀಲ ಗುರೂಜಿ:**

ಉದ್ಯಮವು ಶಿಕ್ಷಣದ ಮಾಧ್ಯಮವು. ಕೇವಲ ಮಕ್ಕಳು ಉದ್ಯೋಗದಲ್ಲಿ ತೊಡಗಿದರೆ ತೀರದು. ಗುರುಗಳೂ ಮಕ್ಕಳೊಡನೆ ಪ್ರೇಮದಿಂದ ಬೆರೆತು ಕೆಲಸ ಮಾಡಬೇಕು. ಗುರು-ಶಿಷ್ಯರಲ್ಲಿ ಸಮಭಾವ ಬೆಳೆಯುವದು. ಗುರುಗಳಲ್ಲಿ ಮಕ್ಕಳ ಪ್ರೇಮಾದರಗಳು ಹೆಚ್ಚುವವು. ಶಾಲೆಯ ಸ್ವಚ್ಛತೆ, ಗೊಬ್ಬರ ಕುಣಿ-ಮೂತ್ರಿ-ಪಾಯಖಾನೆಗಳನ್ನು ತಯಾರಿಸುವದು ಹಾಗು ಅವುಗಳ ಸ್ವಚ್ಛತೆ, ಸಾಮೂಹಿಕ ನೂಲುವದು, ಪ್ರವಾಸ-ದರ್ಶನಗಳನ್ನು ಏರ್ಪಡಿಸಿದಾಗ ಮಕ್ಕಳೊಡನೆ ದುಡಿತ ಮುಂತಾದ ಕೆಲಸಗಳಲ್ಲಿ ಗುರುಗಳು ಮಕ್ಕಳೊಡನೆ ಹೆಗಲಿಗೆ ಹೆಗಲು ಹಚ್ಚಿ ದುಡಿಯಬೇಕು. ಮಕ್ಕಳೊಡನೆ ಕೆಲಸ ಮಾಡಿದರೆ ಅವರ ಸ್ಥಾನ-ಮಾನಗಳು ಕಡಿಮೆಯಾಗುವದಿಲ್ಲ ಎಂಬ ಭಾವನೆಯು ಗುರುಗಳಲ್ಲಿ ಬೆಳೆಯಬೇಕು.

**ಆದರ್ಶ ಜೀವಿ:**

ಮಕ್ಕಳು ತಮ್ಮ ಗುರುಗಳನ್ನು ಹೆಚ್ಚಾಗಿ ಅನುಕರಣ ಮಾಡುವರು. ಗುರುಗಳಲ್ಲಿ ಉತ್ತಮ ಚಟಗಳು ನೆಲಸಬೇಕು. ಸತ್ಯ, ಅಹಿಂಸೆ, ನ್ಯಾಯ ಇವುಗಳಲ್ಲಿ ಶ್ರದ್ಧೆಯಿಡಬೇಕು. ಅವರ ಆಚರಣೆಯೇ ಅವರ ಆದರ್ಶ ಜೀವನದ ಅಳತೆಗೋಲು. ನಡೆಶುದ್ಧ, ನುಡಿಶುದ್ಧ, ಭಾವಶುದ್ಧ ಇದ್ದ ಗುರುಗಳಿಗೆ ಮಕ್ಕಳನ್ನು ಒಳ್ಳೆಯ ಜೀವನದತ್ತ ಒಯ್ಯಲು ಸುಲಭಸಾಧ್ಯವಾಗುವದು. ಮೂಲ ಶಿಕ್ಷಣವು ಉದಾತ್ತ ಧ್ಯೇಯಗಳ ಮೇಲೆ ನಿಂತಿದೆ. ಉದಾತ್ತ ತತ್ತ್ವಗಳು ಮಕ್ಕಳ ಜೀವನದಲ್ಲಿ ಅಳವಡಬೇಕಾದರೆ. ಗುರುಗಳು ಉದಾತ್ತ ತತ್ತ್ವಗಳಿಗೆ ಅಂಟಿಕೊಂಡು ಜೀವಿಸಬೇಕಾಗುವದು. ಇದು ಸಾಮಾನ್ಯ ಕೆಲಸವಲ್ಲ; ಎಲ್ಲರಿಗೂ ಸಾಧಿಸಲು ಸುಲಭವಲ್ಲ. ಶಿಕ್ಷಕರು ಸಾಧನ ಜೀವಿಗಳಾದರೆ ಗುರುಸ್ಥಾನಕ್ಕೆ ಮುಟ್ಟುವರು. ಗುರೂಜಿ ಎಂಬ ಹೆಸರಿಗೆ ತಕ್ಕವರಾಗಲು ಯತ್ನಿಸಬೇಕು. ಅವರಲ್ಲಿ ಉಕ್ಕಿ ಬರು

ತ್ತಿರುವ ರಾಷ್ಟ್ರಪ್ರೇಮವು ಅವರ ಜೀವನಕ್ಕೆ ಕಳೆಕಟ್ಟಬೇಕು. ಹೊಸ ಸಮಾಜದ ಆದರ್ಶಘಟಕಗಳಾಗಿ ಗುರುಗಳು ಬೆಳಗಬೇಕು. ಗುರುಗಳ ಆದರ್ಶ ಜೀವನದ ಬೆಳಕಿನಲ್ಲಿ ಮಕ್ಕಳಿಗೆ ಆದರ್ಶ ಜೀವಿಗಳಾಗಿ ಬೆಳೆಯಲು ಪ್ರೇರಣೆ ದೊರೆಯುವದು. ಇಂತಹದಕ್ಕೆ ತಕ್ಕ ವಾತಾವರಣವನ್ನುಂಟುಮಾಡುವದೇ ಶಿಕ್ಷಣದ ಹೆದ್ದಾರಿ.

"ಯಾವುದೊಂದು ಕಲೆಯಲ್ಲಿ ಇಲ್ಲವೆ ವೃತ್ತಿಯಲ್ಲಿ ಒಬ್ಬನು ಪೂರ್ಣತೆಯನ್ನು ಹೊಂದಿದನೆಂದರೆ, ಅವನು ಆ ಕಲೆಯ ಇಲ್ಲವೆ ವೃತ್ತಿಯ ಶಿಕ್ಷಕನಾಗುತ್ತಾನೆ. ಆದ್ದರಿಂದ ಶಿಕ್ಷಕನ ಕಲೆಯು ಎಲ್ಲ ಕಲೆಗಳ ತುತ್ತ ತುದಿಯನ್ನು ಮುಟ್ಟುತ್ತದೆ."

— **ಆಚಾರ್ಯ ಕೃಪಲಾನಿ.**

## ಭಾಗ ೨.

### ಪದ್ಧತಿ ಪರಿಚಯ

## ೧. ಅನುಬಂಧ ಸಿದ್ಧಾಂತವು

**ವಿವಿಧತೆಯಲ್ಲಿ ಏಕರೂಪತೆ:**

ವಿಶ್ವವು ವಿವಿಧತೆಯಿಂದ ತುಂಬಿದೆ. ಸಸಿಗಳು, ಪ್ರಾಣಿಗಳು ಮಾನಿಸರು ಅನೇಕ ರೀತಿಯಾಗಿ ಭಿನ್ನ ಭಿನ್ನ ರೂಪಗಳನ್ನು ಹೊಂದುವದುಂಟು ಕೆಲವು ಕೆಲ ಕಾಲ ಬದುಕುವವು; ಕೆಲವು ಬಹುಕಾಲ ಬಾಳುವವು. ರೂಪ, ಬಣ್ಣ, ಆಕಾರಮಾನಗಳಿಂದಲೂ ವೈವಿಧ್ಯವುಂಟು. ಅನೇಕ ವಸ್ತುಗಳು ಅನೇಕ ರೀತಿಯಾಗಿ ಕಾಣುತ್ತವೆ. ಆದಾಗ್ಯೂ ಅವೆಲ್ಲವುಗಳು ಕೆಲವೊಂದು ಸಾಮಾನ್ಯ ನಿಯಮಗಳಿಗೆ ಒಳಪಟ್ಟಿವೆ. ಅವು ವಿಶಿಷ್ಟ ಮಾರ್ಗಗಳಲ್ಲಿ ಉದಯವಾಗುವವು; ಬೆಳೆಯುವವು; ಮಾಯವಾಗುವವು. ಒಂದು ಮಾಲೆಯಲ್ಲಿ ಅನೇಕ ಹೂಗಳನ್ನು ಹಾಕಬಹುದು; ಹೂಗಳು ತರತರದ ಬಣ್ಣದವೂ, ಆಕಾರದವೂ ಇರಬಹುದು; ಆದರೆ ಅವೆಲ್ಲವುಗಳನ್ನು ಜೋಡಿಸಲು ಒಂದು ಸೂತ್ರವು ಬೇಕು. ಅದರಂತೆ ವಿಶ್ವದ ವಸ್ತುಗಳೆಲ್ಲ, ಜೀವಿಗಳೆಲ್ಲ, ಅನೇಕ ವಿಧವಾಗಿ ಕಾಣಿಸಿಕೊಂಡರೂ, ಅವು ಸಾಮಾನ್ಯ ಸೂತ್ರಗಳಿಂದ ಹೆಣೆಯಲ್ಪಟ್ಟಿವೆ. ಅಂತೆಯೇ ವಿಶ್ವವು ಮಾಲೆಯಂತೆ ಒಂದು ರೂಪವನ್ನು ಹೊಂದುತ್ತದೆ. ವಿಶ್ವದ ವಿವಿಧತೆಯಲ್ಲಿ ಏಕರೂಪತೆ ಪೋಣಿಸಿಕೊಂಡಿದೆ. ಅನೇಕ ಎಳೆಗಳು ಕೂಡಿ ಒಂದು ಜಾಳಿಗೆಯಾಗುವದು. ಜೇಡಹುಳದ ಜಾಳಿಗೆಯನ್ನು ನೋಡಿರಿ. ಎಷ್ಟೋ ಎಳೆಗಳಿವೆ. ಯಾವುದೊಂದು ತಂತು ಹರಿದರೆ ಇಡೀ ಜಾಳಿಗೆಯ ಮೇಲೆ ಅದರ ಪರಿಣಾಮವಾಗುವದು. ಈ ರೀತಿ ಒಂದು ವಸ್ತುವು ಮತ್ತೊಂದು ವಸ್ತುವಿಗೆ ಸಂಬಂಧಿತವಾಗಿರುವದು. ಅನುಬಂಧವು ವಿಶ್ವದ ಸೂತ್ರವು. ಅದರ ಸೂಕ್ಷ್ಮತೆಯನ್ನು ಕಂಡು ಹಿಡಿಯಲು ಪ್ರಯತ್ನ ಮಾಡಬೇಕು.

**ಜ್ಞಾನದ ಅಖಂಡತೆ:**

ಶಿಕ್ಷಣ ಪ್ರಪಂಚಕ್ಕೂ ಈ ಸೂತ್ರವು ಅನ್ವಯಿಸುತ್ತದೆ. ಶಿಕ್ಷಣ ವಿಷಯದಲ್ಲಿ ಅನೇಕ ವಿಷಯಗಳು ಸಮಾವೇಶವಾಗುತ್ತವೆ. ಮಕ್ಕಳಿಗೆ ಅನೇಕ ವಿಷಯಗಳ ಬಗೆಗೆ ನಾವು ಕಲಿಸುತ್ತೇವೆ. ಅವೆಲ್ಲವುಗಳೂ ಹೊಳೆಹಳ್ಳಗಳಿದ್ದಂತೆ, ಅವು ಹರಿದು ಜ್ಞಾನ ಸಾಗರ ಕೂಡುವವು. ಜ್ಞಾನವು ಒಂದು ಘಟ್ಟಿ ಇಲ್ಲವೆ ಅಖಂಡವಾದ ಸಿಧಿ. ಅನೇಕ ವಿಷಯಗಳನ್ನಾಗಿ ವಿಭಾಗಿಸುವದು ವಿಶೇಷ ಅಭ್ಯಾಸಕ್ಕಾಗಿಯೇ ಹೊರತು, ಅವುಗಳನ್ನು ಮೂಲ ಜ್ಞಾನದಿಂದ ಬೇರ್ಪಡಿಸಲಿಕ್ಕಲ್ಲ. ಜ್ಞಾನವೃಕ್ಷವು ಅನೇಕ ಟಿಸಿಲುಗಳಿಂದ ಕೂಡಿದ್ದರೂ ಅದಕ್ಕೆ ಬೇರು ಒಂದೇ; ಬೀಜ ಒಂದೇ. ತತ್ತ್ವಜ್ಞಾನ, ಸಮಾಜಶಾಸ್ತ್ರ, ರಸಾಯನ ಶಾಸ್ತ್ರ, ಪ್ರಾಣಿಶಾಸ್ತ್ರ, ಹೀಗೆ ಜ್ಞಾನ ವೃಕ್ಷದ ಅಂಗಗಳನ್ನು ಪ್ರತ್ಯೇಕವಾಗಿ ಅಭ್ಯಾಸ ಮಾಡಿದರೂ, ಅವುಗಳ ಒಟ್ಟು ಪರಿಣಾಮವು ಇಡೀ ವೃಕ್ಷದ ಕಲ್ಪನೆಯನ್ನು ವಿಸ್ತರಿಸಲು ಅನುಕೂಲವಾಗುವದು. ಬೇರೆಬೇರೆ ವಿಷಯಗಳ ಅನುಭವಗಳು ಥರದ ಮೇಲೆ ಥರವಾಗಿ ಸಂಗ್ರಹವಾಗುತ್ತವೆ. ಅವು ಒಂದು ಸ್ವರೂಪ ತಳೆಯುತ್ತವೆ. ಜ್ಞಾನವು ಬಹುಮುಖವಾಗಿ ದೊರೆತರೂ, ಪರಸ್ಪರ ಸಂಬಂಧದಿಂದ ಅಖಂಡತೆಯನ್ನು ಹೊಂದುತ್ತದೆ. ಜ್ಞಾನವನ್ನು ಅನುಬಂಧ ಸೂತ್ರದಿಂದ ಹೆಣೆಯಲಾಗಿದೆ.

**ಮನಶ್ಶರೀರಾತ್ಮಕ ಕಾರ್ಯ:**

ಮನುಷ್ಯನ ಕಾರ್ಯಗಳಲ್ಲಿಯೂ ಕೂಡ ಏಕರೂಪತೆಯಿದೆ. ನಮ್ಮ ಕೈ ಕಾಲು, ಕಣ್ಣು ಇತ್ಯಾದಿಗಳು ಪ್ರತ್ಯೇಕವಾಗಿ ಕೆಲಸ ಮಾಡುತ್ತವೆ. ಆದಾಗ್ಯೂ ಅವುಗಳಿಗೆ ಸ್ವತಂತ್ರ ಅಸ್ತಿತ್ವವಿಲ್ಲ; ಅವೆಲ್ಲವೂ ಶರೀರ ಪೋಷಣೆಗಾಗಿ ಕೆಲಸ ಮಾಡುತ್ತವೆ. ಒಂದರ ಕೆಲಸವು ಮತ್ತೊಂದರ ಕೆಲಸಕ್ಕೆ ಸಂಬಂಧಪಟ್ಟಿದೆ. ಕಾಲಿಗೆ ನೋವಾದರೆ ಇಡೀ ಮೈಗೆ ನೋವೆನಿಸುವದು. ನಮ್ಮ ಅವಯವಗಳ ಕಾರ್ಯಗಳಲ್ಲಿ ಪರಸ್ಪರ ಸಂಬಂಧವಿದೆ, ಏಕರೂಪವಿದೆ. ನಮ್ಮ ಶರೀರ ರಚನೆಯಲ್ಲಿಯೂ ಅನುಬಂಧ ತತ್ತ್ವವಿದೆ. ನಮ್ಮ ಕಾರ್ಯಗಳ ವಿಭಜನೆಯಲ್ಲಿ ಇನ್ನೂ ಒಂದು ರೀತಿಯಿದೆ. ಅದೇನೆಂದರೆ ಶರೀರದ ಕಾರ್ಯ, ಮನಸ್ಸಿನ ಕಾರ್ಯ. ಸಾಮಾನ್ಯವಾಗಿ ಓಡುವದು ಶಾರೀರಕ ಕಾರ್ಯವೆಂದು ಗ್ರಹಿಕೆಯಿದೆ. ಒಬ್ಬ ಆಟಗಾರನು ಓಡುವಾಗ ಅವನ ಮನಸ್ಸು ಸುಪ್ತಾವಸ್ಥೆಯಲ್ಲಿರುವದಿಲ್ಲ.

ಅವನು ಏರು, ಇಳುಕಲುಗಳಲ್ಲಿ ಹೇಗೆ ಓಡಬೇಕು, ಜೊತೆಯ ಸ್ಪರ್ಧೆಗಾರನನ್ನು ಹೇಗೆ ಹಿಂದೆ ಹಾಕಬೇಕು: ಕೊನೆಗೆ ತನ್ನ ಓಟದ ವೇಗವನ್ನು ಹೇಗೆ ಹೆಚ್ಚಿಸಬೇಕು: ಇತ್ಯಾದಿ ವಿಷಯಗಳ ಬಗೆಗೆ ಮನಸ್ಸಿನಲ್ಲಿ ಆಲೋಚನೆಗಳು ನಡೆದಿರುತ್ತವೆ. ಅಷ್ಟೇ ಅಲ್ಲ! ಅಂಥ ಸಮಯದಲ್ಲಿ ಮನಸ್ಸು ಚುರುಕಾಗಿ ಕೆಲಸ ಮಾಡುತ್ತದೆ. ಶರೀರದ ಯಾವದೊಂದು ಅಂಗಕ್ಕೆ ಬೇನೆ ಬಂದಲ್ಲಿ ಮನಸ್ಸಿನ ಮೇಲೆ ಅದರ ಪರಿಣಾಮವಾಗುತ್ತದೆ. ಆದರಿಂದ ಇದು ಶರೀರದ ಕಾರ್ಯ. ಅದು ಮನಸ್ಸಿನ ಕಾರ್ಯ, ಎಂದು ವಿಂಗಡಿಸಬಾರದೆಂದು ಆಧುನಿಕ ಮನಶ್ಶಾಸ್ತ್ರಜ್ಞರ ಅಭಿಪ್ರಾಯವಿದೆ. ಮನುಷ್ಯನ ಯಾವದೊಂದು ಚಟುವಟಿಕೆಯನ್ನು ಮನಶ್ಶರೀರಾತ್ಮಕ ಕಾರ್ಯ (Psycho-physical activity) ಎಂದು ನಿರೂಪಿಸಿದ್ದಾರೆ. ಶರೀರಶಾಸ್ತ್ರ ಹಾಗು ಮನಶ್ಶಾಸ್ತ್ರ ಎಂದು ಪ್ರತ್ಯೇಕವಾಗಿ ಅಭ್ಯಾಸ ಮಾಡಿದರೂ, ದೈಹಿಕ-ಮಾನಸಿಕ ಕಾರ್ಯಗಳಲ್ಲಿ ಪರಸ್ಪರ ಸಂಬಂಧವಿದೆ ಎಂಬದನ್ನು ಲಕ್ಷ್ಯದಲ್ಲಿಡಬೇಕು. ಇದೇ ನಮ್ಮ ಕಾರ್ಯಗಳಲ್ಲಿ ಕಂಡು ಬರುವ ಸ್ವಾಭಾವಿಕ ಅನುಬಂಧವು.

**ಮಗುವಿನ ವಿಕಾಸ:**

ಬಾಲಕನು ಬೆಳೆದನೆಂದು ಅನ್ನುವ ರೂಢಿಯುಂಟು. ಸಾಮಾನ್ಯವಾಗಿ ಅವನು ಶರೀರದಿಂದ ದೊಡ್ಡವನಾದನೆಂದು ಜನರು ತಿಳಿಯುವರು ಶರೀರವು ಮಾತ್ರ ಬೆಳೆಯುತ್ತದೆಂದು ಅರ್ಥವಲ್ಲ. ಕಾಲಗತಿಸಿದಂತೆ ಬಾಲಕನು ಹೊಸ ಅನುಭವಗಳನ್ನು ಗಳಿಸುವನು; ಸಂಸ್ಕಾರ ಹೊಂದುತ್ತ ಬೆಳೆಯುವನು. ಅರ್ಥಾತ್ ಬುದ್ಧಿ ಬೆಳೆಯುವದು; ಮನಸ್ಸು ವಿಕಾಸವಾಗುವದು. ಕಾರಣ ಶರೀರ, ಮನಸ್ಸು ಜೊತೆ ಜೊತೆಯಾಗಿ ವಿಕಾಸ ಹೊಂದುತ್ತವೆ. ಅಲ್ಲದೆ ಒಂದರ ವಿಕಾಸವು ಮತ್ತೊಂದರ ವಿಕಾಸಕ್ಕೆ ಸಹಾಯಕವಾಗುತ್ತದೆ. ಒಬ್ಬ ಬಾಲಕನು ಹೋಲಿಕೆಯಲ್ಲಿ ಮತ್ತೊಬ್ಬನಂತೆ ಇರುವದಿಲ್ಲ. ಮುಖಚರ್ಯೆ ಇಲ್ಲವೇ ಮೈಕಟ್ಟಿನಲ್ಲಿ ಸ್ವಲ್ಪ ವ್ಯತ್ಯಾಸ ಕಂಡು ಬರುತ್ತದೆ. ಅಂತೆಯೇ ಒಬ್ಬರನ್ನೊಬ್ಬರು ಗುರುತಿಸುತ್ತೇವೆ. ಆದಾಗ್ಯೂ ಮನುಷ್ಯನ ಶರೀರ ರಚನೆಯಲ್ಲಿ ಸಾಮಾನ್ಯ ಲಕ್ಷಣಗಳಿವೆ. ಒಂದು ಪ್ರಸಂಗದಲ್ಲಿ ಎಲ್ಲ ಮಕ್ಕಳು ಒಂದೇ ರೀತಿಯಾಗಿ ವರ್ತಿಸುವದಿಲ್ಲ. ಪ್ರೇರಕ ವಸ್ತು ಒಂದೇ

ಆಗಿದ್ದರೂ ಬಾಲಕರ ಪ್ರತಿಕ್ರಿಯೆಗಳಲ್ಲಿ ಭಿನ್ನತೆಯನ್ನು ಕಾಣಬಹುದು. ಒಬ್ಬನಿಗೆ ಸೇರಿದ್ದು ಮತ್ತೊಬ್ಬನಿಗೆ ಸೇರಲಿಕ್ಕಿಲ್ಲ. ಒಬ್ಬನು ಒಂದು ಕಾರ್ಯ ವನ್ನು ಬಹುಕಾಲದ ವರೆಗೆ ಉತ್ಸಾಹದಿಂದ ಮಾಡಬಹುದು. ಇನ್ನೊ ಬ್ಬನು ಅಲ್ಪಾವಧಿಯಲ್ಲಿಯೇ ದಣಿಯುವನು. ಹೀಗೆ ಬಾಲಕರ ಒಲವು, ಕಾರ್ಯಶಕ್ತಿ, ಉತ್ಸಾಹಗಳು ವ್ಯಕ್ತಿಗಳಲ್ಲಿ ಭಿನ್ನಪ್ರಮಾಣದಲ್ಲಿ ವ್ಯಕ್ತ ವಾಗುತ್ತವೆ. ಆದಾಗ್ಯೂ ಮಗುವಿನ ವಿಕಾಸದ ಮಟ್ಟಗಳನ್ನು—ಶೈಶವಾ ವಸ್ಥೆ, ಬಾಲ್ಯಾವಸ್ಥೆ, ತಾರುಣ್ಯಾವಸ್ಥೆ, ಪ್ರೌಢಾವಸ್ಥೆಗಳನ್ನು ಚನ್ನಾಗಿ ಅಭ್ಯಸಿಸಬೇಕು; ಎಂದರೆ ಮಗುವಿನ ಶಾರೀರಿಕ ಹಾಗು ಮಾನಸಿಕ ವಿಕಾಸದ ಸಾಮಾನ್ಯಲಕ್ಷಣಗಳು ಪ್ರತಿಯೊಂದು ಅವಸ್ಥೆಯಲ್ಲಿ ಪ್ರಕಟ ವಾಗುವವು. ಅವುಗಳ ವ್ಯಕ್ತತೆಯು ಪರಿಮಾಣಗಳಲ್ಲಿ ವೈಯಕ್ತಿಕ ಭಿನ್ನತೆ ತೋರಬಹುದು. ಒಂದು ಅವಸ್ಥೆಯಲ್ಲಿ ಪ್ರಕಟವಾಗುವ ಲಕ್ಷಣ ಗಳು ಮುಂದಿನ ಅವಸ್ಥೆಯ ಲಕ್ಷಣಗಳಿಗೆ ಸಂಬಂಧಿತವಾಗಿವೆ. ಈ ರೀತಿ ಮಕ್ಕಳ ವಿಕಾಸ ಮಾರ್ಗದಲ್ಲಿಯೂ ಏಕರೂಪತೆಯದೆ. ಅನ್ಯೋನ್ಯ ಸಂಬಂಧ ತತ್ತ್ವವು ಅಥವಾ ಅನುಬಂಧ ಸಿದ್ಧಾಂತವು ಶಿಕ್ಷಣ ಶಾಸ್ತ್ರದಲ್ಲಿ ಸ್ವಾಭಾವಿಕವಾಗಿಯೇ ಸೇರಿಕೊಂಡಿದೆ. ಅದರಿಂದ ಮಗುವಿನ ಸಮನ್ವಯ ವಿಕಾಸವು ಶಿಕ್ಷಣದ ಗುರಿ ಎಂಬುದು ಸರ್ವಸಮ್ಮತವಾಗಿದೆ. ಮಗುವಿನ ಶರೀರವು ಮಾತ್ರ ಬೆಳೆಯಬೇಕು, ಬುದ್ಧಿಯು ಮಾತ್ರ ಬೆಳೆಯಬೇಕು ಎಂದು ಶಿಕ್ಷಣವು ಸೀಡುವದಿಲ್ಲ; ಯಾರೂ ಬೇಡುವದಿಲ್ಲ. ಮನುಷ್ಯ ನಲ್ಲಿ ಹುದುಗಿದ ಸರ್ವಶಕ್ತಿಗಳ ಸಮವಾಯ ಬೆಳವಣಿಗೆಯಾಗಿ; ಅವು ಅವನ ಸಾಮಾಜಿಕ ಸಾಹಚರ್ಯದಲ್ಲಿ ಒಳಕೆಯಾಗಿ, ಅವನು ಸಮಾಜ ದಲ್ಲಿ ಒಂದು ಉತ್ತಮ ಘಟಕವಾಗಬೇಕು. ವರ್ಧಾ ಶಿಕ್ಷಣ ಯೋಜ ನೆಯು ಇದನ್ನೇ ತನ್ನ ಆದರ್ಶವನ್ನಾಗಿ ಇಟ್ಟುಕೊಂಡಿದೆ. ಮಗುವಿನ ಸಮ ವಾಯ ವಿಕಾಸವು ಸಮವಾಯ ಪದ್ಧತಿಯಿಂದಲೇ ಸಾಗಬೇಕು. ಸಮ ವಾಯವು ಶಿಕ್ಷಣದ ಆದರ್ಶದ ಮೂಲವು. ಆ ಆದರ್ಶವನ್ನು ಮುಟ್ಟುವ ಸಾಧನಗಳೂ ಸಮವಾಯ ತತ್ತ್ವಕ್ಕೆ ಅಧೀನವಾಗಿರಬೇಕು; ಎಂದರೆ ಶಿಕ್ಷಣ ವಿಧಾನವು ಸ್ವಾಭಾವಿಕ ಮಾರ್ಗವನ್ನು ಅನುಸರಿಸುವದು, ಇಲ್ಲವಾದರೆ ಅದು ಕೃತ್ರಿಮವಾಗುವದು.

**ಜ್ಞಾನವನ್ನು ಸ್ವೀಕರಿಸುವ ಕ್ರಮ:**

ಅನುಬಂಧ ಸಿದ್ಧಾಂತವು ಶಿಕ್ಷಣದ ಮೂಲವೆಂದು ಪುಷ್ಟೀಕರಿಸಲು ಇನ್ನೊಂದು ಸಂಗತಿಯನ್ನು ಆಲೋಚಿಸುವಾ. ಇದೂ ಮಹತ್ವವಾದುದು. ನಾವು ಜ್ಞಾನವನ್ನು ಹೇಗೆ ಸ್ವೀಕರಿಸುತ್ತೇವೆ ಎಂಬ ಪ್ರಶ್ನೆಯನ್ನು ಬಿಡಿಸಿ ದರೆ, ಅನುಬಂಧ ಪದ್ಧತಿಯ ಸ್ಥಿರಪಾಯವನ್ನು ಹಾಕಿದಂತಾಗುತ್ತದೆ. ಕಣ್ಣು, ಮೂಗು, ಕಿವಿ, ನಾಲಿಗೆ, ತ್ವಚ ಈ ಪಂಚೇಂದ್ರಿಯಗಳು ಜ್ಞಾನೇಂದ್ರಿ ಯಗಳು. ಇವು ಬಾಹ್ಯ ಜಗತ್ತಿನ ಸಂಪರ್ಕದಿಂದ ಹೊಸ ಅನುಭವ ಗಳನ್ನು ಒದಗಿಸುವವು. ಅನುಭಗಳ ಅಣುಗಳು ಮನಸ್ಸಿನ ಶಾಶ್ವತ ಭಾಗವಾಗಿ ಉಳಿಯುವವು. ಒಂದು ಸಂಗತಿಗೆ ಸಂಬಂಧಿಸಿದ ಆ ಅಣು ಗಳು ಇಲ್ಲವೆ ಕಲ್ಪನೆಗಳು ಜೋಡಣೆಯಾಗುವವು; ಕಲ್ಪನೆಗಳ ಅನುಬಂಧ (Association Of Ideas) ಕ್ರಿಯೆಯು ಸಾಗುತ್ತದೆ. ಒಂದು ವಸ್ತು ಕ್ರಿಯೆ ಸಾಗುತ್ತದೆ. ಒಂದು ವಸ್ತುವಿನ ಬಗೆಗೆ ಒಂದು ಇಂದ್ರಿಯೆಯಿಂದ ದೊರಕಿಸಿದ ಜ್ಞಾನ ಕಳಿಗೆಗಳು ಮತ್ತೊಂದು ಇಂದ್ರಿಯೆಯಿಂದ ಗಳಿಸಿದ ಜ್ಞಾನ ಕಳಿಗೆಗಳೊಡನೆ ಕೂಡಿಕೊಳ್ಳುತ್ತವೆ. ಒಂದು ಹೂವಿನ ಬಗೆಗೆ ಪೂರ್ಣ ಜ್ಞಾನವಾಗಬೇಕಾದರೆ ಕಣ್ಣು ಮೂಗು, ತ್ವಚ ಈ ಮೂರು ಇಂದ್ರಿ ಯಗಳು ಸರಿಯಾಗಿ ಕಾರ್ಯ ಮಾಡಬೇಕು. ಒಂದು ಇಂದ್ರಿಯೆಯಿಂದ ಗಳಿಸಿದ ಜ್ಞಾನವು ಸ್ವಾಭಾವಿಕವಾಗಿಯೇ ಮತ್ತೊಂದು ಇಂದ್ರಿಯ ಜ್ಞಾನಕ್ಕೆ ಸಂಬಂಧ ಹಚ್ಚಿಕೊಳ್ಳುವದು; ಅಂತೆಯೇ ನಮಗೆ ಆ ವಸ್ತುವಿನ ಪೂರ್ಣ ಪರಿಚಯವಾಗುವದು. ಜ್ಞಾನಾರ್ಜನೆಯ ಮಾರ್ಗಕ್ಕೆ ಅನುಬಂಧ ಪದ್ಧತಿಯೇ ಸೂತ್ರವಾಗಿದೆ.

**ಮನಸ್ಸಿನ ಕ್ರಿಯೆಗಳ ನಿರೂಪಣ:**

ಇಲ್ಲಿ ಮತ್ತೊಂದು ಸಂಗತಿಯನ್ನು ವಿಚಾರಿಸುವಾ. ಹಳೆಯ ಮನ-ಶ್ಶಾಸ್ತ್ರಜ್ಞರು ಮನಸ್ಸು ಅನೇಕ ಶಕ್ತಿಗಳ ಸಿವುಹು ಎಂದು ಪ್ರತಿಪಾದಿಸುತ್ತಿ-ದ್ದರು. ಆಲೋಚನೆ, ಸ್ಮರಣ, ವಿವೇಚನೆ, ಅನುಮಾನ, ನಿರ್ಣಯ ಇತ್ಯಾದಿ ಮನಸ್ಸಿನ ಕ್ರಿಯೆಗಳು ಪ್ರತ್ಯೇಕ ಶಕ್ತಿಗಳೆಂದೂ, ಅವುಗಳನ್ನು ಬೆಳೆಯಿಸಲು ಬೇರೆಬೇರೆ ವಿಷಯುಗಳನ್ನು ಕಲಿಸಬೇಕೆಂದೂ ವಾದಿಸುತ್ತಿದ್ದರು. ಆಲೋ-ಚನಾ ಶಕ್ತಿಯನ್ನು ಬೆಳೆಸಲು ಗಣಿತ,ಸ್ಮರಣ ಶಕ್ತಿಯನ್ನು ಬೆಳೆಸಲು ಇತಿ-

ಹಾಸ, ಅನುಮಾನ ನಿರ್ಣಯ ಶಕ್ತಿಯನ್ನು ಬೆಳಿಸಲು ತರ್ಕಶಾಸ್ತ್ರ ಇತ್ಯಾದಿ ವಿಷಯಗಳನ್ನು ಕಲಿಸುವ ಪರಿಪಾಠವಿತ್ತು. ಆಧುನಿಕ ಮನಶ್ಶಾಸ್ತ್ರಜ್ಞರು ಈ ವಾದವನ್ನು ಖಂಡಿಸಿರುವರು. ಮನಸ್ಸು ಶಕ್ತಿಗಳ ಒಂದು ಸಿವುಡು ಅಲ್ಲ; ಅದು ಅಖಂಡವಾಗಿ ಕೆಲಸ ಮಾಡುತ್ತದೆ. ಬೇರೆಬೇರೆ ಶಕ್ತಿಗಳು ಸ್ವತಂತ್ರ-ವಾಗಿ ಕೆಲಸ ಮಾಡುವದಿಲ್ಲ. ಆದರಿಂದ ಅವುಗಳಿಗೆ ಸ್ವತಂತ್ರ ವ್ಯಕ್ತಿತ್ವವಿಲ್ಲ. ಭಿನ್ನ ಭಿನ್ನ ಶಕ್ತಿಗಳು ಮನಸ್ಸಿನ ಭಿನ್ನ ಭಿನ್ನ ಕ್ರಿಯೆಗಳು. ನಾವು ಒಂದು ಸಂಗತಿಯ ಬಗೆಗೆ ಆಲೋಚಿಸುವಾಗ ಅದಕ್ಕೆ ಸಂಬಂಧಿಸಿದ ಹಿಂದಿನ ಅನುಭವವನ್ನು ನೆನಪಿಗೆ ತಂದುಕೊಳ್ಳುತ್ತೇವೆ; ಎಂದರೆ ಆಲೋಚನೆ, ಸ್ಮರಣೆ ಇವೆರಡೂ ಕ್ರಿಯೆಗಳು ಒಂದಕ್ಕೊಂದು ಮೇಳಾಗಿ ಕೆಲಸ ಮಾಡುತ್ತವೆ. ಆ ಸಂಗತಿಯ ಬಗೆಗೆ ಮುಂದಿನ ಧೋರಣವೇನೆಂದು ಆಲೋಚಿಸುವಾಗ ಅನುಮಾನ, ನಿರ್ಣಯಗಳು ಪ್ರಕಟವಾಗಿ ತಮ್ಮ ಕಾರ್ಯ ಮಾಡುತ್ತವೆ. ಹೀಗೆ ಮನಸ್ಸಿನ ಕ್ರಿಯೆಗಳು ಸ್ವತಂತ್ರವಾಗಿ ಸಾಗದೆ ಒಂದಕ್ಕೊಂದು ಸಬಂಧಿತವಾಗಿ ಸಾಗುತ್ತವೆ. ಆದುದರಿಂದ ಶಕ್ತಿವಾದವು (Faculty Psychology) ನಿರಾಕರಿಸಲ್ಪಟ್ಟ ಸಿದ್ಧಾಂತವು. ಮನಸ್ಸು ಅನೇಕ ರೂಪವಾಗಿ ಕೆಲಸ ಮಾಡುತ್ತಿದೆ; ಆದರೆ ಆದರ ಕ್ರಿಯೆಗಳಲ್ಲಿ ಪರಸ್ಪರ ಸಂಬಂಧವಿದೆ. ಅದು ಅಖಂಡವಾಗಿ ಕೆಲಸ ಮಾಡುತ್ತಿದೆ. ಇದು ಆಧುನಿಕ ಮನಶ್ಶಾಸ್ತ್ರ-ಜ್ಞರು ಒಪ್ಪಿದ ಮಾತು. ಇದನರಿತರೆ ಅನುಬಂಧ ಸಿದ್ಧಾಂತವು ಮನಶ್ಶಾಸ್ತ್ರಾನುಗಾಮಿಯಾಗಿದೆ ಎಂದು ಸಿದ್ಧವಾಗುವದಿಲ್ಲವೇ?

**ಅನುಬಂಧವು ಶಿಕ್ಷಣದಲ್ಲಿ ನೈಜಮಾರ್ಗವು:**

**ಶ್ರೀ. ಕಾಕಾ ಕಾಲೇಕರ** ಅವರು ಅನುಬಂಧ ಸಿದ್ಧಾಂತವನ್ನು ಸಮರ್ಥಿಸಲು ಒಂದು ವ್ಯವಹಾರಿಕ ಉದಾಹರಣೆಯನ್ನು ಕೊಟ್ಟಿದ್ದಾರೆ. ಒಬ್ಬ ವಕೀಲನು ಒಂದು ಖಟ್ಲೆಯ ಬಗೆಗೆ ವಾದ ಹಾಕುವಾಗ ಕಾಯಿದೆ ಜ್ಞಾನವನ್ನು ಸ್ವಲ್ಪ ಮಟ್ಟಿಗೆ ಹೆಣೆಯುತ್ತಾನೆ. ಅವನ ಉದ್ದೇಶವು ಕಾಯಿದೆಯನ್ನು ಕಲಿಸುವದು ಅಲ್ಲ; ತನ್ನ ಖಟ್ಲೆಯನ್ನು ಗೆಲ್ಲುವದು. ತನ್ನ ಉದ್ದೇಶ ಸಫಲತೆಗಾಗಿ ಅಗತ್ಯವೆನಿಸಿದಷ್ಟು ಕಾಯಿದೆ ಜ್ಞಾನವನ್ನು ನಿಶ್ಚಯಿಸುವನು. ಯಾವ ಸಮಯದಲ್ಲಿ ಎಷ್ಟು ಜ್ಞಾನವನ್ನು ಕೊಟ್ಟರೆ ಉಚಿತವಾಗುವದೆಂಬದನ್ನೂ, ಯಾವ ಕ್ರಮದಿಂದ ಸಾಗಿದರೆ ಅದು ಆಕರ್ಷಕವಾಗುವದೆಂಬ

ದನ್ನೂ ನಿರ್ಣಯಿಸುವ ಹದಗಾಲವನ್ನನುಸರಿಸಿ ಸಾಗುವನು. ಈ ರೀತಿ ಒಬ್ಬ ವಕೀಲನು ತನ್ನ ಖಟ್ಲೆಯನ್ನು ಜಾಣ್ಮೆಯಿಂದ ಸಾಗಿಸುವಾಗ ಒಬ್ಬ ಸಾಮಾನ್ಯ ಮನುಷ್ಯನು ಮೋಜಿಗಾಗಿ ಖಟ್ಲೆಯನ್ನು ನಿರೀಕ್ಷಿಸುತ್ತಿದ್ದರೂ ಅವನಿಗೆ ಅಪ್ರತ್ಯಕ್ಷವಾಗಿ ಕಾಯಿದೆಯ ಸ್ವಲ್ಪ ಜ್ಞಾನವಾಗುವದು. ಇದುವೇ ಅನುಬಂಧ ಪದ್ಧತಿಯು. ಶಿಕ್ಷಣದಲ್ಲಿ ನೈಜವಾದ ಕ್ರಮವು, ಒಂದು ವಿಷಯದ ಸ್ವಲ್ಪ ಜ್ಞಾನವು ಚಿತ್ತಾಕರ್ಷಕ ಅನುಭವದ ಭಾಗವಾಗಿ ನಮಗೆ ದೊರೆತರೆ ಅವನ್ನು ಅರಗಿಸುವ ವಿಧಾನವು ಸ್ವಾಭಾವಿಕವಾಗಿ : ಇಲ್ಲವೆ ಅಪ್ರತ್ಯಕ್ಷವಾಗಿ ಸಾಗುವದು. ಉತ್ತಮ ಶಿಕ್ಷಕನು ಇದೇ ವಿಧಾನವನ್ನು ಅನುಸರಿಸುವನು.

### ವ್ಯವಹಾರದಲ್ಲಿ ಅನುಬಂಧ ತತ್ತ್ವ:

ನಮ್ಮ ನಿತ್ಯ ವ್ಯವಹಾರದಲ್ಲಿಯೂ ಅನುಬಂಧ ಸಿದ್ಧಾಂತವು ಒಡಮೂಡಿರುವದು. ನಮ್ಮ ಮನೆಗೆ ಅತಿಥಿಗಳು ಬಂದಾಗ ಅನ್ನದ ಋಣವಿದ್ದುದರಿಂದಲೇ ಅವರು ಬಂದಿರುವರೆಂದು ನಾವು ಭಾವಿಸುತ್ತೇವೆ. ಅರ್ಥಾತ್ ನಮ್ಮ ಅವರ ಸಂಬಂಧವು ಎಂದಾದರೂ ಉಂಟಾಗಿರಲಿಕ್ಕೆ ಬೇಕೆಂದು ನಂಬುತ್ತೇವೆ. ಆ ಸಂಬಂಧದ ಕುರುಹನ್ನು ನಮ್ಮಲ್ಲಿ ಬಿಟ್ಟಿರುವರೆಂದೂ ಗ್ರಹಿಸುತ್ತೇವೆ. ಅತಿಥಿ ಸತ್ಕಾರವು ಸಾಂಸ್ಕೃತಿಕ ಜೀವನದ ಲಕ್ಷಣ. ಸಾಂಸ್ಕೃತಿಕ ಜೀವನದ ಆವಿರ್ಭಾವದಲ್ಲಿ ಶಿಕ್ಷಣದ ಮಹತಿಯುಂಟು. ಆಪ್ತೇಷ್ಟರ ಬಗೆಗೆ ಮಾತನಾಡುವಾಗ "ನಮ್ಮ-ಅವರ ಋಣಾನುಬಂಧವಿದೆ" ಎಂದು ತಟ್ಟನೆ ಹೇಳುವದುಂಟು. ಜೀವನದ ಪ್ರತಿಯೊಂದು ದೃಶ್ಯದಲ್ಲಿ ಅನುಬಂಧವು ಪ್ರತಿಬಿಂಬಿತವಾಗುವದು. ಒಂದು ಗೀತರಂಗದ ಕಾರ್ಯಕ್ರಮವನ್ನು ನಿರೀಕ್ಷಿಸಿರಿ. ಒಬ್ಬನು ಕೊಳಲು ಊದುವನು. ಮತ್ತೊಬ್ಬನು ವೀಣ ಇಲ್ಲವೆ ಪೀಯಾನವನ್ನು ಬಾರಿಸುನು. ಬೇರೊಬ್ಬನು ತಬಲ ಬಾರಿಸುವನು. ಹೀಗೆ ಬೇರೆಬೇರೆ ವಾದ್ಯಗಳನ್ನು ಏಕಕಾಲಕ್ಕೆ ಉಪಯೋಗಿಸುವರು. ಪ್ರತಿಯೊಂದು ವಾದ್ಯದ ಸ್ವರವು ಬೇರೆಯಾಗಿದ್ದರೂ ತಾಳ-ಲಯಗಳಿಗನುಸರಿಸಿ ಅವುಗಳನ್ನು ಉಪಯೋಗಿಸಿದಲ್ಲಿ ಏಕಸ್ವರವು ಹೊರಡುವದು. ಅದುವೇ ಸ್ವರ ಮಾಧುರ್ಯವು, ಸಂಗೀತವು ವಿವಿಧ ಸ್ವರಗಳ ಮಧ್ಯದಲ್ಲಿ ಏಕಸ್ವರ ಹುದುಗಿದೆ. ಅದನ್ನು ಹೊರಡಿಸಲು

ಕಲಾವಂತರು ಬೇಕು. ಒಂದು ವಾದ್ಯದ ಸ್ವರವು ಮತ್ತೊಂದರ ಸ್ವರಕ್ಕೆ ಹೇಗೆ ಸಂಬಂಧಹಾಗಿದೆಂಬದನು ಅರಿಯಬೇಕು, ಎಂದರೆ ಅನುಬಂಧದ ಸ್ವಾರಸ್ಯವು ಹೊರಚಿಮ್ಮುವದು. ಜೀವನದಲ್ಲಿಯೂ ರಸವಿದೆ, ಮಾಧುರ್ಯವಿದೆ, ಸಂಗೀತವಿದೆ, ಏಕತ್ವವಿದೆ. ಅಂತಲೇ ಮಹಾತ್ಮಾಜಿಯವರು ಜೀವನ ಸಂಗೀತ ಎಂಬ ಶಬ್ದವನ್ನು ಒಂದೆಡೆ ಬಳಸಿದ್ದಾರೆ.

ಮೇಲಿನ ಎಲ್ಲ ಉದಾಹರಣೆಗಳಿಂದ ವಿಶ್ವದ ಯಾವದೊಂದು ಅಂಗಕ್ಕೂ ಅನುಬಂಧ ತತ್ತ್ವವೇ ತಳಹದಿಯಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಇದು ಸೃಷ್ಟಿಕರ್ತನ ಚಾತುರ್ಯವು. ಸೃಷ್ಟಿಯ ವಸ್ತುಗಳಲ್ಲಿ, ನಮ್ಮ ಶರೀರ ರಚನೆ, ವನಸ್ಪಿನ ರಚನೆ ಹಾಗು ಅವುಗಳ ಕ್ರಿಯೆಗಳಲ್ಲಿ, ಮಗುವಿನ ವಿಕಾಸ ಮಾರ್ಗದಲ್ಲಿ, ನಮ್ಮ ನಿತ್ಯ ವ್ಯವಹಾರದಲ್ಲಿ ಅನುಬಂಧವೇ ಮೂಲ ಸಿದ್ಧಾಂತವು. ಇದನ್ನನುಸರಿಸುವದೇ ಸ್ವಾಭಾವಿಕ ಮಾರ್ಗವು.

## ೨. ಅನುಬಂಧ ತಂತ್ರ

ವರ್ಧಾ ಶಿಕ್ಷಣದ ಯೋಜನೆಯು ಶಿಕ್ಷಣದ ಹೊಸ ಸಿದ್ಧಾಂತವನ್ನು ಅಪ್ಪಿಕೊಂಡಿದೆ. ಆದರಂತೆ ಅಧ್ಯಾಪನ ಕಾರ್ಯದಲ್ಲಿ ಹೊಸ ಕ್ರಮವನ್ನು ಒಪ್ಪಿದೆ. ಈ ಕ್ರಮಕ್ಕೆ 'ಅನುಬಂಧ' ಎಂಬ ಹೆಸರು. ಹಿಂದಿನ ಅಧ್ಯಾಯದಲ್ಲಿ ಅನುಬಂಧ ಸಿದ್ಧಾಂತವು ವಿಶ್ವವನ್ನು ಹೇಗೆ ಆವರಿಸಿದೆ ಹಾಗು ಶಿಕ್ಷಣದಲ್ಲಿ ತನ್ನ ಸ್ವಾಭಾವಿಕ ಸ್ಥಾನವನ್ನುಹೇಗೆ ಹೊಂದಿದೆ ಎಂಬುದನ್ನು ವಿವರಿಸಲಾಗಿದೆ. ಇಲ್ಲಿ ಅನುಬಂಧ ತಂತ್ರವನ್ನು ಪರಿಶೀಲಿಸುವ ಮೂಲ ಶಿಕ್ಷಣದ ಬಗೆಗೆ ಅನೇಕರು ಒಳ್ಳೇ ಅಭಿಪ್ರಾಯ ಕೊಡಹತ್ತಿದ್ದಾರೆ. ಶಿಕ್ಷಣದ ಆದರ್ಶವು ಉದಾತ್ತವಾಗಿದೆ. ಅದನ್ನು ಮುಟ್ಟಲು ನೆರವಾಗುವ ಉದ್ದಿಶ್ಯಗಳು ವ್ಯಾವಹಾರಿಕವಾಗಿವೆ. ಉತ್ಪಾದಕ ಉದ್ಯಮದ ಮೂಲಕ ಶಿಕ್ಷಣವನ್ನು ಕೊಡಬೇಕೆಂಬ ತತ್ತ್ವವೂ ಸರಿಯಾಗಿದೆ ಎಂದು ಅನ್ನುವರು. ಆದರೆ 'ಅನುಬಂಧ' ಶಬ್ದವನ್ನು ಬಳಸಿದಾಗ ಅಂಜುವರು. ಆಶ್ಚರ್ಯವೇನಿಲ್ಲ. ಅನುಬಂಧ ಪದ್ಧತಿಯನ್ನು ಕಾರ್ಯರೂಪದಲ್ಲಿ ತರುವದು ಸುಲಭವಲ್ಲ. ಶಿಕ್ಷಕನ ಅನುಭವ, ಜಾಣ್ಮೆ ಇವುಗಳ ಮೇಲೆ ಅವಲಂಬಿಸಿದೆ. ಶಿಕ್ಷಣವು ಶಾಸ್ತ್ರವೂ ಅಹುದು, ಕಲೆಯೂ ಅಹುದು. ಶಾಸ್ತ್ರಕ್ಕೆ ಸಂಬಂಧಿಸಿದ ಸಂಗತಿಗಳನ್ನು ತಿಳಿದರೆ ಸಾಲದು; ಶಿಕ್ಷಕನಿಗೆ ಪ್ರತ್ಯಕ್ಷ ಅನುಭವ ಬೇಕು. ಶಿಕ್ಷಕನ ಕೈವಾಡವು ಕಲೆಯ ಮೂಲಕವೇ ವ್ಯಕ್ತವಾಗುವದು. ಈ ಕಲೆಯನ್ನು ಸಾಧಿಸಲು ತಾಳ್ಮೆ ಹಾಗೂ ವಿಶ್ವಾಸ ಬೇಕು.

**ವಿಚಾರ ಸಂಕಲನ**

ಅನುಬಂಧ ಶಬ್ದವು ಶಿಕ್ಷಕರಿಗೆ ಹೊಸತಲ್ಲ. ಹರ್ಬಾರ್ಟನ ಪಾಠದ ಮೆಟ್ಟಿಗಳನ್ನು ಅನುಲಕ್ಷಿಸಬೇಕು. ಮೊದಲನೆಯ ಮೆಟ್ಟು ಪ್ರಸ್ತಾಪನೆ ಈ ಮೆಟ್ಟಿನಲ್ಲಿ ಹಿಂದೆ ಕಲಿಸಿದ ವಿಷಯಗಳಿಗೂ ಇಂದು ಕಲಿಸುವ ವಿಷಯಗಳಿಗೂ ಅನುಬಂಧಿಸುವ ಪರಿಪಾಠವಿದೆ. ಇದರಲ್ಲಿ ಕಲ್ಪನೆಗಳ ಸಾಹಚರ (Association Of Ideas) ತತ್ತ್ವವು ಅದೆ. ಒಮ್ಮೆ ಗೊತ್ತಿದ್ದ ಸಂಗತಿಗಳ ಬಗೆಗೆ ಕೆಲ ಪ್ರಶ್ನೆಗಳನ್ನು ಕೇಳಿ, ಹೊಸ ವಿಷಯ

ಪರಿಚಯ ಮಾಡಿ ಕೊಡುವದುಂಟು. ಪ್ರಚಲಿತ ಶಿಕ್ಷಣದಲ್ಲಿ ಅನುಬಂಧ ನಿಯಮವು ವಿಷಯ ಪ್ರವೇಶ ಮೆಟ್ಟಿನಲ್ಲಿ ಮಾತ್ರ ಹೆಚ್ಚಾಗಿ ಬಳಕೆಯಲ್ಲಿದೆ. ವಿಷಯ ವಿವೇಚನಾ ಮೆಟ್ಟಿನಲ್ಲಿಯೂ ಅಲ್ಪ ಮಟ್ಟಿಗೆ ಉಪಯೋಗ ಮಾಡುವದುಂಟು. ಆದರೆ ಈ ತತ್ತ್ವವು ಪಾಠದ ಮೂಲ ಸೂತ್ರವಾಗಿರಲಿಲ್ಲ, ಕೃತಿಗೆ ಸಂಬಂಧಿತವಾಗಿರಲಿಲ್ಲ.

**ವಿಷಯಾನುಬಂಧ:**

ವಿಷಯಾನುಬಂಧ ಎಂಬ ಶಬ್ದವು ಸದ್ಯದ ಶಿಕ್ಷಕರಿಗೆ ಪರಿಚಯವಿದೆ ಇತಿಹಾಸ ವಿಷಯುವನ್ನು ಕಲಿಸುವಾಗ, ನಕ್ಷೆ–ನಕಾಶಗಳನ್ನು ಉಪಯೋಗಿಸಿ ಭೌಗೋಲಿಕ ವಿಷಯುವನ್ನು ಸಂಬಂಧೀಕರಿಸುವದುಂಟು.ಅಲ್ಲದೆ ಐತಿಹಾಸಿಕ ಘಟನೆಗೆ ಸಂಬಂಧಿಸಿದ ಕವಿತೆ ಇಲ್ಲವೆ ಉಲ್ಲೇಖನಗಳನ್ನು ಕಲಿಸುವದುಂಟು; ಅದರಂತೆ ಗಣಿತ ಹಾಗು ಸಾಮಾನ್ಯವಿಜ್ಞಾನ ವಿಷಯುಗಳನ್ನು ಸಂಬಂಧೀಕರಿಸಿ ಪಾಠಗಳನ್ನು ಕಲಿಸುವದುಂಟು. ಒಂದು ಭಾಷಾ ಪಾಠದಲ್ಲಿ ಒಂದು ಐತಿಹಾಸಿಕ ದೃಶ್ಯದ ಇಲ್ಲವೆಕಥೆಯ ವರ್ಣನೆ ತಿಳಿಸುವದುಂಟು. ಹೀಗೆ ಸಾಮಾನ್ಯವಾಗಿ ಒಂದು ವಿಷಯವನ್ನು ಕಲಿಸುವಾಗ ಬೇರೆಬೇರೆ ವಿಷಯಗಳ ಜ್ಞಾನವನ್ನು ಸಂಬಂಧೀಕರಿಸಿ ಕಲಿಸುವ ಪರಿಪಾಠವಿದೆ. ಈ ಕ್ರಮಕ್ಕೆ 'ವಿಷಯಾನುಬಂಧ ಎಂದು ಹೇಳುವರು. ವರ್ಧಾ ಯೋಜನೆಯಲ್ಲಿಯ ಅನುಬಂಧ ತತ್ತ್ವವು ತೀರ ಭಿನ್ನವಾಗಿದೆ.

**ವಿಷಯ ಕೇಂದ್ರೀಕರಣ:**

• ವಿಷಯ ಕೇಂದ್ರೀಕರಣ ಎಂಬ ಶಬ್ದವೂ ಶಿಕ್ಷಕರಿಗೆ ಪರಿಚಯವುಂಟು. ಒಂದು ವಿಷಯುವನ್ನು ಪ್ರಧಾನವಾಗಿಟ್ಟುಕೊಂಡು ಉಳಿದೆಲ್ಲ ವಿಷಯಗಳನ್ನು ಅದಕ್ಕೆ ಸಂಬಂಧೀಕರಿಸಿ ಪಾಠ ಸಾಗಿಸುವ ವಿಧಾನವು. ಈ ಕ್ರಮವು ಸುಲಭವಾಗಿಲ್ಲವೆಂದು ತಟ್ಟನೆ ಹೊಳೆಯದಿರದು. ಯಾಕಂದರೆ ಕೇಂದ್ರ ವಿಷಯವನ್ನಾರಿಸಿಕೊಳ್ಳುವದು ಕಠಿಣ. ಹರ್ಬಾರ್ಟನ ಅನುಯಾಯಿಗಳು ಇತಿಹಾಸವನ್ನು ಕೇಂದ್ರ ವಿಷಯವನ್ನಾಗಿಟ್ಟು ಪ್ರಯೋಗ ಮಾಡಿದರು. ಜಾನ್ ಡ್ಯೂಯಿ ಮತ್ತು ಪಾರ್ಕರ ಅವರು ಭೂಗೋಲು ಕೇಂದ್ರ ವಿಷಯವನ್ನಾಗಿಟ್ಟು ಅನುಬಂಧ ಪದ್ಧತಿಯನ್ನು ಬಳಸಿದರು. ಇತರ ಎಲ್ಲ ವಿಷಯಗಳನ್ನು ಕಲಿಸಲು ಹವಣಿಸಿದರೆ ಹುಚ್ಚಾ ಬಚ್ಚಾ ಅನು

ಬಂಧವಾಗುವದು. ಕೃತ್ರಿಮತೆಗೆ ಪ್ರಾಧಾನ್ಯ ದೊರೆಯುವದು. ಈ ಪದ್ಧತಿಯು ಅವ್ಯವಹಾರ್ಯವೆಂದು ಶಿಕ್ಷಣ ತಜ್ಞರು ಅದನ್ನು ತ್ಯಜಿಸಿದ್ದಾರೆ.

ಅವ್ಯವಹಾರಿಕ ಕ್ರಮಕ್ಕೇ ವ್ಯಾವಹಾರಿಕ ಸ್ವರೂಪ ಕೊಡುವದು ಮಹಾತ್ಮಾಜಿಯವರ ದಿವ್ಯ ದರ್ಶನಕ್ಕೆ ಹೊಳೆಲಾಯಿತು. ತಂದೆ ತಾಯಿಗಳು ಮಕ್ಕಳಿಗೆ ಶಾಲೆಗೆ ಹೋಗಲಿಕ್ಕೆ ತಿಳಿಸಿದಾಗ ಅನೇಕರು ಅಳುವದುಂಟು. ಯಾಕ ದರೆ ಅವರ ಜೀವನದ ಬೇಡಿಕೆಗಳಿಗೆ ಶಾಲೆಯಲ್ಲಿ ಪೂರ್ತಿಕೆಯಿಲ್ಲ. ಓದುಬರೆಹವೆಂದರೆ ಮಕ್ಕಳಿಗೆ ನಡುಗು ಹುಟ್ಟುವದು. ಓದು ಬರೆಹ,ಗಣಿತ ಇತ್ಯಾದಿಗಳು ಮಕ್ಕಳ ಮುಂದಿನ ಜೀವನಕ್ಕೆ ಅವಶ್ಯವಾದವುಗಳೆಂದು ಪ್ರೌಢರಿಗೆ ಗೊತ್ತು; ಆದರೆ ಇವು ಬಾಲ್ಯಾವಸ್ಥೆಯಲ್ಲಿ ಮಕ್ಕಳಿಗೆ ಪ್ರಧಾನ ಬೇಡಿಕೆಗಳಲ್ಲ. ಆದುದರಿಂದ ಮಕ್ಕಳಿಗೆ ಓದು ಬರೆಹವೆಂದರೆ ತಲೆನೋವು. ಇತಿಹಾಸ, ಭೂಗೋಲ, ಸಾಮಾನ್ಯವಿಜ್ಞಾನ ಇತ್ಯಾದಿ ವಿಷಯಗಳನ್ನು ಕಲಿಯಬೇಕೆಂದು ಅವರು ಹಂಬಲಿಸುವದಿಲ್ಲ, ಯಾಕಂದರೆ ಅವು ಅವರ ಜೀವನದ ಅಗತ್ಯಗಳಲ್ಲ. ಬಾಲ್ಯಾವಸ್ಥೆಯಲ್ಲಿ ಚಟುವಟಿಕೆಗಳು ಅವರ ಜೀವಾಳವು. ಅವರ ಶಾರೀರಿಕ–ಮಾನಸಿಕ ವಿಕಾಸವಾಗುವದು ಅವುಗಳ ಮೂಲಕವೇ. ಅವರಿಗೆ ಆಟಗಳಲ್ಲಿ ಪ್ರೀತಿ ಹೆಚ್ಚು. ರಚನಾತ್ಮಕ ಕಾರ್ಯಗಳಲ್ಲಿ ಆಸಕ್ತಿ ಹೆಚ್ಚು. ಒಂದು ನದಿಯ ಇಲ್ಲವೆ ಸಮುದ್ರದ ದಂಡೆಯಲ್ಲಿ ಆಡುವ ಮಕ್ಕಳನ್ನು ನಿರೀಕ್ಷಿಸಬೇಕು. ಕೆಲವರು ಉಸುಕಿನಲ್ಲಿ ಮನೆಗಳನ್ನು ಕಟ್ಟುವರು; ಕೆಲವರು ಸಿಂಪುಗಳನ್ನು ಕೂಡಿಸಿ ಅವುಗಳಿಂದ ನಕ್ಷೆ ತೆಗೆಯುವರು, ಹೀಗೆ ಯಾವುದೊಂದು ರಚನಾತ್ಮಕ ಕಾರ್ಯದಲ್ಲಿ ಅವರು ತೊಡಗುವರು. ಅದರ ಮೂಲಕವಾಗಿ ಆನಂದ ಹೊಂದುವರು. ಆ ಆನಂದ ಸಮಯದಲ್ಲಿ ಅಪ್ರತ್ಯಕ್ಷವಾಗಿ ಅವರು ಅನುಭವ ಗಳಿಸುವರು; ಅರ್ಥಾತ್ ಶಿಕ್ಷಣ ಹೊಂದುವರು. ಈ ಕಾರಣಗಳಿಂದ ಕೃತಿ ಕೇಂದ್ರೀಕರಣ ತತ್ತ್ವವು ಬಳಕೆಯಲ್ಲಿ ಬಂದಿತು.

**ಕೃತಿ ಕೇಂದ್ರೀಕರಣ:**

ಕೃತಿ ಕೇಂದ್ರಿಕರಣವೆಂದರೆ ಯಾವುದೊಂದು ಕೃತಿಯ ಮೂಲಕ ವಿಷಯಗಳನ್ನು ಕಲಿಸುದದು. ಕೃತಿ ಪ್ರಧಾನ ಅಥವಾ ಪ್ರಾಜೆಕ್ಟ ಪದ್ಧತಿ ಯೆಂದು ಹೆಸರು. ಇದು ಮೊದಲು ಅಮೇರಿಕೆಯಲ್ಲಿ ಪ್ರಚಾರವಾಯಿತು. ಮಕ್ಕಳು ಚಟುವಟಿಕೆಗಳಲ್ಲಿ ವಿಶೇಷ ಉತ್ಸಾಹ ತೋರಿಸುವರು. ಅವರು

ಮನೆ ಕಟ್ಟುವರು, ಅಡಿಗೆ ಮಾಡುವರು, ಆಗಿ ಹಚ್ಚುವರು, ನೀರು ಹಾಕು-
ವರು, ಪಾಲನ ಮಾಡುವರು. ಹೀಗೆ ಅನೇಕ ಚಟುವಟಿಕೆಗಳೆಲ್ಲ ಅವರ
ಆಟಗಳಲ್ಲಿ ಪ್ರತಿಬಿಂಬಿತವಾಗುವವು. ತೂಕ-ಅಳತೆ ಮಾಡಲು ಕಲಿಯುವ
ದಕ್ಕಾಗಿ ಅಂಗಡಿ ನಡೆಯಿಸುವರು. ಆದರೆ ಇವುಗಳಲ್ಲಿ ಕೃತ್ರಿಮ ಸನ್ನಿ-
ವೇಶಗಳು ಸೇರುವವು. ಇವು ತಾತ್ಪೂರ್ತಿಕವಾಗಿ ತಯಾರಿಸಲ್ಪಟ್ಟ
ಯೋಜನೆಗಳು. ಬಾಲಕರ ನಿತ್ಯ ಜೀವನದಲ್ಲಿ ಉದ್ಭೂತವಾಗುವ ಸ್ವಾಭಾ-
ವಿಕ ಸಮಸ್ಯೆಗಳಲ್ಲ. ಅವು ಕಾಲ್ಪನಿಕವಾಗಿವೆ. ಅಲ್ಲದೆ, ಅನೇಕ
ಆಟಿಕೆಗಳು ಈ ಕೃತಿಯ ಸನ್ನಿವೇಶಗಳಿಗೆ ಸಾಧನಗಳೇ ಹೊರತು
ಮಕ್ಕಳಿಗೆ ಅವುಗಳಿಂದ ಇತರ ಪ್ರಯೋಜನವಿಲ್ಲ. ಈ ಕೊರತೆ-
ಗಳನ್ನು ಪೂರೈಸಲು ಬಾಪೂಜಿಯವರ ಉಕ್ತಿಯು ಕಾರಣವಾಯಿತು.

**ಉತ್ಪಾದಕ ಉದ್ಯಮ ಕೇಂದ್ರೀಕರಣ:**

ಮಾಡುತ್ತ ಕಲಿ ಎಂಬ ಶಿಕ್ಷಣ ತತ್ತ್ವವು ಮಾನ್ಯವಾದುದು. ಆದರೆ
ಬಾಲಕರ ಕೃತಿಗಳು ಮಕ್ಕಳ ನಿತ್ಯ ಜೀವನದ ಬೇಡಿಕೆಗಳಿಗೆ ಹೊಂದಿಕೆ-
ಯಾಗಬೇಕೆಂಬುದು ಮಹಾತ್ಮಾಜಿಯವರು ಬೋಧೆಯ ಮರ್ಮ. ಮಕ್ಕಳು
ಸ್ವಾಭಾವಿಕವಾಗಿ ಕೆಲಸದಲ್ಲಿ ತೊಡಗುವರು. ಕೃತಿಗಳ ಮೂಲಕ ಅವರ
ಶರೀರ-ಬುದ್ಧಿಗಳು ವಿಕಾಸ ಹೊಂದುವವು. ಅವರು ಮನೆ, ಶಾಲೆ,
ಸಮಾಜಗಳಲ್ಲಿ ಬಾಳುವರು, ಬೆಳೆಯುವರು. ಅದರಿಂದ ಮಕ್ಕಳ ಜ್ಞಾನ
ಸಾಧನಗಳು ಅವನ ಕೃತಿಗಳೇ ಹೊರತು ಹೊತ್ತಿಗೆಗಳಲ್ಲ. ಅವರಿಗೆ ಕೊಡ
ತಕ್ಕ ಕೃತಿಗಳು ಜೀವನದ ಪ್ರಾಥಮಿಕ ಬೇಡಿಕೆಗಳಿಗೆ-ಅನ್ನವಸ್ತ್ರಗಳಿಗೆ-
ಸಂಬಂಧಿಸಿರಬೇಕು. ಆಹಾರ ಬೆಳೆಯುವ, ಬಟ್ಟೆ ತಯಾರಿಸುವ ಪ್ರಾಥ-
ಮಿಕ ಕಲೆಗಳ ಪರಿಚಯವು ಮಕ್ಕಳಿಗೆ ಮೊದಲು ಆಗಬೇಕು. ಅವುಗಳ
ಮೂಲಕ ಜೀವಿಕೆಯ ಕಲೆಯನ್ನು ಕೈವಶ ಮಾಡುತ್ತ ಅವರು ಬೆಳೆಯ-
ಬೇಕು. ತೋಟಪಟ್ಟಿ ಹಾಗು ಕೃಷಿ, ನೂಲುವದು ಹಾಗು ನೇಯು-
ವದು ಇವು ಆವಶ್ಯಕ ಉದ್ಯೋಗಗಳು. ಇವು ಶಾಲೆಗಳಲ್ಲಿ ಮೂಲ
ಉದ್ಯೋಗಗಳಾಗಬೇಕು. ಮಕ್ಕಳು ಈ ಉದ್ಯಮಗಳ ಮೂಲಕ ಜ್ಞಾನ
ಸಂಪಾದಿಸಬೇಕು; ಅನ್ಯಾತ್ ಇತರ ವಿಷಯಗಳನ್ನು ಕಲಿಯಬೇಕು.
ಭಾಷೆ, ಇತಿಹಾಸ, ಭೂಗೋಲ, ಸಾಮಾನ್ಯ ವಿಜ್ಞಾನ, ಸಂಗೀತ, ಚಿತ್ರ

ಕಲೆ ಇತ್ಯಾದಿ ವಿಷಯಗಳನ್ನು ಶಾಲೆಯಲ್ಲಿ ಕಲಿಸುವ ರೂಢಿಯಿದೆ. ಈ ವಿಷಯಗಳು ಬಾಲಕರಿಗೆ ರುಚಿಸಲಿ, ರುಚಿಸದಿರಲಿ, ಅವುಗಳನ್ನು ಶಿಕ್ಷಕರು ಕಲಿಸುವರು. ಇದರಿಂದ ಈ ಜ್ಞಾನವು ಸರಿಯಾಗಿ ಮಕ್ಕಳಿಗೆ ಜೀರ್ಣ ವಾಗುವದಿಲ್ಲ. ಅದು ಅವರ ಮನಸ್ಸಿನ ಶಾಶ್ವತ ಭಾಗವಾಗಿ ಉಳಿಯುವ ದಿಲ್ಲ. ಅದು ತೀವ್ರ ಅವರ ಮನಸ್ಸಿನಿಂದ ಮಾಯವಾಗುವದು. ಶಿಕ್ಷಕನ ಒತ್ತಾಯಕ್ಕಾಗಿ ಆ ವಿಷಯವನ್ನು ಕುರುಡು ಪಾಠ ಮಾಡುವದೂ ಉಂಟು. ಇದು ಸಹಜ ಮಾರ್ಗವಲ್ಲ, ಮಕ್ಕಳು ಸ್ವಾಭಾವಿಕವಾಗಿ ಕಲಿಯುವ ಮಾರ್ಗವಲ್ಲ. ಕೃತ್ರಿಮವಾಗಿ ವಿಷಯ ಜ್ಞಾನ ತುಂಬುವ ವಿಧಾನವು ದೂರವಾಗಬೇಕು. ತಲೆಭಾರ ಶಿಕ್ಷಣವು ಬಾಲಕರಿಗೆ ಬೇಕಿಲ್ಲ. ಜೀವನದ ಪ್ರಾಥಮಿಕ ಬೇಡಿಕೆಗಳಿಗೆ ಸಂಬಂಧಿಸಿದ ಉದ್ಯೋಗ ಗಳೇ ಮಕ್ಕಳ ಮೂಲ ಉದ್ಯೋಗಗಳು. ಅವು ಅವರ ವಿಕಾಸದ ಸಾಧನ ಗಳು, ಅವುಗಳ ಮೂಲಕ ಇತರ ವಿಷಯಗಳ ಜ್ಞಾನವನ್ನು ಅವರು ದೊರಕಿಸಬೇಕು. ಇದುವೇ ವರ್ಧಾ ಯೋಜನೆಯ ಮೂಲ ಮಂತ್ರವು ಅನುಬಂಧ ತಂತ್ರದ ಸೂತ್ರವು. ಅವರನ್ನು ಆವರಿಸಿದ ವಾತಾವರಣವನ್ನು ಅನುಲಕ್ಷಿಸಬೇಕು. ಅವರು ಪ್ರಕೃತಿ, ಮನೆ, ಶಾಲೆ, ಸಮಾಜ ಈ ಸನ್ನಿವೇಶಗಳಲ್ಲಿ ಬೆಳೆಯುವರು; ಎಂದರೆ ನೈಸರ್ಗಿಕ ಹಾಗೂ ಸಾಮಾ ಜಿಕ ವಾತಾವರಣಗಳಲ್ಲಿ ಬೆಳೆಯುವರು. ಅವು ಅವರ ಬೆಳಗೆಗೆ ಪೋಷಕ ವಾಗುವವು. ಈ ಕಾರಣ ಅನುಬಂಧ ತಂತ್ರವು ತ್ರಿವಿಧ ಸನ್ನಿವೇಶಗಳನ್ನು ಒಳಗೊಂಡಿದೆ.

(೧) ಆರ್ಥಿಕ ಸನ್ನಿವೇಶ (ಉದ್ಯಮದ ಚಟುವಟಿಕೆಗಳು)
(೨) ನೈಸರ್ಗಿಕ ಸನ್ನಿವೇಶ (ನಿಸರ್ಗ ಪರೀಕ್ಷಣದ ಚಟುವಟಿಕೆಗಳು)
(೩) ಸಾಮಾಜಿಕ ಸನ್ನಿವೇಶ (ಸಾಮಾಜಿಕ ಚಟುವಟಿಕೆಗಳ)

**ಆರ್ಥಿಕ ಪರಿಸ್ಥಿತಿ:**

ಮೂಲ ಉದ್ಯೋಗಕ್ಕೆ ಸಂಬಂಧಿಸಿದ ವಿವಿಧ ಕ್ರಿಯೆಗಳು ಈ ಪರಿ ಸ್ಥಿತಿಗೆ ಸಂಬಂಧಪಟ್ಟಿವೆ. ಹತ್ತಿಯನ್ನು ಬಿಡಿಸುವದು; ಸ್ವಚ್ಛ ಮಾಡುವದು, ಆರೆಯುವದು, ಹಿಂಜುವದು. ಹಂಜಿ ಮಾಡುವದು; ನೂಲು ತೆಗೆಯುವದು, ಸುತ್ತುವದು, ಲಡಿ ಮಾಡುವದು ಮುಂತಾದ ಕ್ರಿಯೆಗಳು ನೂಲುವ

ಉದ್ಯೋಗದ ಉಪ ಚಟುವಟಿಕೆಗಳು. ಎಳೆ ತೋಡುವದು, ಹುರಿ ಹಾಕುವದು, ಹಾಸು ಮಾಡುವದು, ಉಂಕಿ ಮಾಡುವದು, ಕಂಡಿಕೆ ಸುತ್ತುವದು. ಎಳೆ ತುಂಬುವದು ಲಾಳಿ ಒಗೆಯುವದು ಮುಂತಾದ ಕ್ರಿಯೆಗಳು ನೇಗೆ ಉಪ ಚಟುವಟಿಕೆಗಳು. ಇವೆಲ್ಲ ಕ್ರಿಯೆಗಳಲ್ಲಿ ಮಕ್ಕಳಿಗೆ ಜ್ಞಾನವಾಗುವದು. ಅಲ್ಲದೆ ಈ ಕ್ರಿಯೆಗಳಿಗೆ ಬೇಕಾಗುವ ಉಪಕರಣಗಳ ಬಗೆಗೆ ಜ್ಞಾನವೂ ದೊರೆಯುವದು. ಮಡಿ ಮಾಡುವದು, ಗೊಬ್ಬರ ಹಾಕುವದು, ಆಗಿ ಗಳನ್ನು ಹಚ್ಚುವದು, ಕಾಯಿಪಲ್ಯ ಬೆಳಿಸುವದು, ಹಾಗು ರಂಟೆ ಹೊಡೆಯುವದು, ಬಿತ್ತುವದು, ಹರಗುವದು, ರಾಶಿ ಮಾಡುವದು, ಬೆಳೆ ಕಿತ್ತುವದು ಇತ್ಯಾದಿ ಕೈತೋಟದ ಹಾಗು ಒಕ್ಕಲತನದ ಕ್ರಿಯೆಗಳು ಅನುಬಂಧ ಪದ್ಧತಿಗೆ ಬಹಳ ಅನುಕೂಲವಿವೆ.

**ನೈಸರ್ಗಿಕ ಪರಿಸ್ಥಿತಿ:**

ಸೂರ್ಯ, ಚಂದ್ರ, ಮೋಡ. ನಕ್ಷತ್ರ ಇವುಗಳ ನಿರೀಕ್ಷಣೆ, ಹಳ್ಳ, ಹೊಳೆ, ದಿಬ್ಬ, ಗುಡ್ಡ. ಕೆರೆ, ಕೊಳ್ಳ ಮುಂತಾದವುಗಳ ನಿರೀಕ್ಷಣೆ, ಕೋಟೆ, ಕೊತ್ತಲು, ಮಣ್ಣು, ಬಣ್ಣಗಳ ಪರಿಶೀಲನೆ, ತರತರದ ಹೂಗಳು, ಬಳ್ಳಿ ಕಾಯಿಗಳು. ಹಣ್ಣು-ಹಂಪಲಗಳು ಮುಂತಾದವುಗಳ ಪರೀಕ್ಷಣ ಇತ್ಯಾದಿ ಅನೇಕ ಕಾರ್ಯಗಳು ನೈಸರ್ಗಿಕ ಪರಿಸ್ಥಿತಿಯಲ್ಲಿ ನಡೆಯುವವು.

**ಸಾಮಾಜಿಕ ಪರಿಸ್ಥಿತಿ:**

ಹಬ್ಬ--ಹುಣ್ಣಿವೆ, ಪುಣ್ಯ ತಿಥಿಗಳ ಆಚರಣೆ, ತೋಟದ ಊಟ. ಶಾಲೆಯ ವಾರ್ಷಿಕೋತ್ಸವ, ಆಟನೋಟಗಳು, ಸ್ವಚ್ಛತೆ ಹಾಗು ಅಡಿಗೆಯ ಕೆಲಸ, ಪ್ರವಾಸಗಳು, ಪ್ರದರ್ಶನಗಳು ಮುಂತಾದ ಅನೇಕ ಸಾಂಘಿಕ ಚಟುವಟಿಕೆಗಳು ಶಾಲೆಯ ಸಾಮಾಜಿಕ ಪರಿಸ್ಥಿತಿಗೆ ಸಂಬಂಧಿಸಿರುತ್ತವೆ.

ಈ ಮೂರು ಸನ್ನಿವೇಶಗಳಲ್ಲಿಯ ಚಟುವಟಿಕೆಗಳನ್ನು ಶಿಕ್ಷಣದ ಸಾಮಗ್ರಿಗಳನ್ನಾಗಿ ಉಪಯೋಗಿಸಿದರೆ, ಶಿಕ್ಷಣವು ಜೀವನದೊಡನೆ ಬೆರೆಯುವದು. ಜೀವನವೇ ಶಿಕ್ಷಣವಾಗುವದು. ಅನುಬಂಧವು ಸ್ವಾಭಾವಿಕವಾಗುವದು. ಅನುಬಂಧ ಪದ್ಧತಿಯನ್ನು ಬಳಸಲು ಸುಲಭವಾಗುವದು. ಸಾಮಾನ್ಯ ಶಿಕ್ಷಕರಿಗೂ ಅನುಬಂಧ ಪದ್ಧತಿಯನ್ನು ಅನುಸರಿಸಲು. ಅನುಕೂಲವಾಗುವದು. ಅನುಬಂಧ ತಂತ್ರದಲ್ಲಿ ತರಬೇತು ಹೊಂದುವ ಶಿಕ್ಷಕರು

ಮೇಲೆ ಹೇಳಿದ ಮೂರು ಪರಿಸ್ಥಿತಿ ಅಥವಾ ಸನ್ನಿವೇಶಗಳಲ್ಲಿ ಸಮಾವೇಶ ವಾಗುವ ಚಟುವಟಿಕೆಗಳನ್ನು ತೋರಿಸುವ ಪಟ ತಯಾರಿಸಿಕೊಳ್ಳಬೇಕು ಆ ಆ ಚಟುವಟಿಕೆಗಳಿಗೆ ಸಂಬಂಧಿತವಾಗುವ ಅಭ್ಯಾಸ ವಿಷಯಗಳ ಜ್ಞಾನ ವನ್ನು ಜೋಡಿಸಿಕೊಳ್ಳಬೇಕು; ನಂತರ ಪ್ರಯೋಗ ಮಾಡಬೇಕು ಪ್ರಯೋಗದ ಪರಿಣಾಮ ಬರೆದಿಡಬೇಕು. ಹೆಚ್ಚು ಹೆಚ್ಚು ಅನುಭವ ದೊರೆತಂತೆ ಅನುಬಂಧ ಪದ್ಧತಿಯಲ್ಲಿ ವಿಶ್ವಾಸ ಹುಟ್ಟುವದು.

—

# ೩. ಅನುಬಂಧ ತಂತ್ರ ಸಾಧನ

ಅನುಬಂಧ ತಂತ್ರವನ್ನು ಸಾಧಿಸಲು ಅನೇಕರು ಅನೇಕ ರೀತಿಯಾಗಿ ಯತ್ನಿಸಿದ್ದಾರೆ. ಮೂಲ ಶಿಕ್ಷಣದ ಮೊದಲನೆಯ ವರುಷ ಕೆಲಸಗಾರರು ಹೆಚ್ಚಾಗಿ ಮೂಲ ಉದ್ಯೋಗಕ್ಕೆ ಲಕ್ಷ್ಯ ಪೂರೈಸಿದ್ದಾರೆ; ಎಂದರೆ ಮೂಲ ಉದ್ಯೋಗವನ್ನು ಸಶಾಸ್ತ್ರವಾಗಿ ಸಾಗಿಸುವಾಗ ಗಣಿತ, ಇತಿಹಾಸ, ಭೂಗೋಲ ಇತ್ಯಾದಿ ಸಾಮಾನ್ಯ ವಿಷಯಗಳನ್ನು ಸಂಬಂಧೀಕರಿಸಲು ಯತ್ನ ಮಾಡಿದ್ದಾರೆ. ಝಾಕೀರ ವರದಿಯಲ್ಲಿ ಅಭ್ಯಾಸಪತ್ರಿಕೆಯನ್ನು ಜೋಡಿಸಲಾಗಿದೆ. ಅಲ್ಲಿ ತೋರಿಸಿದ ಸಮಾಜ ವಿಜ್ಞಾನ ಹಾಗು ಸಾಮಾನ್ಯ ವಿಜ್ಞಾನಗಳಿಗೆ ಸಂಬಂಧಿಸಿದ ಕೆಲ ವಿಷಯಗಳನ್ನು ಮೂಲ ಉದ್ಯೋಗಕ್ಕೆ ಅನುಬಂಧಿಸಲು ಸಾಧ್ಯವಾಗಲಿಲ್ಲ. ವಿಷಯ ಪತ್ರಿಕೆಯಲ್ಲಿ ತೋರಿಸಿದ ಎಲ್ಲ ವಿಷಯಗಳನ್ನು ಮೂಲುವ ಉದೋಗಕ್ಕೆ ಹೇಗೆ ಸಂಬಂಧೀಕರಣ ಮಾಡಬೇಕೆಂಬುದುಒಂದುದೊಡ್ಡ ಸಮಸ್ಯೆಯಾಯಿತು. ಮೂಲುವ ಉದ್ಯೋಗ ಹಾಗು ಗಣಿತ, ಮೂಲುವ ಉದೋಗ ಹಾಗು ಸಾಮಾನ್ಯ ವಿಜ್ಞಾನ, ಮೂಲುವ ಉದ್ಯೋಗ ಹಾಗು ಸಮಾಜ ವಿಜ್ಞಾನ ಹೀಗೆ ವಿಷಯಗಳನ್ನು ಆರಿಸಿ ಪ್ರತ್ಯೇಕವಾಗಿಯೂ ಪ್ರಯೋಗ ಮಾಡಿದ್ದಾರೆ. ಒಂದು ಉದ್ಯೋಗಕ್ಕೆ ಅಭ್ಯಾಸ ಪತ್ರಿಕೆಯಲ್ಲಿ ತೋರಿಸಿದ ಎಲ್ಲ ವಿಷಯಗಳನ್ನು ಅನುಬಂಧಿಸಲು ಸಾಧ್ಯವಿಲ್ಲವೆಂದೂ, ಹಾಗೆ ಮಾಡಲು ಯತ್ನಿಸಿದಲ್ಲಿ ಅನುಬಂಧವು ಅಸ್ವಾಭಾವಿಕವಾಗುವದೆಂದೂ ಶಿಕ್ಷಕರು ಮನಗಂಡರು. ಗಾಂಧೀಜಿಗೆ ಪ್ರಶ್ನೆ ಕೇಳಲಾಯಿತು. ಆಗ ಅವರು– "ಉದ್ಯೋಗದ ಜೊತೆಗೆ ಸಂಬಂಧೀಕರಣ ಮಾಡಲು ಯಾವುದೊಂದು ಸಂಗತಿ ತಡೆಯುಹಾಕಿದರೆ; ಚಟಪಡಿಸಬೇಡಿರಿ, ಕುಗ್ಗಬೇಡಿರಿ; ಅಲ್ಲಿಯೇ ಅದನ್ನು ಸಿಲ್ಲಿಸಿ, ಸಂಬಂಧೀಕರಣ ಮಾಡಬಲ್ಲ ವಿಷಯಗಳನ್ನು ಮುಂದೆ ಸಾಗಿಸಬೇಕು; ಮತ್ತೊಬ್ಬ ಶಿಕ್ಷಕನು ಆದರ ಬಗೆಗೆ ಯೋಗ್ಯ ಮಾರ್ಗವನ್ನು ಯೋಜಿಸಬಹುದು; ಆದನ್ನು ಸಂಬಂಧೀಕರಿಸುವ

ವಿಧಾನವನ್ನು ತೋರಿಸಬಹುದು; ಅನೇಕರ ಅನುಭವಗಳನ್ನು ಕಲೆ ಹಾಕಿದಾಗ, ನಿಮಗೆ ಪೂರ್ಣ ತೋರಿಸಲು ಹೊತ್ತಿಗೆಗಳು ದೊರೆಯುವವು. ಆದರಿಂದ ನಿಮ್ಮ ಅನುಯಾಯಿಗಳ ಕೆಲಸವು ಸುಗಮವಾಗುವದು" ಎಂದು ಸಮಾಧಾನಕರ ಉತ್ತರ ಕೊಟ್ಟರು. ಶಿಕ್ಷಕನು ಪ್ರಯತ್ನ ಶೀಲನಾಗಬೇಕು; ಅನುಬಂಧವು ಸ್ವಾಭಾವಿಕವಾಗಬೇಕು; ಈ ದಿಸೆಯಲ್ಲಿ ಅವಸರವು ತರವಲ್ಲ ಎಂಬ ಸಂಗತಿಗಳನ್ನು ನಾವು ಗಮನಿಸಬೇಕು.

## ಮೂರು ಕೇಂದ್ರಗಳು:

ಪೂನಾ ಸಮ್ಮೇಲನದಲ್ಲಿ ಅನುಬಂಧದ ಕೇಂದ್ರಗಳು ಮೂರು ಎಂದು ನಿರ್ಣಯಿಸಲಾಯಿತು. ಈಗ ಅನುಬಂಧದ ಕ್ಷೇತ್ರವು ವಿಸ್ತಾರವಾಯಿತು. ಮಗು ಮೂರು ಸನ್ನಿವೇಶಗಳಲ್ಲಿ ಬೆಳೆಯುವನು. ಒಂದೊಂದು ಸನ್ನಿವೇಶಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ಆರಿಸಬೇಕು. ಪ್ರತಿ ತಿಂಗಳು ಯಾವ ಯಾವ ಚಟುವಟಿಕೆಗಳನ್ನು ಮಾಡಿಸಬೇಕೆಂಬುದನ್ನು ಮೊದಲೇ ನಿರ್ಣಯಿಸಬೇಕು. ಆರ್ಥಿಕ, ನೈಸರ್ಗಿಕ, ಹಾಗು ಸಾಮಾಜಿಕ ಚಟುವಟಿಕೆಗಳಳನ್ನು ಒಂದು ವರ್ಷದಲ್ಲಿ ಎಷ್ಟು ಮಾಡಿಸಬಹುದೆಂದು ಅಂದಾಜು ಪತ್ರಿಕೆ ತಯಾರಿಸಬೇಕು. ಮಾಡಿಸತಕ್ಕ ಕೃತಿಗಳು ಹಾಗು ಜೋಡಣೆ ಯಾಗಬಹುದಾದ ಸಾಮಾನ್ಯ ವಿಷಯಗಳ ಜ್ಞಾನ ಇವೆರಡರ ಬಗೆಗೆ ಮೊದಲೇ ಯೋಚಿಸಬೇಕು; ಎಂದರೆ ಅನುಬಂಧ ಪದ್ಧತಿಯನ್ನು ಯಶಸ್ವಿಯಾಗಿ ಉಪಯೋಗಿಸಲು ಸಾಧ್ಯ.

## ಅನುಬಂಧ ಪದ್ಧತಿಯ ಬಗೆಗೆ ಚರ್ಚೆ ಏಕೆ?

ಯಾವುದೊಂದು ಚಟುವಟಿಕೆಯನ್ನು ಶಾಸ್ತ್ರಬದ್ಧವಾಗಿ ಮಾಡಿದರೆ, ಆ ಕೃತಿಗೆ ಸಂಬಂಧಿಸಿದ ಜ್ಞಾನವು ತಾನಾಗಿಯೇ ಮಕ್ಕಳಿಗೆ ದೊರೆಯುವದು; ಕೃತಿಯು ಶಾಸ್ತ್ರಬದ್ಧವಾಗಿದ್ದರೆ ತೀರಿತು. ಅನುಬಂಧ ಪದ್ಧತಿಯ ಬಗೆಗೆ ಇಷ್ಟೊಂದು ಚರ್ಚೆ ಯಾಕೆಬೇಕು ಎಂದು ಭರತಾನಂದಜಿ ಅವರು ಕೇಳಿದರು. ಒಂದು ಉದ್ಯೋಗವನ್ನು ಮಾಡುವಾಗ, ಬಾಲಕನು ತನಗೆ ಉಂಟಾದ ಸಮಸ್ಯೆಗಳ ಪರಿಹಾರಕ್ಕಾಗಿ ಕೆಲವು ಪ್ರಶ್ನೆಗಳನ್ನು ಕೇಳುವನು;

ಉತ್ತರ ರೂಪವಾಗಿ ದೊರೆತದೇ ಅನುಬಂಧಿತ ಜ್ಞಾನವೆಂದು ಹೇಳ ಬಹುದು. ಹೀಗೆ ಬಾಲಕರಿಗೆ ಪ್ರಶ್ನೆ ಕೇಳಲು ಉತ್ತೇಜನ ಕೊಡಬೇಕು. ಪ್ರಶ್ನೋತ್ತರಗಳನ್ನು ಕಲಿ ಹಾಕಿ ಸಾಮಾನ್ಯ ಜ್ಞಾನವನ್ನು ಹೆಚ್ಚಿಯ ಬಹುದು. ಈ ಕಾರಣಗಳ ಮೂಲಕ ಅನುಬಂಧ ಪದ್ಧತಿಯು ಬಗೆಗೆ ವಿಶೇಷ ಚರ್ಚೆಯೇ ಅಗತ್ಯವಿಲ್ಲವೆಂದು **ಭರತಾನಂದಜಿ** ಹೇಳಿವರು. **ಶ್ರೀ. ಕಾಕಾ ಕಾಲೇಕರ** ಅವರ ಉತ್ತರವು ಸೂಕ್ತವೂ, ಸಮರ್ಪಕವೂ ಆಗಿದೆ. ''ಮೂಲ ಉದ್ಯೋಗಗಳ ಮುಖಾಂತರ ಎಲ್ಲ ವಿಷಯಗಳ ಜ್ಞಾನ ಮಾಡಿ ಕೊಡುವದು ಮುಖ್ಯ ಉದ್ದೇಶವು; ಅದರಿಂದ ಜ್ಞಾನವು ಜೀವನ ಸಾಮಿಪ್ಯಕ್ಕೆ ಬರುವದು. ಸಶಾಸ್ತ್ರವಾಗಿ ಹಾಗು ಪೂರ್ತಿಯಾಗಿ ಕೊಡುವ ಉದ್ಯಮ ಶಿಕ್ಷಣವು ಮಾತ್ರ ಮುಖ್ಯ ಉದ್ದೇಶವಲ್ಲ. ಮೂಲ ಶಿಕ್ಷಣವು ಸದ್ಯದ ಹಳ್ಳಿಯ ಸಾಲೆಯನ್ನು ಪರಿವರ್ತಿಸುವದು; ಅಷ್ಟೇ ಅಲ್ಲ. ಅದು ಉಚ್ಚ ಶಿಕ್ಷಣದ ತಳಹದಿಯಾಗಿ ನಿಲ್ಲುವದು ಎಂಬದನ್ನು ನಾವು ಲಕ್ಷ್ಯ ವಲ್ಲಿಡಬೇಕು.'' ಈ ಸಂದರ್ಭದಲ್ಲಿ ಜನಾಬ **ಕೆ. ಜಿ. ಸೈಯದೈನ** ಅವರು

'' ಮೂಲ ಉದ್ಯೋಗಕ್ಕೆ ವಿಶೇಷ ಗಮನ ಕೊಟ್ಟು; ಇತರ ಮಹ ತ್ವದ ಸಂಗತಿಗಳನ್ನು ಅಲಕ್ಷಿಸಿದರೆ ವರ್ಧಾ ಶಿಕ್ಷಣವು ತ್ಯಾಜ್ಯ ವಾಗುವ ದೆಂದು ನನಗೆ ಅನಿಸುವದು. ಮೂಲ ಉದ್ಯೋಗವು ಮಗುವಿನ ವ್ಯಕ್ತಿತ್ವ ನನ್ನು ವಿಕಸಿಸುವ ಶಿಕ್ಷಣದ ಮಾಧ್ಯಮವೆಂದು ತಿಳಿಯುವುದೇ ಅತ್ಯಂತ ಉಪಯುಕ್ತ ಮಾರ್ಗವು. ಯಾವ ಜ್ಞಾನವನ್ನು ಪೋಷಿಸುವನೆಂಬದನ್ನು ಶಿಕ್ಷಕರು ವಿಚಾರಿಸಬೇಕು. ಮಗುವನ್ನು ಉದ್ಯೋಗಸ್ಥ( Crafts man ) ನನ್ನಾಗಿ ಮಾಡಿದನೆಂದು ಶಿಕ್ಷಕನು ತೃಪ್ತಿ ಹೊಂದಕೂಡದು. ತನ್ನ ದೇಶದ ಹಾಗು ಜಗತ್ತಿನ ಉತ್ತಮ ನಾಗರಿಕನಾಗಿಯೂ, ಸ್ವರ್ಗರಾಜ್ಯವನ್ನು ಸೇರಲು ಅರ್ಹನಾಗಿಯೂ ಮಗುವನ್ನು ಬೆಳೆಯಿಸಬೇಕು, ಎಂದು ಹೇಳ ವರು.

## ಚಟುವಟಿಕೆಯು ಸಾಧನವೋ, ಗುರಿಯೋ ?

ಮೇಲಿನ ಮಾತುಗಳು ಒಂದು ಸಮಸ್ಯೆಗೆ ನಮ್ಮನ್ನು ಒಯ್ಯುವವು. ಮೂಲ ಶಿಕ್ಷಣ ಯೋಜನೆಯಲ್ಲಿ ಜೀವನೋಪಯೋಗಿ ಚಟುವಟಿಕೆಗಳಿಗೆ

ಮಹತ್ವದ ಸ್ಥಾನವಿದೆ. ಆದರೆ ಚಟುವಟಿಕೆಯು ಸಾಧನವೋ, ಗುರಿಯೋ ಎಂಬುದನ್ನು ಸ್ವಲ್ಪ ವಿಚಾರಿಸಬೇಕು. ಚಟುವಟಿಕೆಯು ಶಿಕ್ಷಣದ ಸಾಧನ ( Means ) ಎಂದು ಆಚಾರ್ಯ ಕಾಲೇಲಕರ ಹಾಗು ಜನಾಬ ಸೈಯಾದೈನ ಅವರು ಪ್ರತಿಪಾದಿಸಿರುವರು. ಇದಕ್ಕೆ ಮೇಲಿನ ಅವರ ಮಾತುಗಳೇ ಸಾಕ್ಷಿ. " ಒಂದು ಉದ್ಯೋಗವನ್ನು ಕಲಿಸು. ಆ ಉದ್ಯೋಗಕ್ಕೆ ಸಂಬಂಧಿಸಿದ ಹಾಗು ಅದರ ಮುಖಾಂತರ ಒದಗಿಸಲರ್ಹವಾದುದನ್ನು ಕಲಿಸು ಎಂದು ಮೂಲ ಶಿಕ್ಷಣ ಯೋಜನೆಯು ಹೇಳುವದು" ಎಂದು ಶ್ರೀ. ತ್ರಿವೇದಿ ಅವರು ಭರತಾನಂದಜಿ ಅವರ ಮಾತಿಗೆ ಉತ್ತರ ರೂಪವಾಗಿ ಹೇಳಿದರು. ಚಟುವಟಿಕೆಯು ಬೆಳವಣಿಗೆಗೆ ಪೋಷಕವು. ಇದರಿಂದ ಚಟುವಟಿಕೆಯು ಸಾಧನವು, ಮಗುವಿನ ಬೆಳವಣಿಗೆಯು ಗುರಿ ಎಂಬುದು ಸಿದ್ಧ. ಚಟುವಟಿಕೆಯೇ ಮೂಲ ಶಿಕ್ಷಣದ ಗುರಿ; ಕೆಲಸವೇ ಶಿಕ್ಷಣವು ಎಂಬುದು ಮೂಲ ಶಿಕ್ಷಣ ಪುರಸ್ಕರ್ತರ ತೀರ ನವೀನ ವಿಚಾರವೆಂದು ಕೆಲವರು ಪ್ರತಿಪಾದಿಸುವರು. " ಚಟುವಟಿಕೆಯು ಸಾಧನವೂ ಆಹುದು, ಗುರಿಯೂ ಆಹುದು" ಎಂದು ಆಚಾರ್ಯ ಕೃಪಲಾನಿಯವರು ಹೇಳಿರುವರು. ಆದರೆ ಈ ಮಾತಿನ ಅರ್ಥವನ್ನು ಸರಿಯಾಗಿ ಮಾಡಿಕೊಳ್ಳಬೇಕು, ಅಷ್ಟೆ. ಚಟುವಟಿಕೆ ನಿರ್ವಹಿಸುವಲ್ಲಿ ಮಗುವು ತಲ್ಲೀನನಾಗುವನು. ಅದು ಉತ್ತಮವಾಗಬೇಕೆಂಬುದು ಅವನ ಮನೀಷೆ. ಉತ್ತಮ ರೀತಿಯಿಂದ ಚಟುವಟಿಕೆಯನ್ನು ಪೂರ್ತಿಗೊಳಿಸುವದು ಮಗುವಿನ ಹಿರಿ ಗುರಿ. ಯಾವ ವಿಷಯಗಳು ಸೇರುವವೆಂಬುದು ಅವನ ದೃಷ್ಟಿಗೆ ಬೀಳಲಿಕ್ಕಿಲ್ಲ. ಆದರೆ ಚಟುವಟಿಕೆಗಳನ್ನು ಮಾಡಿಸುವದಷ್ಟೇ ಶಿಕ್ಷಕನ ಹೊಣೆಯಲ್ಲ; ಪ್ರಾಸಂಗಿಕ ಜ್ಞಾನವನ್ನು ಒದಗಿಸಿ ಕೊಡುವದೂ ಅವನ ಹೊಣೆ. ಶಿಕ್ಷಕನ ದೃಷ್ಟಿಯಿಂದ ಚಟುವಟಿಕೆಯು ಸಾಧನವು; ಮಗುವಿನ ದೃಷ್ಟಿಯಿಂದ ಅದು ಗುರಿ.

**ಅನುಬಂಧವೋ ಕ್ರಿಡೆಯೋ ?**

ನಾಳಿನ ಸಾಲೆಗಳಲ್ಲಿಯ ವಿವಿಧ ಚಟುವಟಿಕೆಗಳನ್ನು ಪರಿಚಯ ಮಾಡಿ ಕೊಡಲಾಯಿತು. ಈ ವರೆಗೆ ಪಠ್ಯೇತರ ( Extra circular) ಚಟುವಟಿಕೆಗಳೆಂದು ಗಣ್ಯವಾದವುಗಳೆಲ್ಲ ಈಗ ಶಿಕ್ಷಣದ ಆವಶ್ಯಕ ಸಾಮಗ್ರಿಗಳಾಗಿವೆ. ಔದ್ಯೋಗಿಕ, ನೈಸರ್ಗಿಕ ಹಾಗು ಸಾಮಾಜಿಕ

ವಾತಾವರಣಗಳಲ್ಲಿಯ ಮಕ್ಕಳ ಚಟುವಟಿಕೆಗಳು ಶಿಕ್ಷಣದ ವಸ್ತುಗಳಾಗಿವೆ. ಮಗುವಿನ ಇಂದಿನ ಜೀವನಕ್ಕೆ ಪೋಷಕವಾಗುವ, ಮುಂದಿನ ಜೀವನಕ್ಕೆ ಉಪಯುಕ್ತವಾಗುವ ಚಟುವಟಿಕೆಗಳೇ ಜ್ಞಾನವಾಹಕಗಳು. ಈ ಚಟುವಟಿಕೆಗಳ ಮುಖ್ಯ ಲಕ್ಷಣಗಳೆಂದರೆ ಆತ್ಮ ಪ್ರೇರಣೆ, ಆತ್ಮಾನುಭವ, ಆನಂದ. ಈ ತತ್ವಗಳು ಕ್ರೀಡಾ ಪದ್ಧತಿಯಲ್ಲಿಯೂ ಅವೆ. ಯಾವುದೊಂದು ಕ್ರೀಡೆ ( ಆಟ ) ಯು ಮುಖಾಂತರ ವಿದ್ಯಾಭ್ಯಾಸ ಮಾಡಿಸುವದು. ಕ್ರೀಡಾ ಪದ್ಧತಿಯೆಂದು ಸಾಮಾನ್ಯವಾಗಿ ಅರ್ಥ ಮಾಡಿಕೊಳ್ಳಬಹುದು. ಮಕ್ಕಳ ಆಟಗಳು ಶಿಕ್ಷಣದ ಸಾಧನಗಳೆಂಬುದೇನೊ ನಿಜ; ಆದರೆ ಶಿಕ್ಷಣದ ಎಲ್ಲ ಕಾರ್ಯಗಳು ಆಟಗಳ ಮುಖಾಂತರವೇ ನಡೆಯಬೇಕೆಬುದಲ್ಲ. ಆಟದ ಬಯಲು ಸ್ವಚ್ಛ ಮಾಡಿ ಅಳತೆ ಮಾಡಿ, ಗೆರೆಗಳನ್ನು ಹಾಕಿ ಸಿದ್ಧ ಮಾಡುವಷ್ಟರಲ್ಲಿ ಮಕ್ಕಳಿಗೆ ಎಷ್ಟೋ ಸಂಗತಿಗಳ ಜ್ಞಾನವಾಗುವದು. ಅಲ್ಲದೆ ಆಟಗಳಲ್ಲಿ ಅನೇಕ ಪ್ರಕಾರಗಳಿವೆ. ಮುಟ್ಟಾಟಗಳು, ಅನುಕರಣ ಆಟಗಳು, ಸ್ವಚ್ಛಂದ ಆಟಗಳು, ಕಥೆಯ ಆಟಗಳು,ಚಿಕ್ಕ ಬಯಲಲ್ಲಿ ಆಡುವ ಆಟಗಳು, ದೊಡ್ಡ ಬಯಲು ಬೇಕಾಗುವ ಆಟಗಳು, ಉಪಕರಣಗಳು ಬೇಕಾಗುವ ಆಟಗಳು, ಉಪಕರಣವಿಲ್ಲದ ಆಟಗಳು, ದೇಶೀ ಆಟಗಳು, ವಿದೇಶೀ ಆಟಗಳು ಹೀಗೆ ಅನೇಕ ಪ್ರಕಾರಗಳ ಆಟಗಳುಂಟು. ಆಟಗಳನ್ನು ಸುವ್ಯವಸ್ಥಿತ ರೀತಿಯಿಂದ ಆಡಿಸಬೇಕಾದರೆ ವಿವಿಧ ಯೋಜನೆಗಳನ್ನು ಕೈಕೊಳ್ಳಬೇಕಾಗುವದು. ಹೀಗೆ ಮಾಡಿದರೆ ಆಟವು ಪಾಠವಾಗುವದು. ಅಲ್ಲದೆ ಆಟಗಳ ಮುಖಾಂತರ ಮಕ್ಕಳ ಶರೀರ-ಬುದ್ಧಿ-ನೀತಿ ಇವು ಮಾರ್ಪಾಟ ಹೊಂದುವವು: ಆದರೆ ಪಾಠವೂ ಆಟವಾಗಬೇಕೆಂಬುದು ಕ್ರೀಡಾ ಪದ್ಧತಿಯ ಮುಖ್ಯ ಲಕ್ಷಣವು. ಪಾಠವು ಆಟವಾಗಬೇಕಾದರೆ, ಸ್ವಯಂಪ್ರೇರಣೆ, ಸ್ವಾನುಭವ, ಕ್ರಿಯಾತ್ಮಕ ಆನಂದ ಇವು ಅದರ ಮುಖ್ಯ ಲಕ್ಷಣಗಳು. ಇದಕ್ಕೆ ಕ್ರೀಡನಾ ಭಾವ (Play spirit) ಎಂದು ಹೇಳಬಹುದು. ಚಟುವಟಿಕೆಯ ಪಾಠದಲ್ಲಿ ಈ ಲಕ್ಷಣಗಳು ಒಡ ಮೂಡುವವು. ಮಕ್ಕಳು ಕೆಲಸ ಮಾಡುವರೋ, ಆಟ ಆಡುವರೋ, ಪಾಠ ಕಲಿಯುವರೋ ಎಂದು ಕೇಳಿದರೆ ಮೂಲ ಶಿಕ್ಷಣ ಸಾಲೆಗಳಲ್ಲಿ ಇವೆಲ್ಲವೂ ಒಂದೇ ಎಂದು ಹೇಳಬಹುದು. ಕೆಲಸವು ಆಟವಾಗಬಹುದು; ಆಟವು ಕೆಲಸವಾಗಬಹುದು ಎಂದು ಆಧುನಿಕ

ಮನಶ್ಶಾಸ್ತ್ರಜ್ಞರು ವಿಶದೀಕರಿಸಿದ್ದಾರೆ. ಕೆಲಸವೂ ಆಟವಾಗುವ ಸನ್ನಿವೇಶವು ಅನುಬಂಧ ಪದ್ಧತಿಯ ಹಿನ್ನೆಲೆಯಾಗಿದೆ. ಆಧುನಿಕ ಪದ್ಧತಿಗಳಿಗೆ ಚಟುವಟಿಕೆಗಳೇ ಆಧಾರಗಳು, ಅವು ಚಲಿಸುವ ಸ್ವರೂಪವೇ ಕ್ರೀಡೆ, ಮಕ್ಕಳಲ್ಲಿ ಉಂಟಾಗುವ ಕ್ರೀಡನ ಭಾವ. ಮಗುವಿನ ಮನೋವಿಜ್ಞಾನಕ್ಕೆ ಹೊಂದಿಕೆಯಾಗುವ ಯಾವುದೊಂದು ಪದ್ಧತಿಗೆ ಕ್ರೀಡನ ಭಾವವೇ ಮೂಲ ಸೂತ್ರವು. ಆದರಿಂದ ಹೊಸ ಪದ್ಧತಿಗಳೆಲ್ಲ ಕ್ರೀಡಾ ಪದ್ಧತಿಗಳೇ ಎಂದು ರಾಸ್ಸ್ ಮತ್ತು ನನ್ ಆವರು ಅಭಿಪ್ರಾಯಪಟ್ಟಿರುವರು. ಕ್ರೀಡಾಪದ್ಧತಿಯು ವಿಶಿಷ್ಟ ಪದ್ಧತಿಯಲ್ಲ, ಕ್ರಿಡನ ಭಾವವುಳ್ಳ ಪದ್ಧತಿಯು. ಈ ದೃಷ್ಟಿಯಿಂದ ಅನುಬಂಧ ಪದ್ಧತಿಯೂ ಕ್ರೀಡಾಪದ್ಧತಿಯೇ? ಆದರೆ ಉತ್ಪಾದಕ ಉದ್ಯಮಕ್ಕೆ ಅನುಬಂಧಿಸಬೇಕೆಂಬುದು ಮೂಲ ಶಿಕ್ಷಣದ ವೈಶಿಷ್ಟ್ಯವು. ಇದುವರೆಗೆ ಕ್ರೀಡಾ ಎನಿಸಿಕೊಂಡ ಯಾವ ಪದ್ಧತಿಯಲ್ಲಿಯೂ ಈ ಅಂಶವಿಲ್ಲ.

**ಅನುಬಂಧ ಪದ್ಧತಿ ಮತ್ತು ಅಭ್ಯಾಸ ಪತ್ರಿಕೆ:**

ಮೂಲ ಶಿಕ್ಷಣ ಯೋಜನೆಯಲ್ಲಿ ದುಡಿಯುವ ಶಿಕ್ಷಕರಿಗೆ ಅಭ್ಯಾಸ ಪತ್ರಿಕೆ ( Syllabus ) ಒಂದು ಎದೆಗಲ್ಲು. ಇತ್ತ ಮೂಲ ಉದ್ಯೋಗದ ಪ್ರಮಾಣ–ಪ್ರಗತಿಗಳು, ಅಂಕಗಣಿತ, ಭಾಷೆ, ಸಮಾಜ ವಿಜ್ಞಾನ ಇತ್ಯಾದಿ ವಿಷಯಗಳ ಮಟ್ಟ, ಇವುಗಳ ತಾಕಲಾಟದಲ್ಲಿ ಶಿಕ್ಷಕರು ನುಗ್ಗಾಗಿರುವರು, ಕೆಲವರಂತೂ ಉತ್ಸಾಹ ಕುಗ್ಗಿದವರಾಗಿರುವರು. ಇಂತಿಷ್ಟು ನೂಲು ತಯಾರಾಗಬೇಕು, ಇಂತಿಷ್ಟು ಬಟ್ಟೆ ತಯಾರಾಗಬೇಕು, ಇಂತಿಷ್ಟು ಪ್ರಗತಿ ಮುಟ್ಟಬೇಕು ಎಂಬುದನ್ನು ಏಕೆ ಹಾಕಿರುವರು? ಉದ್ಯೋಗದ ಕ್ರಿಯೆಗಳಲ್ಲಿ ಮಕ್ಕಳು ಪ್ರಗತಿ ಹೆಚ್ಚುಹೊಂದಲಿ, ಕ್ರಿಯೆಗಳನ್ನು ಪುನಃ ಪುನಃ ಮಾಡುವದರಿಂದ ಅವರ ಶಾಸ್ತ್ರೀಯ ದೃಷ್ಟಿ ವಿಕಾಸವಾಗಲಿ, ಬೇರೆಬೇರೆ ವಿಷಯಗಳ ಸಂಬಧೀಕರಣ ಮಾಡಲು ಹೆಚ್ಚು ಸಂಧಿ ಸಿಗಲಿ ಎಂಬ ವಿಚಾರಗಳು ಅಡಕವಾಗಿವೆ. ಶಿಕ್ಷಕರು ಇವುಗಳನ್ನು ಮರೆಯಕೂಡದು. ಮೂಲ ಉದ್ಯೋಗದಲ್ಲಿ ಪ್ರಗತಿಯನ್ನು ತೋರಿಸುವದಕ್ಕಾಗಲಿ, ಹೆಚ್ಚು ಉತ್ಪನ್ನ ತೋರಿಸುವ ಹವ್ಯಾಸದಿಂದಾಗಲಿ ಕೆಲಸಕ್ಕಾಗಿ ಕೆಲಸ ಮಾಡಿಸುವುದಕ್ಕೆ ಮನಸೋಲಬಾರದು. ಇದರಿಂದ ಶೈಕ್ಷಣಿಕ ಪ್ರಗತಿ ಕುಂಠಿತವಾಗುವದು. ಮೂಲ ಉದ್ಯೋಗಕ್ಕೆ ಹೆಚ್ಚು ಲಕ್ಷ್ಯ ಪೂರೈಸಿ, ಸಾಮಾನ್ಯ ವಿಷಯಗಳನ್ನು

ಅನುಬಂಧಿಸಲು ಕಡಮೆ ಮಾಡಿದರೆ, ಸಾಮಾನ್ಯ ವಿಷಯಗಳ ಪ್ರಗತಿ ಕುಂಠಿತವಾಗುವದು. ಹೀಗಾದಲ್ಲಿ ವಿಷಯ ಪದ್ಧತಿಯಿಂದ ಕೆಲ ವಿಷಯ ಗಳನ್ನು ಕಲಿಸಿ ಅಭ್ಯಾಸ ಪತ್ರಿಕೆಯನ್ನು ಪೂರ್ತಿ ಮಾಡಲು ಹವಣಿಸುವರು. ಆಗ ಅನುಬಂಧ ಪದ್ಧತಿಯು ಮೊತ್ತಿಗೆಯಲ್ಲಿ ಉಳಿಯುವದು. ಮುಖ್ಯವಾಗಿ ಶಿಕ್ಷಕರು ಲಕ್ಷಿಸಬೇಕಾದ ಸಂಗತಿಯೆಂದರೆ, ಅಭ್ಯಾಸ ಪತ್ರಿಕೆಯು ಬ್ರಹ್ಮ ಲಿಖಿತವಲ್ಲ. ತಮ್ಮ ಪರಿಸ್ಥಿತಿಗೆ ಹೊಂದಿಕೆಯಾಗುವಂತೆ ಶಿಕ್ಷಕರು ಮಾರ್ಪಡಿ ಸಿಕೊಳ್ಳಬೇಕು. ಆರಿಸಿಕೊಂಡ ಕೆಲ ಚಟುವಟಿಕೆಗಳು ಕೆಲ ಹಳ್ಳಿಗಳಿಗೆ ಯೋಗ್ಯವಾಗಲಿಕ್ಕಿಲ್ಲ; ಅಂಥವುಗಳನ್ನು ಸರಿಪಡಿಸಿಕೊಳ್ಳಬೇಕು. ಅಭ್ಯಾಸ ಪತ್ರಿಕೆಯಲ್ಲಿ ತೋರಿಸಿದಷ್ಟೇ ಕಲಿಸತಕ್ಕದ್ದೆಂದು ಶಿಕ್ಷಕರು ತಿಳಿಯಬಾರದು; ಹೆಚ್ಚಿನ ಸಂಗತಿಗಳನ್ನು ಸಮಾವೇಶ ಮಾಡಿಕೊಳ್ಳಬೇಕು. ಅನಿವಾರ್ಯವಾದಲ್ಲಿ ಕೆಲವು ವಿಷಯಗಳು ಕಡಿಮೆಯಾಗಿದ್ದರೂ ಅಪರಾಧವಲ್ಲ. ಶಿಕ್ಷಕರು ಪುನಃ ಪೂರ್ವಕ ದುಡಿದಿದ್ದರೆ ಸಾಕು. "ನಮ್ಮ ಅಭ್ಯಾಸ ಪತ್ರಿಕೆಯು ಇನ್ನೂ ಉತ್ಕ್ರಾಂತಿಯಲ್ಲಿದೆ" ಎಂದು **ಶ್ರೀಮತಿ ಆಶಾದೇವಿ** ಅವರು ಒಮ್ಮೆ ಹೇಳಿದರು. ಪ್ರಯೋಗದ ಫಲವಾಗಿ ಅಭ್ಯಾಸ ಪತ್ರಿಕೆಯು ಮಾರ್ಪಡುತ್ತ ಸಾಗುವದು. ಎಲ್ಲ ಕಾಲಕ್ಕೂ ಯೋಗ್ಯವಾಗುವ ಅಭ್ಯಾಸಪತ್ರಿಕೆಯನ್ನು ತಯಾರಿಸುವದು ಯಾರಿಗೂ ಸಾಧ್ಯವಿಲ್ಲ. ಆದ್ದರಿಂದ ಅಭ್ಯಾಸ ಪತ್ರಿಕೆಯು ಶಿಕ್ಷಕರಿಗೆ ಕೇವಲ ಮಾರ್ಗದರ್ಶಕವಾಗಿರುತ್ತದೆ.

**ಯಾವಾಗ ಅನುಬಂಧಿಸಬೇಕು?**

ಒಂದು ಚಟುವಟಿಕೆಯನ್ನು ಮಾಡುತ್ತಿರುವಾಗ ಇತರ ವಿಷಯಗಳ ಜ್ಞಾನವನ್ನು ಸಂಬಂಧೀಕರಿಸಬೇಕೋ ಅಥವಾ ಚಟುವಟಿಕೆ ಮುಗಿದ ವೇಳೆ ಅನುಬಂಧಿಸಬೇಕೋ ಎಂಬುದು ಒಂದು ಸಮಸ್ಯೆ. ಚಟುವಟಿಕೆ ಮಾಡುತ್ತಿರುವಾಗ ಬಾಲಕರಿಗೆ ಅವಶ್ಯಕ ಜ್ಞಾನವನ್ನು ವೈಯಕ್ತಿಕವಾಗಿ ಕೊಡಬೇಕು. ಚಟುವಟಿಕೆ ಮುಗಿದ ವೇಳೆ ಇಡೀ ವರ್ಗಕ್ಕೆ ಇತರ ವಿಷಯ ಗಳು ಹೇಗೆ ಸಂಬಂಧಿಸಿವೆ ಎಂಬುದನ್ನು ತೋರಿಸಬೇಕು. ಬಾಲಕರು ಒಳ್ಳೇ ಆಸ್ಥೆಯಿಂದ ಕೆಲಸ ಮಾಡುತ್ತಿರಬಹುದು; ಆದರೆ ಒಮ್ಮೊಮ್ಮೆ ಅವರು ಹೆಚ್ಚು ಚಿಕಿತ್ಸೆ ಮಾಡುವದಿಲ್ಲ. ಆದರಿಂದ ಇತರ ವಿಷಯಗಳನ್ನು ಅನುಬಂಧಿಸಲು ಶಿಕ್ಷಕರು ಪ್ರಸಂಗಗಳನ್ನು ಕಲ್ಪಿಸಿಕೊಳ್ಳಬೇಕು. 'ಯಾಕೆ, ಏನು, ಹೇಗೆ,

ಎಲ್ಲಿಂದ' ಮುಂತಾದ ಪ್ರಶ್ನೆಗಳನ್ನು ಹಾಕಿ, ಬಾಲಕರ ಕುತೂಹಲವನ್ನು ಕೆರಳಬೇಕು; ಅನುಬಂಧವು ತಾನೇ ಹೊರಹೊಮ್ಮುವದು.

**ಏನೇನು ಅನುಬಂಧಿಸಬೇಕು?**

ಒಂದು ಕೃತಿಗೆ ಸಂಬಂಧಿಸಿದ ಸಾಮಾನ್ಯ ವಿಷಯಗಳು ಬಾಲಕರ ವಯೋಮಾನ ಇಲ್ಲವೆ ಇಯತ್ತೆಗೆ ಅನುಗುಣವಾಗಿರಬೇಕು. ಹತ್ತಿ ಅರಿಯುವ ಕ್ರಿಯೆಯನ್ನು ಒಂದನೆಯ ವರ್ಗದ ಬಾಲಕರು ಮಾಡಬಹುದು, ಆರನೆಯ ವರ್ಗದ ಬಾಲಕರೂ ಮಾಡಬಹುದು. ಅವರವರ ಅಭ್ಯಾಸ ಪತ್ರಿಕೆಗೆ ಹೊಂದಿಕೆಯಾಗುವ ವಿಷಯಗಳನ್ನೇ ಸಂಬಂಧೀಕರಣ ಮಾಡಬೇಕು.

ಒಂದು ಕೃತಿಗೆ ಅನೇಕ ವಿಷಯಗಳನ್ನು ಸಂಬಧಿಸಲು ಹತ್ತಿಯ ಕಸರನ್ನು ತೆಗೆಯುವಾಗ ಸಾಮಾನ್ಯ ವಿಜ್ಞಾನ, ಗಣಿತ ಭಾಷೆ, ಚಿತ್ರಕಲೆ, ಹಾಡು ಮುಂತಾದ ವಿಷಯಗಳನ್ನು ಸಂಬಂಧೀಕರಣ ಮಾಡಬಹುದು; ಆದರೆ ಒಂದೇ ಪಾಠದಲ್ಲಿ ಅನೇಕ ವಿಷಯಗಳನ್ನು ಜೋಡಿಸುವದು ಯೋಗ್ಯವಲ್ಲ. ಆ ಕೃತಿಗೆ ಆ ಪ್ರಸಂಗದಲ್ಲಿ ಸ್ವಾಭಾವಿಕವಾಗಿ ಅನುಬಂಧಿತವಾಗುವ ಒಂದು ವಿಷಯವನ್ನು ಇಲ್ಲವೆ ಎರಡು ವಿಷಯಗಳನ್ನು ಜೋಡಿಸಲಿಕ್ಕೆ ಪ್ರಯತ್ನಿಸಬೇಕು. ಅದೇ ಕೃತಿಯನ್ನು ಮತ್ತೆ ಮಾಡುವ ಪ್ರಸಂಗ ಬಂದಾಗ ಬೇರೆ ವಿಷಗಯಳನ್ನು ಅನುಬಂಧಿಸುವದು ಒಳ್ಳೆಯದು.

ಅಭ್ಯಾಸ ಪತ್ರಿಕೆಯಲ್ಲಿ ತೋರಿಸಿದ ಯಾವದಾದರೂ ವಿಷಯವು ಯಾವದೊಂದು ಚಟುವಟಿಕೆಗೆ ಹೊಂದಿಕೆಯಾಗದಿದ್ದರೆ, ಅಂಥ ವಿಷಯವನ್ನು ಬಿಟ್ಟುಬಿಡಬಹುದು. ಆ ವಿಷಯವನ್ನು ಕಲಿಸುವ ಅಗತ್ಯವೆನಿಸಿದಲ್ಲಿ, ಅದನ್ನು ಸಾಮಾನ್ಯ ಪದ್ಧತಿಯಿಂದ ಕಲಿಸಬೇಕು. ಒತ್ತಾಯದ ಅನುಬಂಧವು ಪ್ರಯೋಜನವಿಲ್ಲ.

ಇಂದು ಆರಿಸಿಕೊಂಡ ಕೆಲವು ಚಟುವಟಿಕೆಗಳ ಮುಂಖಾಂತರ ಕೆಲವೊಂದು ಗಣಿತ, ಸಾಮಾನ್ಯವಿಜ್ಞಾನ ವಿಷಯಗಳನ್ನು ಕಲಿಸಿದ್ದೇವೆಂದು ತಿಳಿಯುವಾ. ನಾಳಿನ ಚಟುವಟಿಕೆಗಳಲ್ಲಿ ಅವೇ ವಿಷಯಗಳನ್ನು ದೃಢೀಕರಿಸಲು ಇಲ್ಲವೆ ಮುಂದುವರಿಸಲು ಅವಕಾಶವಿರಬೇಕು. ಕೆಲಸದ ಮುಖಾಂತರ ದೊರೆತ ಬೇರೆಬೇರೆ ವಿಷಯಗಳ ಜ್ಞಾನದ ತುಂಡುಗಳು ವ್ಯವಸ್ಥಿತ ಸ್ವರೂಪದಲ್ಲಿ ವಿಕಾಸವಾಗುವಂತಹ ಸನ್ನಿವೇಶಗಳು ಇರಬೇಕು.

ಚಟುವಟಿಕೆಗಳನ್ನು ಆರಿಸುವಾಗ ಈ ಸಂಗತಿಗೆ ಗಮನ ಕೊಡಬೇಕು. ಅನುಬಂಧ ತತ್ತ್ವವು ಉಪಯುಕ್ತವೂ, ಪರಿಣಾಮಕಾರಿಯೂ ಆಗುವದು.

## ಹೇಗೆ ಅನುಬಂಧಿಸಬಾರದು?

**ಆರ್ಥಿಕ ಪರಿಸ್ಥಿತಿ:**

(೧) ನೂಲುವ ಚಟುವಟಿಕೆಯನ್ನು ಮಾಡಿಸುವದು; ಅದಕ್ಕೆ ಹತ್ತಿದ ಸಮಯ ಕೇಳಿಕೊಳ್ಳುವದು. ನಂತರ 'ಟಾಯಂಪೀಸ' ತೋರಿಸವದು ಅದು ಟಿಕ್‌ಟಿಕ್ ಎಂದು ಸಪ್ಪಳ ಮಾಡುವದು. ಇಲಿಯು ಟಿಕ್‌ಟಿಕ್ ಸಪ್ಪಳ ಮಾಡಿ ಒಂದು ವಸ್ತುವನ್ನು ಕಡಿಯುವದು; ಹೀಗೆ ಜೋಡಿಸಿ ಇಲಿಯ ಬಗ್ಗೆ ಕವನವನ್ನು ಕಲಿಸುವದು.

(೨) ಹತ್ತಿ ಸ್ವಚ್ಛ ಮಾಡಿಸುವದು. ಹತ್ತಿಯ ಗಿಡದ ಚಿತ್ರ ತೋರಿಸುವದು. ಚಿತ್ರದಲ್ಲಿಯ ಹತ್ತಿಯ ಗಿಡದ ಮೇಲೆ ಇಣಚಿಯನ್ನು ತೋರಿಸಿ, ಇಣಚಿಯ ಪಾಠ ಕಲಿಸುವದು.

(೩) ಹತ್ತಿ ಆರಿಯುವದು. ಕಾಳುಗಳನ್ನು ಎಮ್ಮೆಗಳು ತಿನುತ್ತವೆ ಎಂದು ಹೇಳಿ ಎಮ್ಮೆಯ ಪಾಠ ಕಲಿಸುವದು.

(೪) ನೂಲುವ ಚಟುವಟಿಕೆ ಮಾಡುವದು. ನೂಲಿನಿಂದ ಹಗ್ಗ ಮಾಡುವರು. ಹಗ್ಗದಿಂದ ಕುಮರಿಯ ಮಕಾಡ ಮಾಡುವರು ಎಂದು ಹೇಳಿ ಕುಮರಿಯ ಪಾಠ ಓದುವದು.

(೫) ರಟ್ಟಿನ ಇಲ್ಲವೆ ಕಡ್ಡಿ ಪೆಟ್ಟಿಗೆಯ ಉಗಿಬಂಡಿ ಮಾಡಿಸಿ, ಉಗಿ ಬಂಡಿಯ ಶೋಧಕನ ಚರಿತ್ರೆ ಹೇಳುವದು; ಮುಂಬಯಿ ಇಲಾಖೆಯಲ್ಲಿಯ ರೇಲ್ವೆಗಳ ಬಗ್ಗೆ ಹೇಳುವದು.

**ನೈಸರ್ಗಿಕ ಪರಿಸ್ಥಿತಿ:**

(೧) ಮಡಿಗಳಿಗೆ ಬೊಗಸೆಯಿಂದ ನೀರು ಉಣಿಸಿ, ನೀರಾವರಿ ಯೋಜನೆ ಕಲಿಸುವದು.

(೨) ಕಿಲ್ಲೆಯ ನಿರೀಕ್ಷಣೆ ಮಾಡಿಸಿ, ಬೇಕಾದ ಐತಿಹಾಸಿಕ ಪುರುಷರ ಕಥೆ ಹೇಳುವದು.

(೩) ಜೋಳದ ಬೆಳೆ ನಿರೀಕ್ಷಣೆ ಮಾಡಿಸಿ, ಚಟಾಕಿನಿಂದ ಚಿಟ್ಟಿಯವರಗೆ ಮಾಪಿನ ಕೋಷ್ಟಕ ಕಲಿಸುವದು.

(೪) ಹಳ್ಳದ ನಿರೀಕ್ಷಣೆ ಮಾಡಿಸಿ, ಹಳ್ಳಗಳು ಹೊಳೆಗೆ ಕೂಡುವವು, ಹೊಳೆಗಳು ಸಾಗರಕ್ಕೆ ಕೂಡುವವು, ಅಲ್ಲಿ ಉಪ್ಪಿನ ಮಾಳಗಳು ಇರುತ್ತವೆ ಎಂದು ಹೇಳಿ ಉಪ್ಪಿನ ಮಾಳಗಳ ಬಗ್ಗೆ ಪಾಠ ಕಲಿಸುವದು.

**ಸಾಮಾಜಿಕ ಪರಿಸ್ಥಿತಿ:**

(೧) ಕಾರಹುಣ್ಣಿಮೆಯ ದಿನಾಚರಣೆ ಮಾಡುವದು. ಎಣ್ಣೆಯಲ್ಲಿ ಕರದ ಸಾಮಾನುಗಳನ್ನು ತಿನ್ನುವ ಬಗ್ಗೆ ಹೇಳಿ, ಪಾಚಕಾವಯಗಳ ಬಗ್ಗೆ ತಿಳಿಸಿಕೊಡುವದು.

(೨) ನಾಗರ ಪಂಚಮಿಯ ದಿನ ಮಣ್ಣಿನ ನಾಗಪ್ಪನನ್ನು ಮಾಡಿ, ಹಾವುಗಳ ಪ್ರಕಾರಗಳನ್ನು ಹೇಳುವದು.

(೩) ಬಟ್ಟೆ ಒಗೆಯುವ ಚಟುವಟಿಕೆ ಮಾಡಿ, ಕತ್ತೆಯ ಪಾಠ ಕಲಿಸುವದು.

(೪) ಗಣೇಶನ ನಿರೀಕ್ಷಣೆ ಮಾಡಿಸಿ, ಆನೆಯ ಪಾಠ ಕಲಿಸುವದು.

(೫) ಬೆಂಕಿ ಹೊತ್ತಿಸುವ ಚಟುವಟಿಕೆ ಮಾಡಿಸಿ, ಲಂಕಾದಹನ ಕಥೆ ಹೇಳುವದು.

**ಅನುಬಂಧ ಪದ್ಧತಿಯಲ್ಲಿ ಯಶಸ್ಸು:**

(೧) ಅನುಬಂಧ ಪದ್ಧತಿಯನ್ನು ಯಶಸ್ವಿಯಾಗಿ ಮಾಡಬೇಕಾದರೆ, ಆ ಕ್ರಮದಲ್ಲಿ ಶಿಕ್ಷಕರು ಶ್ರದ್ಧೆಯಿಡಬೇಕು; ಅದನ್ನು ಪ್ರಯೋಗಿಸಬೇಕು. ಕೃತಿಮೂಲ ಪದ್ಧತಿಗೂ ಪ್ರಚಲಿತ ಪದ್ಧತಿಗೂ ಇರುವ ಕೆಳಗಿನ ವ್ಯತ್ಯಾಸಗಳನ್ನು **ಪ್ರೀ. ಎಲ್. ಆರ್. ದೇಸಾಯಿ** ಅವರು ಒಳ್ಳೇ ಮಾರ್ಮಿಕವಾಗಿ ತೋರಿಸಿದ್ದಾರೆ.

| ಕೃತಿಮೂಲ ಪದ್ಧತಿ | ಪ್ರಚಲಿತ ಪದ್ಧತಿ |
| --- | --- |
| ಮನಶ್ಶಾಸ್ತ್ರಾನುಗಾಮಿ | ವಿಷಯಗಳ ತಾರ್ಕಿಕ ಕ್ರಮ ಅನುಸರಿಸಿದುದು |
| ಸ್ವಾಭಾವಿಕವಾದುದು | ಕೃತ್ರಿಮ ಕ್ರಮದಲ್ಲಿ ಹೆಣೆದುದು |
| ಕೃತಿಕೇಂದ್ರವಾದುದು | ವಿಷಯಗಳ ವಿಷಯ ವಿಭಾಗವಾದುದು |
| ಸ್ವೇಚ್ಛೆಯಾಗಿ ಸಾಗುವಂತಹದು | ವರ್ಗದ ಕೋಣೆಯಲ್ಲಿಯೇ ನಡೆಯತಕ್ಕದ್ದು |
| ಪ್ರಸಂಗ-ಪರಿಸ್ಥಿತಿಗೆ ಹೊಂದಿಕೆಯಾದುದು | ವೇಳಾಪತ್ರಿಕೆಗೆ ಸಿಲುಕಿದ್ದು |

(೨) ಮೇಲೆ ಹೇಳಿದ ಸಂಗತಿಗಳನ್ನು ಶಿಕ್ಷಕರು ಮನನ ಮಾಡಿಕೊಂಡು ಹೊಸ ಪದ್ಧತಿಯನ್ನು ಅನುಸರಿಸಬೇಕು. (೩) ಒಂದೇ ಪಾಠದಲ್ಲಿ ಅನೇಕ ವಿಷಯಗಳನ್ನು ಸಂಬಂಧೀಕರಿಸಿ ಮಕ್ಕಳನ್ನು ಗೊಂದಲದಲ್ಲಿ ಹಾಕಬಾರದು. (೪) ಕೃತಿಗೆ ಸ್ವಾಭಾವಿಕವಾಗಿ ಯಾವ ವಿಷಯಗಳು ಸಂಬಂಧೀಕರಣವಾಗಬಲ್ಲವೋ ಅಷ್ಟೇ ವಿಷಯಗಳನ್ನು ಸಾಗಿಸಬೇಕು. (೫) ಕೃತಿ ಮೂಲ ಪದ್ಧತಿಯನ್ನು ಬಳಸುವಾಗ, ಅಗತ್ಯಕಂಡಲ್ಲಿ, ವಿಷಯಾನುಬಂಧ ಪದ್ಧತಿಯನ್ನು ಅನುಸರಿಸಬಹುದು. (೬) ಕೃತಿಯು ಮಕ್ಕಳಿಂದಲೇ ಆರಿಸಿದ್ದು ಇರಬೇಕು; ಸ್ವಯಂ ಪ್ರೇರಣೆಯಿಂದ ಕೆಲಸ ಮಾಡುವಾಗ ಅವರ ಕುತೂಹಲವು ಅರಳುವದು, ಹೆಚ್ಚು ಜ್ಞಾನವು ಸ್ವಾಭಾವಿಕವಾಗಿ ಅನುಬಂಧಿತವಾಗುವದು. (೭) ಚಟುವಟಿಕೆಯು ಶಿಸ್ತಿನಿಂದ ಸಾಗಬೇಕು. ಮಕ್ಕಳಲ್ಲಿ ಶಿಸ್ತು ಸಂಘಟನೆಗಳು ನೆಲೆಗೊಳ್ಳುವಂತೆ ಚಟುವಟಿಕೆಗಳನ್ನು ವ್ಯವಸ್ಥಿತವಾಗಿ ನಡೆಯಿಸಬೇಕು. (೮) ಒಂದು ಕೃತಿಗೆ ಸಂಬಂಧಿಸಿದ ಸಾಮಾನ್ಯ ವಿಷಯಗಳ ಜ್ಞಾನವನ್ನು ದೃಢೀಕರಿಸುವಂತಹ ಕೃತಿಯು ಮುಂದಿನದು ಇರಬೇಕು. (೯) ಬೇರೆಬೇರೆ ವಿಷಯಗಳ ಜ್ಞಾನವನ್ನು ಕ್ರಮವಾಗಿ

ಮುಂದುವರಿಸಲು ಅನುಕೂಲವಾಗುವ ಚಟುವಟಿಕೆಗಳನ್ನು ಆರಿಸಿಕೊಳ್ಳಬೇಕು. ಹೀಗೆ ಮಾಡಿದಲ್ಲಿ ಕೃತಿ ಮೂಲ ಪದ್ಧತಿಯಿಂದ ದೊರೆತ ಜ್ಞಾನವು ಉಚ್ಚ ತರಗತಿಯ ಜ್ಞಾನದ ತಳಹದಿಯಾಗುವದು. (೧೦) ಸಾಮಾನ್ಯ ವಿಷಯಗಳ ಜ್ಞಾನ, ತನ್ನ ಸುತ್ತಲಿನ ಪರಿಸ್ಥಿತಿಯ ಪರಿಚಯ, ವ್ಯಾವಹಾರಿಕ ಅನುಭವ, ಕಲಿಸುವಿಕೆಯ ಕೈವಾಡ ಇವೆಲ್ಲವುಗಳನ್ನೂ ಚನ್ನಾಗಿ ಬಳಸಲು ಶಿಕ್ಷಕನು ಯತ್ನಿಸಬೇಕು. (೧೧) ಚಟುವಟಿಕೆಗೆ ಅವಶ್ಯವಿದ್ದ ಉಪಕರಣಗಳನ್ನು ಮೊದಲೇ ಸಂಗ್ರಹಿಸಿಕೊಳ್ಳಬೇಕು. (೧೨) ಚಟುವಟಿಕೆಗೆ ಎಷ್ಟು ವೇಳೆ ಹತ್ತಬಹುದೆಂದು ಮೊದಲೇ ಅಂದಾಜು ಮಾಡಿಕೊಳ್ಳಬೇಕು. ನಿರ್ದಿಷ್ಟ ವೇಳೆಯಲ್ಲಿ ಮುಗಿಯುವಂತೆ ಎಚ್ಚರಪಡಬೇಕು. ಸಾಧನಗಳು ಕಡಿಮೆಯಿದ್ದರೆ ಇಲ್ಲವೆ ಸಂಘಟನೆಯಲ್ಲಿ ದೋಷವಿದ್ದರೆ, ಚಟುವಟಿಕೆಗೆ ಹೆಚ್ಚು ವೇಳೆ ಹತ್ತುವದು. (೧೩) ನೈಸರ್ಗಿಕ ಪರಿಸ್ಥಿತಿಯಲ್ಲಿ ಆಕಸ್ಮಿಕ ಬದಲಾವಣೆಯುಂಟಾದರೆ, ಆ ಪ್ರಸಂಗಕ್ಕೆ ಹೊಂದಿಕೆಯಾಗುವ ಚಟುವಟಿಕೆಯನ್ನು ಶಿಕ್ಷಕರು ಆರಿಸಿಕೊಳ್ಳಬೇಕು. (೧೪) ಚಟುವಟಿಕೆಯಲ್ಲಿಯೇ ಶಿಕ್ಷಕರು ಹೆಚ್ಚು ವೇಳೆ ಕಳೆದರೆ, ಸಮನ್ವಿತ ಜ್ಞಾನ ಸಾಕಷ್ಟು ದೊರೆಯುವದಿಲ್ಲ. ಚಟುವಟಿಕೆಗೂ ಸಮನ್ವಿತ ಜ್ಞಾನಕ್ಕೂ ತಾಳಮೇಳವಾಗುವಂತೆ ಪಾಠಯೋಜನೆ ಇರಬೇಕು. (೧೫) ತನ್ನ ಅನುಭವಕ್ಕೂ ಇತರರ ಅನುಭವಕ್ಕೂ ಸರಿ ಹಚ್ಚಿ ಈ ಪದ್ಧತಿಯನ್ನು ಬಳಸಬೇಕು.

**ಅನುಬಂಧ ಪದ್ಧತಿಯಲ್ಲಿಯ ಲೋಪದೋಷಗಳು:**

ಅನುಬಂಧ ಪದ್ಧತಿಯು ದೋಷರಹಿತವಾದುದೆಂದು ಹೇಳಲಿಕ್ಕಾಗುವದಿಲ್ಲ. ಪ್ರತಿಯೊಂದು ಪದ್ಧತಿಯಲ್ಲಿ ಕೆಲವೊಂದು ಲೋಪದೋಷಗಳಿವೆ. ಅವುಗಳನ್ನು ಅರಿತು ಶಿಕ್ಷಕನು ಮುಂಜಾಗ್ರತೆ ವಹಿಸುವದು ಒಳಿತು.

[೧] ಸಾಮಾನ್ಯ ವಿಷಯಗಳು ಕ್ರಮಬದ್ಧವಾಗಿ ಕೃತಿ ಮೂಲಕ ಹೊರಹೊಮ್ಮುವದಿಲ್ಲ. ಬೇರೆಬೇರೆ ವಿಷಯಗಳ ಬಗೆಗೆ ಒಂದೊಂದು ಪ್ರಸಂಗದಲ್ಲಿ ತುಣುಕು ಸಂಗತಿಗಳ ಸಂಗ್ರಹವಾಗುವದು.

[೨] ಒಮ್ಮೆ ಕಲಿಸಿದ ಸಾಮಾನ್ಯ ವಿಷಯಗಳನ್ನು ದೃಢೀಕರಿಸಲು ಮುಂದಿನ ಚಟುವಟಿಕೆಗಳು ಸಹಾಯಕವಾಗಲಿಕ್ಕಿಲ್ಲ. ವಿಷಪತ್ರಿಕ

ಪದ್ಧತಿ [Formal method] ಯಿಂದ ರೂಢಿ ಪಾಠಗಳನ್ನು ಸಾಗಿಸ ಬೇಕಾಗುವದು.

[೩] ಮಕ್ಕಳು ಕಲಿತ ಸಾಮಾನ್ಯ ವಿಷಯಗಳ ಜ್ಞಾನದ ಮಟ್ಟ ವನ್ನು ಮೇಲಿಂದ ಮೇಲೆ ಪರೀಕ್ಷಿಸಬೇಕಾಗುವದು; ಎಂದರೆ ಅವುಗಳನ್ನು ಮುಂದುವರಿಸಲು ಅನುಕೂಲವಾಗುವದು.

[೪] ಭಾವಸಾಧರ ಕವಿತೆಗಳು, ಸಾಹಿತ್ಯದ ಮೇಲ್ಮಟ್ಟದ ಗದ್ಯ ಭಾಗಗಳು, ವ್ಯಾಕರಣದ ಲಕ್ಷಣಗಳು, ಕಾಲಾನುಕ್ರಮದಿಂದ ಸಾಗುವ ಇತಿಹಾಸ ಮುಂತಾದ ವಿಷಯಗಳನ್ನು ಅನುಬಂಧ ಪದ್ಧತಿಯಿಂದ ಕಲಿಸು ವದು ಸಾಧ್ಯವಾಗಲಿಕ್ಕಿಲ್ಲ. ಅಂಥವುಗಳನ್ನು ಸಾಮಾನ್ಯ ಪದ್ಧತಿಯಿಂದ ಕಲಿಸಬೇಕಾಗುವದೆಂದು ಶ್ರೀ. **ಸಿ. ಜಿ. ವಾರ್ಕ** ಅವರು ಸೂಚಿಸಿದ್ದಾರೆ.

[೫] ಅನುಬಂಧ ಪದ್ಧತಿಯು ಅಸ್ವಾಭಾವಿಕವಾಗುವಂತೆ ಬಳಸುವ ಸಂಭವವಿದೆ.

# ಭಾಗ ೩

# ಶಾಲಾ ಸಂವಿಧಾನ

## ೧. ಹೊಸ ಶಾಲೆ :

ಮೂಲ ಶಿಕ್ಷಣವು ಒತ್ತಾಯದ್ದಾಗಿಯೂ, ಸಾರ್ವತ್ರಿಕವಾಗಿಯೂ ಪುಕ್ಕಟೆಯಾಗಿಯೂ ಎಲ್ಲ ಮಕ್ಕಳಿಗೂ ದೊರೆಯುವದು. ಪ್ರತಿಯೊಂದು ಹಳ್ಳಿಗೂ ಒಂದು ಶಾಲೆ ಬೇಕು. ಈಗಿದ್ದ ಸಾಲೆಗಳಲ್ಲಿ ಸಾಕಷ್ಟು ಸ್ಥಳವು ಇಲ್ಲ. ಕೆಲವು ಗುಡಿಗಳಲ್ಲಿ ಸಾಲೆ ಹಾಕಿರುವರು. ಗುಡಿಗಳಲ್ಲಿ ಸಾಲೆ ಗಳನ್ನು ಹಾಕುವದು ಸರಿಯಲ್ಲ. ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿರುವಾಗ ಜನರು ಗುಡಿಗೆ ಬರುವರು; ಗಂಟೆ ಬಾರಿಸುವರು; ಅಲ್ಲಿ ಓಡಾಡುವರು. ಆದರಿಂದ ಮಕ್ಕಳ ಲಕ್ಷ್ಯ ಅಂಥವರ ಕಡೆಗೆ ಹರಿಯುವದು. ಕೆಲ ಸುಟ್ಟಿಗೆ ಅಭ್ಯಾಸಕ್ಕೆ ತಡೆಯುಂಟಾಗುವದು. ಅಲ್ಲದೆ ಗುಡಿಗಳಲ್ಲಿ ಶಾಲೆಯ ಉಪಕರಣಗಳನ್ನು ಇಟ್ಟುಕೊಳ್ಳುವದಕ್ಕೆ ತೊಂದರೆಯಾಗುವದು. ಪಟ ಗಳನ್ನು ಗೋಡೆಯ ಮೇಲೆ ತೂಗಹಾಕುವದಕ್ಕೂ ತೊಂದರೆಯಾಗುವದು; ಯಾಕಂದರೆ ಕೆಲ ಗುಡಿಗಳಿಗೆ ಕೀಲಿ ಹಾಕುವ ವ್ಯವಸ್ಥೆಯಿರುವದಿಲ್ಲ, ಹಾಗೆ ಮಾಡಲೂ ಬರುವದಿಲ್ಲ. ಶಾಲೆ ಬಿಟ್ಟ ಮೇಲೆ ಜನರು ಗುಡಿಗೆ ಬರಬಹುದು. ಆದರಿಂದ ಶಾಲೆಗೆ ಒಂದು ಪ್ರತ್ಯೇಕ ಕಟ್ಟಡ ಇರುವದು ಒಳ್ಳೆಯದು.

**ಶಾಲೆಯ ಕಟ್ಟಡ:**

ಪ್ರತಿಯೊಂದು ಊರಿಗೆ ಒಂದು ಶಾಲೆ ಬೇಕು, ಶಾಲೆಗೆ ಒಂದು ಪ್ರತ್ಯೇಕ ಕಟ್ಟಡ ಬೇಕು. ಈ ಸಮಸ್ಯೆಯನ್ನು ಬಿಡಿಸುವದು ಸುಲಭ ಸಾಧ್ಯವಲ್ಲ. ಶಾಲೆಯ ಇಮಾರತಿಗಾಗಿ ಸರಕಾರದವರು ಗ್ರಾಂಟಿನ ಪ್ರಮಾಣವನ್ನು ಹೆಚ್ಚು ಮಾಡಿದ್ದಾರೆ. ಈಗ ಮೂರು ನಾಲ್ಕನೆಯ ಪಾಲು ಹಣ ಸರಕಾರವೇ ಕೊಡುವದು. ಇದು ದೊಡ್ಡ ಸಹಾಯವು. ಒತ್ತಾಯ

ಶಿಕ್ಷಣ ಯೋಜನೆಗೆ ಅನುಕೂಲವಾಗುವ ಕೆಲಸವು. ಆದರೆ ಒಂದು ನಾಲ್ಕನೆಯ ಪಾಲು ವೆಚ್ಚವನ್ನು ಕಟ್ಟಡಕ್ಕಾಗಿ ಕೊಡಲು ಕೆಲ ಹಳ್ಳಿಯ ಜನರಿಗೆ ಸಾಧ್ಯವಾಗಲಿಕ್ಕಿಲ್ಲ. ಶಾಲೆಯ 'ಪಕ್ಕಾ' ಕಟ್ಟಡಕ್ಕೆ ಬಹಳ ವೆಚ್ಚ ತಗಲುವದು; ಕಲ್ಲು ಗಚ್ಚುಗಳನ್ನು ಉಪಯೋಗಿಸುವರು ಮೇಲೆ ಕೆಂಪು ಹಂಚು ಹೊಚ್ಚುವರು. ಹೀಗಾಗಿ ಬಹಳ ಹಣ ಬೇಕಾಗುವದು- ಇದರ ಒಂದು ನಾಲ್ಕನೆಯ ಪಾಲನ್ನು ಹಳ್ಳಿಯವರಿಗೆ ಕೊಡುವದು ಕಷ್ಟವಾಗಬಹುದು. ಆದರಿಂದ ಈಗಿನ ಆರ್ಥಿಕ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ 'ಕಚ್ಚಾ' ಇಮಾರತಿಗಳನ್ನು ಕಟ್ಟಿಸುವದು ಹೆಚ್ಚು ಅನುಕೂಲ. ಹೆಂಟೆಯ ಇಲ್ಲವೆ ಇಟಂಗಿಯ ಗೋಡೆಗಳಿಂದ ಕಟ್ಟಿದ ಇಮಾರತುಗಳು ಬಹಳ ವರ್ಷಗಳ ವರೆಗೆ ನಿಲ್ಲುವವು. ಕರಿ ಹಂಚು ಹೊಚ್ಚಿದರೆ ಅಲ್ಪ ವೆಚ್ಚ ತಗಲುವದು. ಅಲ್ಲದೆ ಹಳ್ಳಿಯ ಕುಂಬಾರರಿಗೆ ಪ್ರೋತ್ಸಾಹ ದೊರೆಯುವದು. ಸೇವಾಗ್ರಾಮದಲ್ಲಿ ಇಂಥ ಕಟ್ಟಡಗಳನ್ನು ಕಟ್ಟಿಸಿದ್ದಾರೆ. ಬಿಹಾರ ಪ್ರಾಂತದಲ್ಲಿಯೂ 'ಕಚ್ಚಾ' ಕಟ್ಟಡಗಳನ್ನೇ ಮೂಲ ಶಿಕ್ಷಣ ಶಾಲೆಗಳಿಗಾಗಿ ಕಟ್ಟಿಸಿರುವರು. ಹೀಗೆ ಮಾಡುವದರಿಂದ ಹೆಚ್ಚು ವಿಶಾಲವಾದ ಶಾಲೆಗಳನ್ನು ಕಟ್ಟಲಿಕ್ಕೂ, ಹಳ್ಳಿಗರ ಸಹಾಯವಿಲ್ಲದೆ ಶಾಲೆಯ ಕಟ್ಟಡಗಳನ್ನು ಕಟ್ಟಿಸಿಕೊಡಲಿಕ್ಕೂ ಸಾಧ್ಯವಾಗಬಹುದು. ಅಲ್ಲದೆ ಶಾಲೆಗೆ ಆಶ್ರಮದ ಸ್ವರೂಪ ಬರುವದು. ಶಾಲೆಯ ಕಟ್ಟಡವು ಸಾದಾ ಮತ್ತು ಅಂದವಾಗಿ ಇರಬೇಕು. ಅದರ ಆಕಾರ ಚಚ್ಚೌಕು □ ಇರಬಹುದು; ಒಳಗೆ ಅಂಗಳವಿರಬೇಕು ಇಲ್ಲವೆ ಇಂಗ್ಲಿಷ H ಅಥವಾ E ಅಕ್ಷರಗಳ ಆಕಾರದ ಇಮಾರತು ಇರಬಹುದು. ಪ್ರತಿಯೊಂದು ಕೋಣೆಯಲ್ಲಿ ದೊಡ್ಡ ಕಿಡಿಕಿಗಳೂ ಕಪಾಟುಗಳೂ ಇರಬೇಕು. ನಕಾಶ ಅಥವಾ ಪಟಗಳನ್ನು ತೂಗಹಾಕಲಿಕ್ಕೆ ಗೋಡೆಗಳಿಗೆ ಪಟ್ಟಿಯನ್ನು ಬಡಿಯಬೇಕು. ಪ್ರತಿಯೊಂದು ವರ್ಗಕ್ಕೆ ಒಂದು ಪ್ರತ್ಯೇಕ ಕೋಣೆಯಿರಬೇಕು. ಅಲ್ಲದೆ ಎಲ್ಲ ಶಿಕ್ಷಕರಿಗೆ ಕೂಡ್ರಲಿಕ್ಕೆ ಮತ್ತು ಸಾಮಾನುಗಳನ್ನು ಇಡಲಿಕ್ಕೆ ಹೆಚ್ಚಿನ ಕೋಣೆಗಳು ಬೇಕು. ಸಾಮೂಹಿಕ ಪ್ರಾರ್ಥನೆ, ನೂಲುವದು ಮತ್ತು ಸಭೆ ಇತ್ಯಾದಿ ಕೆಲಸಗಳಿಗಾಗಿ ಶಾಲೆಯ ಕಟ್ಟಡದಲ್ಲಿ ಒಂದು ದೊಡ್ಡ ಕೋಣೆ ಇರಬೇಕು. ಮಕ್ಕಳ ವಾಚನಾಲಯಕ್ಕಾಗಿ ಒಂದು ಕೋಣೆ ಬೇಕು. ೧ ರಿಂದ ೭ ವರ್ಗಗಳು

ಇರುವಂಥ ಶಾಲೆಗಳಲ್ಲಿ ವಾಚನಾಲಯದ ವ್ಯವಸ್ಥೆಯನ್ನು ಅವಶ್ಯ ವಾಗಿ ಮಾಡಬೇಕು. ಮೇಲಟ್ಟಗಳಿದ್ದ ಇಮಾರತುಗಳು ಅನುಕೂಲ ವಲ್ಲ. ಅಗತ್ಯವಿದ್ದಲ್ಲಿ ಮಾತ್ರ ಅವುಗಳನ್ನು ಕಟ್ಟಿಸಬಹುದು. ಮೇಲಿನ ಕೋಣೆಗಳಿಗೆ ಹೋಗಲಿಕ್ಕೆ ಒಂದು ಬದಿಗೆ ಮತ್ತು ಮೇಲಿಂದ ಕೆಳಗೆ ಇಳಿಯಲಿಕ್ಕೆ ಮತ್ತೊಂದು ಬದಿಗೆ ಸಾವಟಿಗೆಗಳನ್ನು ಮಾಡಿಸಬೇಕು.

**ಕಟ್ಟಡದ ಸ್ಥಳ:**

ಶಾಲೆಯು ಕಟ್ಟಡವು ಊರ ಹೊರಗೆ ಇರಬೇಕು. ಉತ್ತಮ ಹವೆ ಬರುವಂತಹ ಸ್ಥಳದಲ್ಲಿ ಇರಬೇಕು. ವಾಹನಗಳೋಡಾಡುವ ದೊಡ್ಡ ರಸ್ತೆಗೆ ಹೊಂದಿ ಇರಬಾರದು. ವಾಹನಗಳ ನಿಲ್ದಾಣ, ಫ್ಯಾಕ್ಟರಿಗಳ ಸಮೀಪಕ್ಕೆ ಇರಬಾರದು. ಅನೈತಿಕ ಜನರ ವಾಸಸ್ಥಳಗಳ ಸೆರೆಯಲ್ಲಿ ಇರ ಕೂಡದು. ಸಮೀಪದಲ್ಲಿ ಕಂದಕ ಕೆರೆಗಳು ಇರಬಾರದು. ಮಳೆಯ ನೀರು ಹರಿದು ಮುಂದೆ ಹೋಗುವಂತೆ ವ್ಯವಸ್ಥೆ ಮಾಡಬೇಕು. ಶಾಲೆಯ ಮುಂದೆ ಅಂಗಳವಿರಬೇಕು. ಆ ಅಂಗಳದಲ್ಲಿ ಕೈತೋಟದ ಕೆಲಸ ಮಾಡಲು ಅನುಕೂಲವಿರಬೇಕು. ಶಾಲೆಯ ಸುತ್ತಲೂ ಆಟಕ್ಕೆ ಸ್ಥಳವಿರ ಬೇಕು. ದನಗಳು ಒಳಗೆ ಬರದಂತೆ ಶಾಲೆಯ ಸುತ್ತಲೂ ಆವಾರ (Compound) ಕಟ್ಟಿಸಬೇಕು. ಆವಾರದೊಳಗೆ ಮೂತ್ರಾಲಯಗಳೂ, ಪಾಯಖಾನೆಗಳೂ ಇರಬೇಕು. ಅವು ಮುಂದೆ ದೂಡುವಂತಹವು ಇರ ಬೇಕು. ಒಂದು ಫೂಟು ಅಗಲ ತಗ್ಗು ತೋಡಬೇಕು. ಆ ತಗ್ಗಿನ ಮೇಲೆ ಉರುಳಿಸುವಂತಹ ಪಾಯಖಾನೆಗಳಿರಬೇಕು. ಹೊಲಸು ಮುಚ್ಚಲು ಮಣ್ಣು ಇಡಬೇಕು. ಹೀಗೆ ಮಾಡುವದರಿಂದ ಗೊಬ್ಬರ ಸಿಗುವದು. ಅಲ್ಲದೆ ಹಳ್ಳಿಗಳಲ್ಲಿ ಭಂಗಿಯ ವ್ಯವಸ್ಥೆ ಇರುವದಿಲ್ಲ. ಆದ್ದರಿಂದ ಭಂಗೀ ಪಾಯಖಾನೆಗಳು ಉಪಯೋಗವಿಲ್ಲ. ಹಳ್ಳಿಯ ಜನರಿಗೆ ಗೊಬ್ಬರ ಜತನ ಮಾಡುವ ಇದೊಂದು ಪ್ರಯೋಗವನ್ನು ಶಾಲೆಯಲ್ಲಿ ತೋರಿಸುವದು ಅಗತ್ಯ. ಸೇವಾಗ್ರಾಮ ಶಾಲೆಯಲ್ಲಿ ಈ ತರದ ಯೋಜನೆಯಿದೆ. ಆಟದ ಬಯಲಿಗೆ, ಶಾಲೆಯ ತೋಟಕ್ಕೆ, ಧ್ವಜ ಸ್ತಂಭಕ್ಕೆ ಮೂತ್ರಿ ಪಾಯಖಾನೆಗಳಿಗೆ—ಓಡಾ ಡಲು ಚಿಕ್ಕ ಮಾರ್ಗಗಳಿರಬೇಕು. ಶಾಲೆ ಹಾಗು ಅದರ ಸುತ್ತು ಮುತ್ತಲಿನ

ಸ್ಥಳ ಅಚ್ಚುಕಟ್ಟಾಗಿ ಇರಬೇಕು. ಶಾಲೆಯ ಸ್ವಚ್ಛತೆ, ಶಿಸ್ತು ಹಾಗು ಸೌಂದರ್ಯಗಳ ಆಗರವಾಗಬೇಕು.

**ವರ್ಗದ ಕೋಣೆ:**

ವರ್ಗದ ಕೋಣೆಯು ಮಾದರಿಯದಾಗಿರಬೇಕು. ಪ್ರತಿಯೊಬ್ಬ ಮಗುವಿಗೆ ಕೂಡ್ರಲು ಸಾಕಷ್ಟು ಸ್ಥಳವಿರಬೇಕು. ಸಾಮಾನ್ಯವಾಗಿ ಒಬ್ಬ ಮಗುವಿಗೆ ೮ ಚೌ. ಫೂ. ಸ್ಥಳವು ಬೇಕು; ತಕಲಿಯಿಂದ ನೂಲುವಾಗ ೧೨ ಚೌ. ಫೂ. ರಾಟಿಯಿಂದ ನೂಲುವಾಗ ೨೦ ಚೌ. ಫೂ; ಹಿಂಜುವಾಗ ೩೦ ಚೌ. ಫೂ. ಸ್ಥಳ ಇರುವದು ಒಳ್ಳೆಯದು. ಒಬ್ಬ ಮಗುವಿಗೆ ೨೦೦ ಘ. ಫೂ. ಹವೆ ದೊರೆಯುವಂತಿರಬೇಕು. ಬೆಳಕು ಸಾಕಷ್ಟು ಸಿಗಬೇಕು. ಗೋಡೆಯ ಒಂದು ನಾಲ್ಕನೆಯ ಪಾಲು ಕಿಡಿಕೆಗಳಿಗಾಗಿ ಬಿಟ್ಟಿರಬೇಕು. ಬೆಳಕು ಎದುರಿನಿಂದ ಬಂದರೆ ಮಕ್ಕಳ ಕಣ್ಣಿಗೆ ತೊಂದರೆಯಾಗುವದು. ಹಿಂಬದಿಯಿಂದ ಬಂದರೆ ಗುರುಗಳ ಕಣ್ಣಿಗೆ ತೊಂದರೆಯಾಗುವದು. ಬೆಳಕು ಬಲಬದಿಯಿಂದ ಬಂದರೆ, ಬರೆಯುವಾಗ ಕೈನೆರಳು ಕಾಗದದ ಮೇಲೆ ಬೀಳುವದು, ಆದರಿಂದ ಮುಖ್ಯ ಬೆಳಕು ಎಡಬದಿಯಿಂದ ಬೀಳು ವದು ಒಳಿತು; ಬಲಬದಿಯಿಂದ ತುಸು ಬೆಳಕು ಬಂದರೂ ಒಳಿತು. ಗೋಡೆಗಳಿಗೆ ತಿಳಿ ಹಸರು ಬಣ್ಣ ಬಳೆಯಬೇಕು; ಎಂದರೆ ಮಕ್ಕಳ ಕಣ್ಣಿಗೆ ತೊಂದರೆಯಾಗುವದಿಲ್ಲ. ಗೋಡೆಯ ಕೆಳಬದಿಗೆ ಡಾಂಬರು ಇಲ್ಲವೆ ಎಣ್ಣೆ ಬಣ್ಣ ಹಚ್ಚಬೇಕ , ನೆಲಗಟ್ಟು ಸರಿಯಾಗಿ ಮಾಡಿಸಿರಬೇಕು. ನೆಲವು ಸಮ ಇರದಿದ್ದರೆ, ಬೆಳಕು ಸಾಕಷ್ಟು ದೊರೆಯದಿದ್ದರೆ, ಹವೆ ಚನ್ನಾಗಿ ಆಡದಿದ್ದರೆ, ಮಕ್ಕಳ ಆರೋಗ್ಯಕ್ಕೆ ಧಕ್ಕೆ ತಗಲುವದು. ಈ ಎಲ್ಲ ಸಂಗತಿಗಳನ್ನು ಗಮನಿಸಿ ವರ್ಗದ ಕೋಣೆಯನ್ನು ರಚಿಸಬೇಕು.

**ಸಾಮಾನುಗಳು:**

ಹೊಸ ಸಾಲೆಗೆ ಅಗತ್ಯವಿರುವ ಸಾಮಾನುಗಳು ಬಹಳ. ಎಲ್ಲ ತುಡುಗರಿಗೂ ಕೂಡ್ರಲಿಕ್ಕೆ ಆಸನಗಳಿರಬೇಕು. ಹುಲ್ಲಿನ ಚಾಪೆಗಳಿದ್ದರೂ ಅಡ್ಡಿಯಿಲ್ಲ. ಅಂಥ ಚಾಪೆಗಳನ್ನು ಮೇಲಿನ ವರ್ಗಗಳ ಮಕ್ಕಳು ಕೈಕೆಲಸದ ಅಂಗವಾಗಿ ತೆಗೆದುಕೊಟ್ಟು ಎಲ್ಲ ಮಕ್ಕಳಿಗೆ ಸಹಾಯ ಮಾಡುವದಂತೂ

ಬಹಳ ಒಳಿತು. ಒಂದು ಚಿಕ್ಕ ಡೆಸ್ಕು ಪ್ರತಿಯೊಬ್ಬ ಬಾಲಕನಿಗೂ ಇರಬೇಕು. ಓದುವಾಗ ೪೫ ಇಳಕಲ, ಬರೆಯುವಾಗ ೧೫ ಇಳಕಲ ಮಾಡಿಕೊಳ್ಳುವಂತೆ ಆ ಡೆಸ್ಕು ಇರಬೇಕು. ಪಾಟಿ, ಪುಸ್ತಕ ಹಾಗು ಇತರ ಸಾಮಾನುಗಳನ್ನು ಇಡಲು ವ್ಯವಸ್ಥೆಯಿರಬೇಕು. ನೂಲುವ ಹಾಗು ನೇಯುವ ಉದ್ಯೋಗಗಳಿಗೆ ಅಗತ್ಯವಿದ್ದ ಉಪಕರಣಗಳು ಇರಬೇಕು. ಕೈತೋಟದ ಕೆಲಸಕ್ಕೆ ಸಾಕಷ್ಟು ಸಲಕರಣೆಗಳು ಇರಬೇಕು. ಒಕ್ಕಲು ತನ ಅಥವಾ ಕಟ್ಟಿಗೆಯ ಕೆಲಸ ಮೂಲ ಉದ್ಯೋಗವಾಗಿದ್ದರೆ ಅದಕ್ಕೆ ಸಹಾಯಕವಾಗುವ ಉಪಕರಣಗಳು ಇರಬೇಕು. ಶಾಲೆಯ ಸ್ವಚ್ಛತೆಗೆ ಅವಶ್ಯಕವಿದ್ದ ಕಸಬರಿಗಿ, ಬರಲು, ಹುಲ್ಲುಕುಂಚ ಮುಂತಾದವುಗಳನ್ನು ಮಕ್ಕಳಿಂದಲೇ ತಯಾರಿಸಿಕೊಳ್ಳಬೇಕು. ಪ್ರತಿಯೊಂದು ವರ್ಗದಲ್ಲಿ ಒಂದು ಅಥವಾ ಎರಡು ಕರೀ ಹಲಿಗೆಗಳು ಇರಬೇಕು. ಅಗತ್ಯವಿದ್ದ ನಕ್ಷೆ ನಕಾಶ, ಪಟಗಳನ್ನೂ, ಮಾಡೆಲ್, ಗ್ಲೋಬಗಳನ್ನು ಸಂಗ್ರಹಿಸಬೇಕು. ನೂಲು, ತಕ್ಕಡಿ, ಪುಸ್ತಕ, ಇತರ ಸಾಮಾನುಗಳನ್ನು ಇಡಲಿಕ್ಕೆ ಒಂದು ಕಪಾಟು ಇರಬೇಕು. ಕರೀ ಹಲಿಗೆಯು ಕೋಣೆಯ ಎಡ ಮೂಲೆಗೆ ಇರಬೇಕು.

**ವಸ್ತು ಸಂಗ್ರಹಾಲಯ:**

ಶಾಲೆಗೊಂದು ವಸ್ತು ಸಂಗ್ರಹಾಲಯವಿರಬೇಕು. ಹಳ್ಳಿಯ ನಿರೀಕ್ಷಣೆ ಮಾಡುವಾಗ ಮಕ್ಕಳು ತರತರದ ಮಣ್ಣು, ಬಣ್ಣ, ಕಲ್ಲು, ವಿಚಿತ್ರ ಸಾಮಾನುಗಳು ಇತ್ಯಾದಿಗಳನ್ನು ಪರೀಕ್ಷಿಸಿ ಅವುಗಳನ್ನು ಶಾಲೆಯ ವಸ್ತು ಸಂಗ್ರಹಾಲಯದಲ್ಲಿ ಜತನ ಮಾಡುವಂತೆ ಪ್ರೇರಿಸಬೇಕು. ಉದ್ಯೋಗದ ವಿವಿಧ ಕ್ರಿಯೆಗಳಲ್ಲಿ, ಕೈಕೆಲಸ ಹಾಗು ಚಿತ್ರಕಲೆ ಇವುಗಳಲ್ಲಿ ಮಕ್ಕಳು ತೋರಿಸುತ್ತಿರುವ ಪ್ರಗತಿಪಟಗಳನ್ನು ತೂಗಹಾಕಬೇಕು. ಅವರ ಪ್ರತ್ಯಕ್ಷ ಕೆಲಸಗಳ ನಿದರ್ಶನಗಳನ್ನು ಕಾಯ್ದಿಡಬೇಕು.

**ವಾಚನಾಲಯ:**

ಪ್ರತಿಯೊಂದು ದೊಡ್ಡ ಶಾಲೆಗೆ ಒಂದು ವಾಚನಾಲಯವಿರುವದು ವಿಹಿತವು. ಮೇಲಿನ ವರ್ಗಗಳ ಬಾಲಕರಿಗಂತೂ ಪ್ರಚಲಿತ ಸಂಗತಿಗಳ

ಪರಿಚಯವು ಅಗತ್ಯವಾಗಿ ಬೇಕು. ಮೂಲ ಶಿಕ್ಷಣ ಸಾಲೆಗಳಲ್ಲಿ ದಿನ ಪತ್ರಿಕೆಯ ಮುಖ್ಯ ಸಂಗತಿಗಳ ತಲೆಬರಹವನ್ನು ಶಾಲೆಯ ಹೊರಗಿನ ಕರೀ ಹಲಿಗೆಯ ಮೇಲೆ ಬರೆಯುವ ರೂಢಿಯಿದೆ. ಅದನ್ನು ನೋಡಿ ಮಕ್ಕಳಿಗೆ ದಿನಪತ್ರಿಕೆಯನ್ನು ಓದುವ ಕಾತರವು ಹೆಚ್ಚುವದು. ವಾರ ಪತ್ರಿಕೆ ಹಾಗು ಮಾಸಿಕ ಪತ್ರಿಕೆಗಳಲ್ಲಿಯ ಲೇಖಗಳನ್ನೂ, ಕತೆಗಳನ್ನೂ ಮಕ್ಕಳು ಓದುವಂತೆ ಗುರುಗಳು ಪ್ರೇರಿಸಬೇಕು. ಇದರಿಂದ ಮಕ್ಕಳ ಓದು ಹಾಗು ಬರೆಹ ಸುಧಾರಿಸುವದು. ಯೋಗ್ಯ ಪಠ್ಯ ಪುಸ್ತಕಗಳು ಶಾಲೆಯಲ್ಲಿ ದೊರೆಯಬೇಕು. ಪ್ರಾಥಮಿಕ ಶಿಕ್ಷಕರಿಗೆ ಸಾಮಾನ್ಯ ಶಿಕ್ಷಣವು ಸ್ವಲ್ಪ, ಅವರಲ್ಲಿ ಓದುವ ಚಟವುಳ್ಳವರು ಕಡಿಮೆ. ಪಠ್ಯ ಪುಸ್ತಕಗಳನ್ನೇ ನಂಬಿ ಅವರು ಮಕ್ಕಳಿಗೆ ಕಲಿಸುವರು. ಮೂಲ ಶಿಕ್ಷಣ ಸಾಲೆಗಳಲ್ಲಿ ಮಕ್ಕಳ ಚಟುವಟಿಕೆಗಳಿಗೆ ಹೆಚ್ಚಿನ ಸ್ಥಾನವಿದೆ. ಚಟುವಟಿಕೆಯ ಮೂಲಕ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಲು ಅನುಕೂಲವಾಗುವ ಪಠ್ಯ ಪುಸ್ತಕಗಳು ಬೇಕು. ಈಗ ಇಂಥ ಪಠ್ಯ ಪುಸ್ತಕಗಳೇ ಇಲ್ಲ. ಸದ್ಯದ ಪಠ್ಯ ಪುಸ್ತಕಗಳಲ್ಲಿ ಪ್ರೌಢರ ದೃಷ್ಟಿಗೆ ಪ್ರಾಧಾನ್ಯವಿದೆ. ಕೆಲವಂತೂ ಮಕ್ಕಳಿಗೆ ನಿಲುಕುವ ಭಾಷೆಯಲ್ಲಿ ಬರೆಯಲ್ಪಟ್ಟಿಲ್ಲ. "ಈ ಹಳೆಯ ರೀತಿಯ ತರ್ಕಸಮ್ಮತ ಪಠ್ಯಪುಸ್ತಕಗಳ ಬದಲು ಮನಶ್ಶಾಸ್ತ್ರ ರೀತಿಯ ಪುಸ್ತಕಗಳು ನಿರ್ಮಿತವಾಗಬೇಕು" ಎಂದು ಡಾ. ಎಂ. ಸಿದ್ಧಲಿಂಗಯ್ಯ ಅವರು ಹೇಳಿದ್ದಾರೆ. ಗ್ರಾಮವಾಸದ ಮತ್ತು ಶ್ರಮ ಜೀವನದ ಪರಿಚಯವಿಲ್ಲದವರು ಪಠ್ಯಪುಸ್ತಕಗಳನ್ನು ರಚಿಸಿರುವರು. ಹೊಸ ದೃಷ್ಟಿಯಿಂದ ಮತ್ತು ಹೊಸರೀತಿಯಲ್ಲಿ ಮಕ್ಕಳ ಸ್ವಾನುಭವಕ್ಕೆ ಪೋಷಕವಾಗುವ ಸನ್ನಿವೇಶದಲ್ಲಿ ಪಠ್ಯಪುಸ್ತಕಗಳು ರಚಿತವಾಗಬೇಕು. ಈಗಿನ ಪಠ್ಯ ಪುಸ್ತಕಗಳಲ್ಲಿಯ ಪಾಠಗಳನ್ನು ಆರಿಸಿಕೊಂಡು ಯಾವ ಚಟುವಟಿಕೆಗೆ ಅವನ್ನು ಸಂಬಂಧೀಕರಿಸಲಿ ಎಂದು ಕೇಳುವ ಶಿಕ್ಷಕರಿಗೆ ಮೂಲ ಶಿಕ್ಷಣದ ಅರ್ಥವೇ ಸರಿಯಾಗಿ ಆಗಿಲ್ಲವೆಂದು ಹೇಳಬಹುದು. ಮಕ್ಕಳಲ್ಲಿ ಭಾಷಾಭಿರುಚಿಯನ್ನು ಹುಟ್ಟಿಸಬಲ್ಲ ಕತೆಕಾದಂಬರಿಗಳು, ಕವನಸಂಗ್ರಹ, ಚಿಕ್ಕ ನಾಟಕಗಳು ಪ್ರಚಲಿತ ವಿಷಯಗಳ ಬಗೆಗೆ ನಿರೂಪಿಸಿದ ಹೊತ್ತಿಗೆಗಳು, ಮಾನವನ ಪ್ರಗತಿಯನ್ನು ನಿರೀಕ್ಷಿಸುವ ಪುಸ್ತಕಗಳು ಇತ್ಯಾದಿಗಳು ಮಕ್ಕಳ

ವಾಚನಾಲಯದಲ್ಲಿ ಇರಬೇಕು. ಪೂರಕ ವಾಚನಕ್ಕಾಗಿ ಅವುಗಳನ್ನು ಉಪಯೋಗಿಸಬೇಕು. ಆಯಾ ವರ್ಗಗಳಿಗೆ ಅನುಗುಣವಾಗುವ ಪುಸ್ತಕಗಳು ವರ್ಗ ವಾಚನಾಲಯದಲ್ಲಿ ಇರಬೇಕು. ಗುರುಗಳ ಮೇಲ್ವಿಚಾರಣೆಯಲ್ಲಿ ಮಕ್ಕಳು ಈ ಪುಸ್ತಕಗಳನ್ನು ಓದಬೇಕು. ಕೃತಿ ಮೂಲಕ ದೊರಕಿದ ಜ್ಞಾನವನ್ನು ದೃಢೀಕರಿಸಲು, ವಿಸ್ತರಿಸಲು ಪುಸ್ತಕಗಳು ಸಾಧನವಾಗುವವೆಂಬುದನ್ನು ಗಮನಿಸಬೇಕು. ವರುಷಕ್ಕೆ ಒಮ್ಮೆ ಅಥವಾ ಎರಡು ಸಾರೆ ಕೈಬರೆಹ ಪತ್ರಿಕೆಗಳನ್ನು ಪ್ರತಿಯೊಂದು ಶಾಲೆಯಲ್ಲಿ ತಯಾರಿಸಬೇಕು. ಗುರುಗಳು ಯೋಗ್ಯ ಮಾರ್ಗದರ್ಶನ ಮಾಡಬೇಕು. ಮೂಲ ಶಿಕ್ಷಣ ಶಾಲೆಗಳಲ್ಲಿ ಗುರುಗಳು ಪ್ರಯೋಗದೃಷ್ಟಿಯಿಂದ ನಡೆಸುವರು. ತಮ್ಮ ಪ್ರಯೋಗದ ಫಲವನ್ನು ಬರೆದಿಡಬೇಕು. ಇತರರ ಪ್ರಯೋಗದ ಫಲವನ್ನು ತಿಳಿಯಲು ಕಾತರರಾಗಬೇಕು. ಗುರುಗಳಿಗೂ ಉಪಯೋಗವಾಗುವ ಒಂದು ಪುಸ್ತಕಾಲಯವಿರುವದು ಒಳಿತು.

**ವೇಳಾಪತ್ರಕ:**

ಸದ್ಯದ ಶಾಲೆಗಳಲ್ಲಿ ವೇಳಾಪತ್ರಕಕ್ಕೆ ಮಹತ್ವದ ಸ್ಥಾನವಿದೆ. ಮೇಲ್ವಿಚಾರಕರು ಸಹ ವೇಳಾಪತ್ರಕದಂತೆ ಕೆಲಸ ನಡೆದಿದೆಯೇ ಎಂದು ನೋಡುವ ರೂಢಿಯಿದೆ. ಇದು ಹಳೆಯ ಶಿಕ್ಷಣದ ಪದ್ಧತಿ. ಈ ತಾಸಿನಲ್ಲಿ ಗಣಿತ ಕಲಿಯುವದು, ಮುಂದಿನ ತಾಸಿನಲ್ಲಿ ಇತಿಹಾಸ ಓದುವದು ಇವು ಹೊಸ ಶಿಕ್ಷಣದ ಕೆಲಸಗಳಲ್ಲ. ಮಕ್ಕಳ ಮನಸ್ಸು ಸಜ್ಜಾಗಿರಲಿ ಬಿಡಲಿ ಗಂಟೆಯಾದಕೂಡಲೆ ಒಂದು ವಿಷಯ ಆರಂಭಿಸುವದು ಕೃತಕವಾದುದು, ಅಪಾಯಕರವಾದುದು. ಇಂಥ ವೇಳಾಪತ್ರಕವು [illegible] ದೃಷ್ಟಿಯಿಂದ ನಿರ್ಮಿತವಾದುದು. ಒಂದು ಪ್ರಸಂಗದಲ್ಲಿ ಮಗುವಿಗೆ ಬೇರೆ ಬೇರೆ ವಿಷಯಗಳ ಜ್ಞಾನವು ಬಿಡಿ ಬಿಡಿಯಾಗಿ ದೊರೆಯುವದ. ಬಿಡಿ ಬಿಡಿಯಾಗಿ ದೊರೆತ ಜ್ಞಾನತುಂಡುಗಳು ಕ್ರಮವಾಗಿ ಸಂಕಲನವಾಗಿ ಇಡಿ ಸ್ವರೂಪ ಹೊಂದುವವು. ವಿಷಯಪ್ರಧಾನ ಶಿಕ್ಷಣಯೋಜನೆಯಲ್ಲಿ ಯಾವ ವಿಷಯಗಳು ದಿನದ ಯಾವ ಅವಧಿಯಲ್ಲಿ ಬರಬೇಕು, ಒಂದು ಅವಧಿಯು ಎಷ್ಟು ನಿಮಿಷಗಳದ್ದು ಇರಬೇಕು, ಅಲ್ಪಾವಧಿ ಬಿಡುವು ಯಾವಾಗ ಕೊಡಬೇಕು ಎಂಬುದೆಲ್ಲ ಹಳೇ ವೇಳಾಪತ್ರಕಗಳ ಲಕ್ಷಣಗಳು.

ಹೊಸ ವೇಳಾಪತ್ರಕವು ಹೊಸ ಪದ್ಧತಿಗೆ ಹೊಂದಿಕೆಯಾದುದು. ಅನುಬಂಧ ಪದ್ಧತಿಯು ಮೂಲ ಶಿಕ್ಷಣದ ಹೊಸ ಹಾದಿ, ಚಟುವಟಿಕೆಯು ಅನುಬಂಧದ ಸೂತ್ರವು. ಮೂಲ ಶಿಕ್ಷಣವು ಜೀವನ ಶಿಕ್ಷಣವು. ಈ ತತ್ವಗಳಿಗೆ ಅನುಗುಣವಾಗುವಂತೆ ಹೊಸ ವೇಳಾ ಪತ್ರಕವು ತಯಾರಾಗಬೇಕು.

**ಮುಂಜಾನೆ**

| ವೇಳೆ | ಕೆಲಸ |
|---|---|
| ಅರ್ಧಗಂಟೆ | ಶಾಲೆಯ ಸ್ವಚ್ಛತೆ ಹಾಗು ಅಲಂಕಾರ, ಸಮಾಜಸೇವಾ ಸಾಮೂಹಿಕ ಪ್ರಾರ್ಥನೆ ಕವಾಯಿತು. |
| ೧ ಗಂಟೆ ೪೦ ನಿಮಿಷ | ಮೂಲ ಉದ್ಯೋಗದ ಚಟುವಟಿಕೆ ಹಾಗು ಸಮವಾಯ ಜ್ಞಾನ |
| ೧೦ ನಿಮಿಷ | ವಿಶ್ರಾಂತಿ |
| ೪೦ ನಿಮಿಷ | ರೂಢಿ ಪಾಠಗಳು |

**ಮಧ್ಯಾಹ್ನ**

| ವೇಳೆ | ಕೆಲಸ |
|---|---|
| ಒಂದು ಗಂಟೆ | ಸಾಮೂಹಿಕ ನೂಲುವದು |
| ೧೦ ನಿಮಿಷ | ವಿಶ್ರಾಂತಿ |
| ೪೦ ನಿಮಿಷ | ಚಟುವಟಿಕೆ ಹಾಗು ಸಮನ್ವಿತ ಜ್ಞಾನ |
| ಅರ್ಧಗಂಟೆ | ರೂಢಿ ಪಾಠಗಳು, ಕೈಕೆಲಸ, ಚಿತ್ರಕಲೆ, ಅಥವಾ ಹಿಂದುಸ್ತಾನಿ |
| ೧೦ ನಿಮಿಷ | ಸಾಮೂಹಿಕ ಪ್ರಾರ್ಥನೆ. ನಾಳಿನ ಕಾರ್ಯಕ್ರಮ, ನಿಶ್ಚಿತಗೊಳಿಸುವದು |
| ಅರ್ಧಗಂಟೆ | ಆಟಗಳು |

ಈ ವೇಳಾಪತ್ರಕವು ಸೂಚಕವು ಮಾತ್ರ. ಇದರಂತೆಯೇ ಶಾಲೆಯ ಕೆಲಸಗಳು ನಡೆಯಬೇಕೆಂಬ ನಿರ್ಬಂಧವಿಲ್ಲ. ಶಾಲೆಯ ಪರಿಸ್ಥಿತಿಗೆ ಸರಿಯಾಗುವಂತೆ ಹೊಂದಿಸಿಕೊಳ್ಳಬೇಕು. ಮೂಲ ಉದ್ಯೋಗಕ್ಕೆ ಎರಡು

ತಾಸು, ಸಮಾಜಸೇವೆಗೆ ಅರ್ಧ ತಾಸು ಅವಶ್ಯವಾಗಿ ಕೊಡಬೇಕು. ಸಾಮೂಹಿಕ ಪ್ರಾರ್ಥನೆ ಮಾಡಿಸುವ ಮೊದಲು ಮಕ್ಕಳ ವೈಯಕ್ತಿಕ ಸ್ವಚ್ಛತೆಯ ಪರೀಕ್ಷೆ ಮಾಡಬೇಕು. ನೈಸರ್ಗಿಕ ಪರಿಸ್ಥಿತಿಗೆ ಹೊಂದಿಕೆಯಾಗುವಂತೆ ಚಟುವಟಿಕೆಯ ಸಮಯವನ್ನು ಬದಲಿಸಿಕೊಳ್ಳಬೇಕು. ಸಂಜೆಗೆ ಅವಶ್ಯವಾಗಿ ಆಟಗಳನ್ನು ಆಡಿಸಬೇಕು. ಆಟಗಳಲ್ಲಿ ವೈವಿಧ್ಯವಿರಬೇಕು., ಮಕ್ಕಳಿಗೆ ಮನರಂಜನೆ ದೊರೆಯುವಂತಿರಬೇಕು. ಶಾಲೆಯ ಆಟದ ಬಯಲು ಕಡಿಮೆಯಿದ್ದರೂ; ಆಟದ ಉಪಕರಣಗಳು ಇಲ್ಲದಿದ್ದರೂ ಮಕ್ಕಳ ಆಟಗಳು ನಿತ್ಯ ಸಾಗಬೇಕು. ಹಾಗೆ ಗುರುಗಳು ಯೋಜಿಸಿಕೊಳ್ಳಬೇಕು. ಇಲ್ಲಿ ಕೊಟ್ಟದ್ದು ಹಗಲು ಶಾಲೆಯ ವೇಳಾಪತ್ರಕವು. ವಸತಿಗೃಹವುಳ್ಳ ಶಾಲೆಗೆ ಇಡೀದಿನದ ವೇಳಾಪತ್ರವು ಬೇಕಾಗುವದು. ಅಡಿಗೆ, ಸ್ವಚ್ಛತೆ, ಸಾಮೂಹಿಕ ಪ್ರಾರ್ಥನೆಗಳನ್ನು ಎರಡುಸಲ ಸೇರಿಸಬೇಕು; ರಾತ್ರಿ ಗುರುಗಳ ಮೇಲ್ವಿಚಾರಣೆಯಲ್ಲಿ ಮಕ್ಕಳು ಅಭ್ಯಾಸ ಮಾಡುವರು; ಗುರುಗಳು ಪ್ರಚಲಿತ ವಿಷಯಗಳನ್ನು ಓದಿ ಹೇಳುವರು; ನಾಳಿನ ಕಾರ್ಯಕ್ರಮವನ್ನು ನಿಶ್ಚಿತಗೊಳಿಸುವರು.

**ಮನೆಗೆಲಸ :**

ಮನೆಗೆಲಸ ಕೊಡಬೇಕೋ ಕೊಡಬಾರದೋ ಎಂಬುದು ಒಂದು ಸಮಸ್ಯೆ. ಹೊಸ ಸಾಲೆಗಳಲ್ಲಿ ಮಕ್ಕಳು ಹೆಚ್ಚಾಗಿ ಕೆಲಸ ಮಾಡುವರು ; ಕೆಲಸಗಳ ಮುಖಾಂತರ ಇತರ ವಿಷಯಗಳ ಜ್ಞಾನ ಮಾಡಿಕೊಳ್ಳುವರು. ಅನುಭವಜನ್ಯ ಜ್ಞಾನವು ಫಲಪ್ರದವಾದುದೇನೋ ನಿಜ. ಆದರೆ ಅದನ್ನು ದೃಢೀಕರಿಸುವದು ಅಗತ್ಯವು. ದೃಢೀಕರಣಕ್ಕೆ ಸಾಲೆಯಲ್ಲಿ ಸಾಕಷ್ಟು ಸಮಯ ಸಿಗುವದಿಲ್ಲ. ಆದರಿಂದ ಮನೆಗೆಲಸ ಕೊಡುವುದು ಅಗತ್ಯವು. ಮಕ್ಕಳು ಗೃಹಪಾಠ ಮಾಡುವಾಗ ಪಾಲಕರ ದೃಷ್ಟಿ ಮಕ್ಕಳ ಕಡೆಗೆ ಹರಿಯುವದು. ಅವರಿಗೆ ಶಾಲೆಯ ಕೆಲಸದ ಪರಿಚಯವಾಗುವದು. ಗುರುಗಳಿಗೆ ಪಾಲಕರ ಸಹಕಾರ ದೊರೆಯುವದು. ಶಾಲೆಗಳಲ್ಲಿ ಬರಹ ರೂಢಿ ಸಾಕಷ್ಟು ಆಗಲಿಕ್ಕಿಲ್ಲ. ಬರಹ ಸುಧಾರಿಸಲು ಗೃಹಪಾಠವು ಅಗತ್ಯ. ಆದರೆ ಮಕ್ಕಳು ಮಾಡಿಕೊಂಡು ಬಂದ ಮನೆಗೆಲಸವನ್ನು ಗುರುಗಳು ನೋಡಿ, ಅವನ್ನು ತಿದ್ದಿ ಕೊಡಬೇಕು. ಆದರಿಂದ ಅದು ಗುರುಗಳಿಗೂ

ಮನೆಗೆಲಸವಾಗುವದು, ಮನೆಗೆಲಸವನ್ನು ಮಿತಿಯಿಂದ ಕೊಡಬೇಕ
ಮೊದಲಿನ ಮೂರು ವರ್ಗಗಳಲ್ಲಿ ಅರ್ಧ ತಾಸು, ೪ನೇ-೫ನೇ ವರ್ಗಗಳ
೧ ತಾಸು, ೬ನೇ-೭ನೇ ವರ್ಗಗಳಲ್ಲಿ ೨ ತಾಸು ಅವಧಿಯ ವರೆಗೆ ಮ
ಗೆಲಸ ಕೊಡಬೇಕು! ಮನೆಗೆಲಸ ಕೊಡುವಲ್ಲಿಯೂ ಸಮತೋಲ ಬೇಕ
ಮಕ್ಕಳ ಮನ ನೋಯುವಷ್ಟು ಅಭ್ಯಾಸಗಳನ್ನು ಕೊಡಬಾರದು. ಮಕ್ಕ
ಉತ್ಸಾಹವನ್ನು ಹಿತವಾಗಿಯೂ ಮಿತವಾಗಿಯೂ ಉಪಯೋಗಿಸಿಕೊ
ಬೇಕು. ಪಾಲಕರ ಕೆಲಸಗಳಲ್ಲಿ ನೆರವಾಗುವ ರೀತಿಯಲ್ಲಿ ಮಕ್ಕಳು ಮ
ಗೆಲಸ ಮಾಡುವರೆಂಬುದನ್ನೂ ಗಮನಿಸಬೇಕು. ಮಕ್ಕಳ ಮನೆಯ ಪ
ಸ್ಥಿತಿಯನ್ನೂ, ಮನೋಮಾನವನ್ನೂ ಲಕ್ಷಿಸಬೇಕು. ಮಕ್ಕಳಲ್ಲಿ ಸ್ವತಂ
ರೀತಿಯಿಂದ ಕೆಲಸ ಮಾಡುವ ಚಟ, ಸ್ವಾವಲಂಬನ, ನಿಯಮಿತತನ
ಅಚ್ಚುಕಟ್ಟುತನ ಮುಂತಾದ ಸದ್ಗುಣಗಳು ನೆಲೆಗೊಳ್ಳುವಂತೆ ಗೃಹಪಾಠಗ
ನೆರವಾಗಬೇಕು.

**ಶಾಲೆಯ ಕಾಗದಪತ್ರಗಳು ಹಾಗು ಪ್ರಗತಿಪಟಗಳು:**

ಶಾಲೆಯ ಕಾಗದಪತ್ರಗಳನ್ನು ಅಚ್ಚುಕಟ್ಟಾಗಿ ಇಡಬೇಕು. ಮೇಲ್
ಚಾರಕರ ತಪಾಸಣೆಗೆ ಯಾವಾಗಲೂ ಸಿದ್ಧವಿರಬೇಕು. ೧ನೇ ನಂ. ರ
ಸ್ಟರ, ೭ನೇ ನಂ. ರಜಿಸ್ಟರ, ಆವಕ-ಜಾವಕ ಬಾರಸಿಸಿ, ಲಾಗ್‌ಬುಕ್
ಡೆಡ್‌ಸ್ಟಾಕ್ ಬುಕ್, ಸರ್ಕ್ಯೂಲರ ಫೈಲು, ಶೆರಾ ಪುಸ್ತಕ, ಜಮಾಖರ್ಚ
ಪುಸ್ತಕ, ಶಾಲೆಯ ವೇಳಾಪತ್ರಿಕೆಗಳು ಇತ್ಯಾದಿಗಳು ಮುಖ್ಯವಾಗಿ ಮುಖ
ಗುರುಗಳ ಹತ್ತಿರ ಇರಬೇಕು. ವರ್ಗಕ್ಕೆ ಸಂಬಂಧಿಸಿದ ಕಾಗದ ಪತ್ರಗಳ
ವರ್ಗದ ಗುರುಗಳ ಹತ್ತಿರ ಇರಬೇಕು. ವರ್ಗದ ವೇಳಾಪತ್ರಿಕ, ಚಟುವಟಿ
ಕೆಗಳನ್ನು ನಿಶ್ಚಿತಗೊಳಿಸಿದ ಒಂದು ಅಂದಾಜು ಪತ್ರಿಕೆ (ತಿಂಗಳವಾರ)
"ತಿಂಗಳಲ್ಲಿ ಸಾಗಿದ ಚಟುವಟಿಕೆಗಳ ಹಾಗು ಸಮನ್ವಿತ ಶಿಕ್ಷಣದ ರೂಪ
ರೇಷೆ, ಮೂಲ ಉದ್ಯೋಗ ಜಮಾಖರ್ಚು, ಉದ್ಯೋಗದ ಪ್ರಗ
ಪತ್ರಿಕೆಗಳು ಇತ್ಯಾದಿಗಳನ್ನು ವರ್ಗದ ಗುರುಗಳು ಚನ್ನಾಗಿ ಇಡಬೇಕು
ಮೂಲ ಉದ್ಯೋಗದ ವಿವಿಧ ಕ್ರಿಯೆಗಳಲ್ಲಿ ಮಾಡಿದ ಕೆಲಸ, ಹತ್ತಿ
ಸಮಯ, ಮುಟ್ಟಿದ ಪ್ರಗತಿ ಇವುಗಳನ್ನು ತೋರಿಸುವ ಪಟಗಳನ್ನೂ
ಗ್ರಾಫುಗಳನ್ನೂ ತಯಾರಿಸಬೇಕು. ಕೆಳಗೆ ತೋರಿಸಿದಂತೆ ಮಾಸಿ

ಪತ್ರಿಕೆಗಳನ್ನು ಇಡುವದು ಒಳಿತು. ೧ನೇ ನಂ. ವರದಿಯು ಮಾಸಿಕ ಅಭ್ಯಾಸದ ವಿವರವನ್ನು ತೋರಿಸಬೇಕು. ಅದರಲ್ಲಿ ತಿಂಗಳಲ್ಲಿ ಕೈಕೆಲಸದ ಚಟುವಟಿಕೆ ಹಾಗು ಸಮನ್ವಿತ ಜ್ಞಾನ ಇವುಗಳನ್ನು ತೋರಿಸಬೇಕು. ೨ನೇ ನಂ. ಪತ್ರಿಕೆಯಲ್ಲಿ ವಿದ್ಯಾರ್ಥಿಗಳ ಪ್ರತಿದಿನದ ಕೆಲಸದ ವಿವರಣೆಯಿರ ಬೇಕು. ವಿದ್ಯಾರ್ಥಿಯ ಹೆಸರು, ಮಾಡಿದ ಕೆಲಸ, ಆ ದಿನದ ವೇಗ ಇವು ಗಳನ್ನು ತಾರೀಖುವಾರ ತೋರಿಸಬೇಕು; ಅಲ್ಲದೆ ಈ ಪತ್ರಿಕೆಯಲ್ಲಿ ಒಟ್ಟು ಹುಟ್ಟುವಳಿ, ಒಟ್ಟು ವೇಳೆ, ನೂಲಿನ ತೂಕ, ನೂಲಿನ ನಂಬರ, ನೂಲಿನ ಶಕ್ತಿ ಹಾಗು ಸಮಾನತೆ, ಒಟ್ಟು ಕೂಲಿ ಮುಂತಾದವುಗಳನ್ನು ತಿಂಗಳ ಕೊನೆಗೆ ಬರೆದಿಡಬೇಕು. ಈ ಪತ್ರಿಕೆಯನ್ನು ನೂಲುವ, ನೇಯುವ ಕ್ರಿಯೆ ಗಳಿಗೆ ಉಪಯೋಗಿಸಬಹುದು. ೩ನೇ, ಪತ್ರಿಕೆಯಲ್ಲಿ ಮೂಲ ಉದ್ಯೋಗದ ಪ್ರತಿ ಇಯತ್ತೆಯ ತಿಂಗಳವಾರ ತೋರಿಸಿದ ವಾರ್ಷಿಕ ವರದಿಯಿರಬೇಕು. ತಿಂಗಳು ವಿದ್ಯಾರ್ಥಿಗಳ ಸಂಖ್ಯೆ; ಕಳೆದ ತಿಂಗಳ ಶಿಲ್ಕು ಹತ್ತಿ, ಅರಳೆ. ಹಂಜಿ, ನೂಲು; ಈ ತಿಂಗಳಲ್ಲಿ ಕೊಟ್ಟದ್ದು-ಹತ್ತಿ, ಅರಳೆ, ಹಂಜಿ; ಉಪ ಯೋಗಿಸಿದ್ದು—ಹತ್ತಿ, ಅರಳೆ, ಹಂಜಿ; ತಿಂಗಳ ಕೊನೆಯ ಶಿಲ್ಕು ಹತ್ತಿ. ಅರಳೆ, ಹಂಜಿ; ನೂಲು; ಹತ್ತಿಯ ಸ್ವಚ್ಛತೆ, ಅರೆಯುವದು, ಹಿಂಜಿ ಹಂಜಿ ಹಾಕುವದು, ತಕಲಿಯ ನೂಲು, ರಾಟಿಯ ನೂಲು,-ಈ ಕ್ರಿಯೆಗಳಿಗೆ ಕೊಟ್ಟ ಸಮಯ, ಆದ ಕೆಲಸ, ನೂಲಿನ ನಂಬರ, ಶಕ್ತಿ, ಸಮಾನತೆ. ಒಟ್ಟು ತಿಂಗಳಲ್ಲಿ ಬಂದ ಕಸರು (ವರ್ಗವಾರು), ನೂರಕ್ಕೆ ಹಾಳಿನ ಪ್ರಮಾಣ, ಒಟ್ಟು ವೇಳೆ, ಒಟ್ಟು ಕೂಲಿ ಈ ಪ್ರಕಾರ ಕೋಷ್ಟಕಗಳನ್ನು ತಯಾರಿಸಿಕೊಂಡು ಪತ್ರಿಕೆಯನ್ನು ತುಂಬಬೇಕು. ೪ನೇ ಪತ್ರಿಕೆಯಲ್ಲಿ ತಿಂಗ ಳಿನ ಜಮಾಖರ್ಚು ಹಾಗು ಶಿಲ್ಕು ತೋರಿಸಬೇಕು. ಕಸರು ಹತ್ತಿ, ಸ್ವಚ್ಛ ಹತ್ತಿ, ಅರಳೆ, ಹಂಜಿ, ಕಸರು, ಕಾಣದ ಕಸರು, ಕಾಳು, ನೂಲು ಈ ವಿವರಗಳ ತಿಂಗಳ ಆರಂಭದ ಶಿಲ್ಕು, ಜಮಾ, ಖರ್ಚು, ಕೊನೆಯ ಶಿಲ್ಕುಗಳನ್ನು ತುಂಬಬೇಕು ೫ನೇ ಪತ್ರಿಕೆಯಲ್ಲಿ ತಯಾರಾದ ಅರಿವೆಗಳ ಮಾಹಿತಿ ಹಾಗು ಅವುಗಳಿಗೆ ತಗಲಿದ ನೂಲಿನ ಮಾಹಿತಿಯನ್ನು ತೋರಿ ಸಬೇಕು. ತಾಗೆಯ ಹೆಸರು, ಉಪಯೋಗಿಸಿದ ನೂಲು-ಬಿಳಿದು ಅಥವಾ ಬಣ್ಣದ್ದು—೧೦ ನಂಬರಿನ ಕೆಳಗೆ, ೧೦ ರಿಂದ ೧೫ರ ವರೆಗೆ, ೧೬ ರಿಂದ ೨೦.

೨೦-೧೫, ೨೫ರ ಮೇಲಿನ ನಂಬರಿನದು; ಅರಿವೆಯ ತೂಕ-ಉದ್ದ, ಅಗಲ, ಕ್ಷೇತ್ರ; ಹಾಳು, ೧೦೦ಕ್ಕೆ ಹಾಳು ಈ ಪ್ರಕಾರ ಕೋಷ್ಟಕಗಳನ್ನು ತುಂಬಬೇಕು. ಮೇಲೆ ಹೇಳಿದ ಐದೂ ಪತ್ರಿಕೆಗಳನ್ನು ಸರಿಯಾದ ಕೋಷ್ಟಕಗಳನ್ನು ಹಾಕಿ ಸಿದ್ಧಗೊಳಿಸಬೇಕು, ಅವುಗಳನ್ನು ಸರಿಯಾಗಿ ತುಂಬಿ ಆ ಆ ವರ್ಗಗಳಲ್ಲಿ ತೂಗ ಹಾಕಬೇಕು. ಇವಲ್ಲದೆ ಮಕ್ಕಳ ಕೈ ಕೆಲಸ, ಚಿತ್ರಕಲೆ, ತೋಟದ ಕೆಲಸ, ಬರೆಹ ಪುಸ್ತಕ, ದಿನಚರಿ, ಮಾಸಿಕ ವರದಿ ಇತ್ಯಾದಿಗಳನ್ನು ವರ್ಗದ ಗುರುಗಳು ಸರಿಯಾಗಿ ಜತನ ಮಾಡಬೇಕು. ಮೂಲಶಿಕ್ಷಣದ ಸಾಲೆಗಳು ಪ್ರಯೋಗದ ಸಾಲೆಗಳೆಂದು ಭಾವಿಸಿ ಗುರುಗಳು ಎಲ್ಲ ಕಾಗದ ಪತ್ರಗಳನ್ನು ಚನ್ನಾಗಿ ಕಾಯ್ದಿಡಬೇಕು; ಅವುಗಳನ್ನು ಮೇಲ್ವಿಚಾರಕರಿಗೆ ತೋರಿಸಿ ತಕ್ಕ ತಿದ್ದುಪಡೆ ಮಾಡಿಕೊಳ್ಳಬೇಕು.

**ಮೇಲ್ವಿಚಾರಣೆ:**

ಶಾಲೆಯ ಕೆಲಸವನ್ನು ನಿರೀಕ್ಷಿಸಲು ಮೇಲ್ವಿಚಾರಕರು ಇರುವರು. ಅವರ ಯೋಗ್ಯತೆ, ಅನವಭವಗಳು ಹೆಚ್ಚಿನ ತರಗತಿಯವು ಇರಬೇಕು. ಶಾಲೆಗೆ ಹೋಗಿ ' ಸಂಬದರ್ಶನ ಕೆಟ್ಟ' ಎಂದು ಬರೆದು ಮರಳಿ ಬರುವದು ಮಾತ್ರ ಅವರ ಕೆಲಸವಲ್ಲ. ಶಿಕ್ಷಕರ ತಪ್ಪುಗಳನ್ನು ತೆಗೆದು ಗದ್ದರಿಸುವುದಷ್ಟೇ ಅವರ ಕೆಲಸವಲ್ಲ. ಅಂದು ಶಾಲೆಯಲ್ಲಿ ನಿಂತು, ಶಾಲೆಯ ಕಾಗದ ಪತ್ರಗಳನ್ನೂ, ಪ್ರಗತಿಪಟಗಳನ್ನೂ ಚನ್ನಾಗಿ ಪರೀಕ್ಷಿಸಿ, ಶಿಕ್ಷಕರ ಅಡೆತಡೆಗಳನ್ನು ಗಮನಕ್ಕೆ ತಂದುಕೊಂಡು, ಅವರಿಗೆ ತಕ್ಕ ಸಲಹೆ ಸೂಚನೆಗಳನ್ನು ಕೊಡಬೇಕು; ಎಂದರೆ ಮೇಲ್ವಿಚಾರಕರು ಶಿಕ್ಷಕರಿಗೆ ಮಾರ್ಗದರ್ಶಕರಾಗಬೇಕು. ಅವರೊಡನೆ ಹಿತವಾಗಿ ಮಿತವಾಗಿ ಶಬ್ದಗಳನ್ನು ಬಳಸಿ ವ್ಯವಹರಿಸಬೇಕು. ಉತ್ಸಾಹಿ ಹಾಗು ಅನುಭವಿಕ ಶಿಕ್ಷಕರಿಗೆ ತಕ್ಕ ಪ್ರೋತ್ಸಾಹ ಕೊಡಬೇಕು. ಅಂದಾಜುಪತ್ರಿಕೆ, ವೇಳಾಪತ್ರಿಕೆ ಇವುಗಳನ್ನು ತಯಾರಿಸುವಲ್ಲಿ, ಕಾಗದಪತ್ರಗಳನ್ನು ಸರಿಯಾಗಿ ಇಡುವಲ್ಲಿ ಮೇಲ್ವಿಚಾರಕರು ಶಿಕ್ಷಕರಿಗೆ ನೆರವಾಗಬೇಕು. ಅಲ್ಲೊಂದು ಇಲ್ಲೊಂದು ಪ್ರಶ್ನೆಗಳನ್ನು ಕೇಳಿ ವಿಷಯಜ್ಞಾನ ಅಳೆಯುವ ಪದ್ಧತಿಯು ಯುಕ್ತವಲ್ಲ. ಬಾಲಕರ ಕೃತಿಯ ಪ್ರಗತಿಯನ್ನು ಪ್ರತ್ಯಕ್ಷ ನಿರೀಕ್ಷಿಸಬೇಕು. ಕಳಕಳಿಯಿಂದ ದುಡಿಯುವ ಶಿಕ್ಷಕರಿಗೆ ಸಹಾಯ, ತೋರಿಕೆಗಾಗಿ ದುಡಿಯುವವರಿಗೆ ಸಕಾಲ ಸಲಹೆ

ಕೊಡುತ್ತಿರಬೇಕು. ತಾವು ಮಾಡಿದ ಕೆಲಸವನ್ನು ತೋರಿಸಬೇಕೆಂಬ ಕುತೂಹಲವು ಶಿಕ್ಷಕರಲ್ಲಿ ಹೆಚ್ಚಾಗಿ ಬೆಳೆಯಬೇಕು. ಮೇಲ್ವಿಚಾರಕರು ತುಸು ಹೊತ್ತು ನೋಡಿ, ತೀವ್ರ ತಮ್ಮ ಶಾಲೆಯಿಂದ ಹೊರಬೀಳಬೇಕೆಂದು ಶಿಕ್ಷಕರು ಆತುರ ಪಡಬಾರದು; ಹಾಗೆ ಕಂಡು ಬಂದಲ್ಲಿ ಮೇಲ್ವಿಚಾರಕರು ಬಹಳ ಹೊತ್ತಿನವರೆಗೆ ನಿಂತು, ಎಲ್ಲ ಚಟುವಟಿಕೆಗಳ ಬಗೆಗೆ ತಕ್ಕಷ್ಟು ಚಿಕಿತ್ಸೆ ಮಾಡುವರು. ಒಟ್ಟಿನಲ್ಲಿ ಮೇಲ್ವಿಚಾರಣೆಯಿಂದ ಶಿಕ್ಷಕರು ಭಯ ಪಡುವ ಕಾರಣವಿಲ್ಲ. ಹೊಸ ಸಾಲೆಗಳ ಮೇಲ್ವಿಚಾರಕರು ಶಿಕ್ಷಕರ ಸಹಾಯಕರೂ, ಮಕ್ಕಳ ಹಿತೈಷಿಗಳೂ, ಶಿಕ್ಷಣ ಪ್ರೇಮಿಗಳೂ ಆಗಿರುವರು. ಆಗಾಗ ಶಿಕ್ಷಕರ ಸಭೆ ಸಮ್ಮೇಲನಗಳನ್ನು ಕರೆದು, ಶಿಕ್ಷಕರ ಅನುಭವ ತೂಗಿ, ಹೊಸ ದೃಷ್ಟಿಯಿಂದ ಶಿಕ್ಷಕರಿಗೆ ಮಾರ್ಗದರ್ಶನ ಮಾಡುವರು.

**ಪರೀಕ್ಷಣಗಳು:**

ಮಕ್ಕಳ ಜೀವನದಲ್ಲಿ ಪರೀಕ್ಷೆಯು ಒಂದು ದೊಡ್ಡ ಕುತ್ತು. ಮಗುವು ಯಾವದೊಂದು ಪರೀಕ್ಷೆಯನ್ನು ಪಾಸಾಗಿ, ತಾನು ಮುಂದೆ ಸಾಗ ಬೇಕೆಂದು ಹವಣಿಸಬೇಕಾಗುವದು. ಶಿಕ್ಷಕರು ಸಹ ಮಕ್ಕಳನ್ನು ಪರೀಕ್ಷೆ ಗಳಿಗಾಗಿ ತಯಾರು ಮಾಡುವ ಹಂಬಲವುಳ್ಳವರೇ ಆಗುವರು. ಅವರಿಗೆ ನಿಜವಾದ ವಿದ್ಯಾಭ್ಯಾಸ ಮಾಡಿಸಬೇಕೆಂದು ಯತ್ನಿಸಲಿಕ್ಕಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ಆಡಳಿತದ ತೊಡಕು. ಏನೊಂದು ಸ್ಥಾನಮಾನ ಹೊಂದುವಲ್ಲಿ ಪರೀಕ್ಷೆಗಳು ಸಾಧನವಾಗುವವು. ಅದರಿಂದ ಮಕ್ಕಳು ಪರೀಕ್ಷೆಗಳ ಪಾಶದಲ್ಲಿ ಶಿಲುಕಿ ತೊಳಲಾಡಬೇಕಾಯಿತು. ಒಂದು ವಿಷಯವು ಸರಿಯಾಗಿ ಅರ್ಥವಾಗಲಿ ಬಿಡಲಿ ಅದನ್ನು ಮುಖಪಾಠ ಮಾಡಿಯಾದರೂ ಪರೀಕ್ಷೆಯಲ್ಲಿ ಬರೆಯಬೇಕು. ಇದರಿಂದ ವಿಚಾರ ಗ್ರಹಣಕ್ಕಿಂತ ಕುರುಡು ಪಾಠ ಮಾಡುವದಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆಯಿತು. ಅನೇಕ ವಿಷಯ ಗಳನ್ನು ಅಲ್ಪಾವಧಿಯಲ್ಲಿಯೇ ತಲೆತುಂಬಿಕೊಂಡು ಪರೀಕ್ಷೆಯ ಸಮಯ ದಲ್ಲಿ ಅದೆಲ್ಲವನ್ನು ಕಾರಿಕೊಳ್ಳುವ ಪ್ರವೃತ್ತಿ ತರುಣರಲ್ಲಿ ಒಡಮೂಡಿದೆ. ಹೀಗಾಗಿ ಶಿಕ್ಷಣವು ಪ್ರತ್ಯಕ್ಷ ಜೀವನದಿಂದ ಸಿಡಿದು ಹೋಗಿ ಕಾಗದವನ್ನು ಸೇರಿತು. ಇಂತಹ ಪರೀಕ್ಷಾ ಪದ್ಧತಿಯಿಂದ ಮಕ್ಕಳ ದೇಹ-ಮನಗಳು ಕುಗ್ಗುವವು. ಬುದ್ಧಿಯು ಕೊಳೆಯುವದು. ಜೀವನ ಸಮಸ್ಯೆಗಳನ್ನು ಎದು

ಸುವಾಗ ತರುಣರು ಎದೆಗುಂದುವರು. ವಿಷಯುಜ್ಞಾನವನ್ನು ಅಳೆಯಲು ನಿರ್ಮಿತವಾದ ನಿಬಂಧಾತ್ಮಕ ಪರೀಕ್ಷಾಪದ್ಧತಿಯು ಎಳೆಯ ಮಕ್ಕಳ ಶಿಕ್ಷಣ ಕ್ರಮದಲ್ಲಿ ಯೋಗ್ಯವಲ್ಲವೆಂದು ಆಧುನಿಕ ಶಿಕ್ಷಣ ತಜ್ಞರ ಅಭಿಪ್ರಾಯವಿದೆ. ಅವರು ಹೊಸ ಪರೀಕ್ಷಣಗಳನ್ನು ಸೂಚಿಸಿದ್ದಾರೆ. (ಅ) ಸಂಗತಿಗಳನ್ನು ಸಂಗ್ರಹಿಸುವದು. (ಬ) ಅಪೂರ್ಣ ಸಂಗತಿಗಳನ್ನು ಪೂರ್ತಿ ಮಾಡುವದು. (ಕ) ತಪ್ಪು-ಸರಿ ಎಂದು ನಿರ್ಣಯಿಸುವದು. (ಡ) ಸಂಗತಿಗಳ ಪರಸ್ಪರ ಜೋಡಣೆ ಮಾಡುವದು ಇತ್ಯಾದಿ.

ಇವು ಚಿಕ್ಕ ಉತ್ತರಗಳನ್ನು ಅಪೇಕ್ಷಿಸುತ್ತವೆ. ಪರೀಕ್ಷಕರಿಗೆ ಗುಣಕೊಡಲು ಸಹಾಯಕವಾಗಿವೆ. ಪರೀಕ್ಷಕರ ವೈಯಕ್ತಿಕ ನಿರ್ಣಯಕ್ಕೆ ಎಡೆಯಿಲ್ಲ. ತಮಗೆ ಎಷ್ಟು ಗುಣಗಳು ದೊರೆಯಬಹುದೆಂದು ಮಕ್ಕಳಿಗೂ ತಿಳಿಯುತ್ತದೆ. ಸ್ಮರಣ ಪರೀಕ್ಷೆಯಾಗದೆ, ವಿಚಾರ ಮಾಡಹಚ್ಚುವ ಸಮಸ್ಯೆಗಳಿಂದ ಕೂಡಿದೆ. ಆದರಿಂದ ಈ ಹೊಸ ಪದ್ಧತಿಯು ಹೆಚ್ಚು ಪ್ರಚಾರವಾಗಿದೆ. ಆದರೆ ಬರೆಹ ಸಾಮರ್ಥ್ಯವನ್ನು ಅಳೆಯಲು ಇಲ್ಲಿ ಅವಕಾಶವಿಲ್ಲವೆಂದೂ, ಮಕ್ಕಳು ಕೇವಲ ತರ್ಕ ಬುದ್ಧಿಯಿಂದ ಕೆಲವು ಪ್ರಶ್ನೆಗಳಿಗೆ ಉತ್ತರ ಬರೆಯಬಹುದೆಂದೂ ಆಕ್ಷೇಪಣೆಗಳನ್ನು ಎತ್ತಬಹುದು. ಮಕ್ಕಳು ಮುಂದಿನವರನ್ನು ಕೇಳಿ ಇಲ್ಲವೆ ಅವರ ಕಾಗದ ನೋಡಿ ಬರೆಯುವ ಸಂಭವವಿದೆ.

ಮೂಲ ಶಿಕ್ಷಣ ಶಾಲೆಗಳಲ್ಲಿ ಇಂಥ ಪರೀಕ್ಷೆಗಳಿಗೆ ಪ್ರಾಶಸ್ತ್ಯವಿಲ್ಲ. ವಿದ್ಯಾಭ್ಯಾಸವು ಕ್ರಿಯೆಗಳ ಮೂಲಕ ಸಾಗುವದು, ಆದುದರಿಂದ ಕ್ರಿಯೆಗಳಲ್ಲಿ ಪರೀಕ್ಷೆ ತಕ್ಕೊಳ್ಳಲಾಗುವದು. ಅಲ್ಲದೆ ಇಡೀ ವರುಷ ಮಾಡಿದ ಪ್ರಾತ್ಯಕ್ಷಿಕ ಕೆಲಸವನ್ನು ನೋಡಲಾಗುವದು. ಮಕ್ಕಳಲ್ಲಿ ಶಿಸ್ತು-ಸಂಘಟನೆಗಳು ಹೇಗೆ ನೆಲಸಿವೆ, ಸಾಮಾಜಿಕ ಚಟುವಟಿಕೆಗಳಲ್ಲಿ ಅವರು ಮಾಡಿದ ಕಾರ್ಯ ಎಷ್ಟಿದೆ, ಪರೋಪಕಾರ ಬುದ್ಧಿ ಅವರಲ್ಲಿ ಹೇಗೆ ಬೆಳವಡಿಸಿಕೊಂಡಿದೆ ಎಂಬಿವೇ ಮಹತ್ವದ ಅಂಶಗಳು. ನಾಗರಿಕತೆಗೆ ಆವಶ್ಯಕವಿದ್ದ ಬೇರೆಬೇರೆ ವಿಷಯಗಳ ಜ್ಞಾನವನ್ನು ಯಾಂತ್ರಿಕವಾಗಿ ಪರೀಕ್ಷಿಸಬಾರದು; ಅದು ಕ್ರಿಯಾತ್ಮಕವಾಗಿರಬೇಕು. ಕೃತಿ ಮೂಲಕ ಕಲಿತ ಜ್ಞಾನವನ್ನು ಕೃತಿ ಮೂಲಕ ಸನ್ನಿವೇಶದಲ್ಲಿಯೇ ಪರೀಕ್ಷಿಸಬೇಕು. ತಮ್ಮ ಜ್ಞಾನವನ್ನು ಜೀರ್ಣಿಸಿಕೊಂಡು ಹೇಗೆ ಬಳಸುವರೆಂಬುದೇ ಇಂಥ ಪರೀಕ್ಷ

ಣಗಳ ಮುಖ್ಯ ಉದ್ದೇಶ. ಆದರಿಂದ ಹೊಸ ಪರೀಕ್ಷಣಗಳು ಮಕ್ಕಳ ಶಾಲೆಯ ಜೀವನ ಸನ್ನಿವೇಶಗಳಿಂದಲೇ ಆಯ್ದುಕೊಂಡಂಥವಿರಬೇಕು. ಮಕ್ಕಳು ಹಾಜರಿದ್ದ ದಿನಗಳು, ಅವರು ಮಾಡಿದ ಕೆಲಸದ ವರದಿ ಇವುಗಳನ್ನು ಮೇಲಿನ ವರ್ಗಕ್ಕೆ ಹಾಕುವಾಗ ಗಮನಿಸಬೇಕು. ಪ್ರತಿಯೊಬ್ಬ ಬಾಲಕನ ಪ್ರಗತಿಯನ್ನು ಪ್ರತಿ ತಿಂಗಳು ಗುರುಗಳು ನೋಡಿ, ತಕ್ಕ ಸಲಹೆ ಕೊಡಬೇಕು; ಹೀಗೆ ಮಾಡಿದರೆ ಒಂದೇ ವರ್ಗದಲ್ಲಿ ಬಾಲಕರು ಹೆಚ್ಚು ಅವಧಿಯ ವರೆಗೆ ಕೊಳೆಯುವ ಕಾರಣ ಬೀಳುವದಿಲ್ಲ, ಹಳೆಯ ಶಿಕ್ಷಣ ಕ್ರಮದಲ್ಲಿ ಈ ತರದ ಕೊಳೆ ಹೆಚ್ಚಾಗಿ ತೋರಿಬರುವದು. ಹೊಸ ಶಿಕ್ಷಣವು ಕ್ರಿಯಾತ್ಮಕವಾದುದರಿಂದ ಈ ಕೊಳೆಯನ್ನು ಕಿತ್ತೊಗೆಯಲು ಅನುವಾಗಿದೆ. ಹೊಸ ದೃಷ್ಟಿಯಿಂದ ಮಕ್ಕಳ ವಿದ್ಯಾಭ್ಯಾಸದ ಮಟ್ಟವನ್ನು ಅಳೆಯುವದು ಅಗತ್ಯ. ಈ ಕೊರತೆಯನ್ನು ಮೂಲಶಿಕ್ಷಣವು ನಿವಾರಿಸಿದೆ.

---

# ೨. ಅಭ್ಯಾಸ ವಿಷಯ ಪತ್ರಿಕೆ

ಹಳೆಯ ಶಾಲೆಗಳ ಅಭ್ಯಾಸ ವಿಷಯ ಪತ್ರಿಕೆಯು ಅನೇಕ ದೋಷಗಳಿಂದ ಕೂಡಿದೆ. **ಡಾ. ಎಂ. ಸಿದ್ದಲಿಂಗಯ್ಯ** ಅವರು ತಮ್ಮ "ಶಿಕ್ಷಣ ತತ್ತ್ವ ದರ್ಶನ" ಎಂಬ ಗ್ರಂಥದಲ್ಲಿ ಪಠ್ಯ ವಸ್ತು ನಿರ್ಮಾಣದ ಬಗೆಗೆ ಕೆಲವು ಸೂಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ಸದ್ಯದ ಪಠ್ಯ ವಸ್ತುವಿನಲ್ಲಿ ಕಾಣಬಹುದಾದ ದೋಷಗಳನ್ನು ಎತ್ತಿ ಹೇಳಿದ್ದಾರೆ. ಅವರ ಮಾತುಗಳನ್ನೇ ಇಲ್ಲಿ ಉದಾಹರಿಸುವದಾದರೆ, "ನಮ್ಮ ಶಾಲೆಗಳು ಫಲಪ್ರದವಾದ ಶಿಕ್ಷಣ ಕೊಡುವಂತಾಗಬೇಕಾದರೆ ಪಠ್ಯವಸ್ತು ಮಕ್ಕಳ ಮನಸ್ಸಿನ ಪರಿಚಯವನ್ನೂ ಸಮಾಜದ ಆವಶ್ಯಕತೆಯನ್ನೂ ಗಣನೆಗೆ ತೆಗೆದುಕೊಳ್ಳುವ ತತ್ತ್ವದೃಷ್ಟಿಯ ಆಧಾರದ ಮೇಲೆಯೇ ರೂಪಗೊಳ್ಳಬೇಕು. ಈಚೆಗೆ ಈ ಮಾರ್ಗವಾಗಿ ಅಲ್ಪಸ್ವಲ್ಪ ಆಸಕ್ತಿ ಹುಟ್ಟಿ ಸಮಾಜದ ಆವಶ್ಯಕತೆಯನ್ನನುಸರಿಸಿ ಪಠ್ಯವಸ್ತುವನ್ನು ನಿರ್ಮಿಸುವ ಕಾರ್ಯ ಆರಂಭವಾಗಿದೆ. ಆದರೂ ಮಕ್ಕಳ ಮನಸ್ಸಿನ ಕಡೆ ತಕ್ಕಷ್ಟು ಗಮನ ಕೊಟ್ಟಿಲ್ಲ. ಹಾಗೆ ದೊಡ್ಡವರು ಮಕ್ಕಳ ಮೇಲೆ ತಮಗಿಷ್ಟವೆನಿಸಿದ ಪಠ್ಯ ವಸ್ತುವನ್ನು ಹೇರಿದರೆ ಅವರು ಹೇಗೆ ಆಸಕ್ತಿಯಿಂದ ಕಲಿತಾರು? ಇಂಥ ದೋಷವನ್ನು ನಿವಾರಿಸಿಲು ಅಮೇರಿಕದವರು ಯತ್ನಿಸಿ ತಮ್ಮ ಉತ್ಸಾಹದ ಭರದಲ್ಲಿ ಮೊದ ಮೊದಲು ಮಕ್ಕಳೇ ಸರ್ವಸ್ವವೆಂದು ಗಣಿಸಿ, ಅವರ ಅಭಿರುಚಿ ಆಸಕ್ತಿಗಳಿಗೇ ಪ್ರಾಧಾನ್ಯತೆ ಕೊಟ್ಟು ಅದಕ್ಕೊಪ್ಪುವ ಪಠ್ಯವಿಷಯವನ್ನು ನಿರ್ಮಿಸಲು ಯತ್ನಿಸಿದರು; ಆದರೆ ಈಚೆಗೆ ಸಮಾಜದ ಆವಶ್ಯಕತೆಯ ಕಡೆಯೂ ಅವರು ಗಮನ ಕೊಡುತ್ತಿದ್ದಾರೆ. ಇಂದಿನ ಪಠ್ಯ ವಿಷಯಕ್ಕೂ ಜೀವನದ ಆವಶ್ಯಕತೆಗೂ ಹೊಂದಿಕೆ ತೋರಿಬರುತ್ತಿಲ್ಲ. ಯಂತ್ರದಂತೆ ಲಕ್ಷಗಟ್ಟಲೆಯ ಲೆಕ್ಕಗಳನ್ನು ತರಗತಿಯಲ್ಲಿ ಮಾಡಿಸದರೂ ನಿತ್ಯ ಜೀವನದಲ್ಲಿ ಎದುರು ಬರುವ ಹಲವು ಬಳಕೆಯ ಲೆಕ್ಕಗಳನ್ನು ಮಾಡುವ ಸಾಮರ್ಥ್ಯ ವಿದ್ಯಾರ್ಥಿಗಳಿಗೆ ಬಂದಿರುವದಿಲ್ಲ. ತರಗತಿಯಲ್ಲಿ ಕಲಿಯುವ ಭಾಷೆಗೂ ಆಡುವ ಭಾಷೆಗೂ ತುಂಬ ಭಿನ್ನತೆಯಿದೆ; ಚರಿತ್ರೆ ಭೂವಿವ

ರಣೆ, ಪ್ರಜಾಧರ್ಮ ಮುಂತಾದವು ಓದುವಂತಿವೆಯೇ ಹೊರತು ಬಾಳಿಕೆಗೆ ಆವಶ್ಯಕವಾದ ಅನುಭವವನ್ನು ಹೆಚ್ಚಿಸುವಂತಿಲ್ಲ. ಶಾಲೆಯಲ್ಲಿ ಅಭ್ಯಾಸಿಸುವ ಕೈಕೆಲಸದ ಚಟುವಟಿಕೆಗಳು ನಿತ್ಯ ಜೀವನಕ್ಕೆ ನೆರವಾಗುವಂತಿಲ್ಲ; ಹೀಗೆ ತೋರಿಬರುವ ಭಿನ್ನತೆಗೆ ಜೀವನದ ಆವಶ್ಯಕತೆಯನ್ನು ತಕ್ಕಷ್ಟು ಪರಿಗಣಿಸದೆ ಪಠ್ಯವಸ್ತು ರೂಪಗೊಂಡಿರುವುದೇ ಕಾರಣವೆನ್ನಬೇಕು....

"ಸದ್ಯದ ಪಠ್ಯವಸ್ತು ಓದುವದು, ಬರೆಯುವದು, ಲೆಕ್ಕಾಚಾರ, ಮುಂತಾದ ಜ್ಞಾನಾರ್ಜನೆಗೆ ಪ್ರಾಶಸ್ತ್ಯ ಕೊಡುತ್ತಿದೆ; ಆ ಜ್ಞಾನದಿಂದ ದೈಹಿಕ ಆರೋಗ್ಯ, ಅಶನ, ವಶನ, ಗೃಹವಸತಿ ಮುಂತಾದ ವಿಷಯಗಳಿಗೆ ಪಠ್ಯವಸ್ತು ಅಷ್ಟು ಗಮನ ಕೊಡುತ್ತಿಲ್ಲ.

"ಈಗ ಕಂಡು ಬರುವ ನ್ಯೂನತೆಗಳಲ್ಲಿ ಬಹುಭಾಗ ನಿವಾರಣೆಯಾಗಬೇಕಾದರೆ 'ಶಿಕ್ಷಣ ನಿಜವಾದ ಜಿವನ' ಎಂಬ ತತ್ವಕ್ಕೆ ಪುರಸ್ಕಾರ ಸಿಕ್ಕಬೇಕು. ಆಗ ಮಾತ್ರ ನಮ್ಮ ಶಾಲೆಗಳಲ್ಲಿ ಜೀವನವನ್ನು ಪ್ರತಿಬಿಂಬಿಸುವಂತೆ ಕಾರ್ಯ ಚಟುವಟಿಕೆಯ ಸನ್ನಿವೇಶಗಳನ್ನೊಳಗೊಂಡ ಪಠ್ಯವಸ್ತುವನ್ನು ನಿಯಮಿಸಿ ಆಚರಣೆಗೆ ತರಬಹುದು. ಪ್ರಾಥಮಿಕ ಶಾಲೆಗಳ ಓದುಬರೆಹಗಳಿಗೇ ಪ್ರಾಧಾನ್ಯತೆಯಿರುವ ಇಂದಿನ ಪಠ್ಯವಸ್ತು ಉದ್ಯಮಗಳಿಗೆ ಸ್ಥಳ ಕೊಡುವ ರೀತಿಯಲ್ಲಿ ಪುನರ್ವ್ಯವಸ್ಥೆಯಾಗಬೇಕು.

"ಇಂದಿನ ಪಠ್ಯವಸ್ತು ಭಾಷೆ, ಚರಿತ್ರೆ, ಗಣಿತ, ಭೂಗೋಲ ಮುಂತಾದ ಪ್ರತ್ಯೇಕ ಭಾಗಗಳಾಗಿ ರೂಪಗೊಂಡಿದೆ. ಜನಜೀವನದಲ್ಲಿ ಬಾಳುವಾಗ ಈ ಎಲ್ಲ ಜ್ಞಾನಗಳೂ ಪ್ರತ್ಯೇಕ ಪ್ರತ್ಯೇಕವಾಗಿ ಉಪಯೋಗವಾಗುವದಿಲ್ಲ, ಒಂದರೊಡನೊಂದು ಸಂಬಂಧಿಸಿಯೇ ಬಳಕೆಗೆ ಬರುತ್ತವೆ. ಶಾಲೆಗಳಲ್ಲಿ ಹೀಗೆ ಪ್ರತ್ಯೇಕಿಕರಿಸುವುದು ಕೃತಕವಾದದ್ದು, ಪಠ್ಯವಸ್ತುವಿನ ನಿರ್ಮಾಪಕರು ಪ್ರಾಥಮಿಕ ಶಾಲೆಗಳಲ್ಲಾದರೂ ಈ ಕೃತಕತೆಯನ್ನು ನಿವಾರಿಸುವುದು ಅವಶ್ಯಕ. ಏಕೆಂದರೆ, ಆಗ ಮಕ್ಕಳು ಕೇವಲ ಮನೆಯಲ್ಲಿದ್ದಂತೆ ಶಾಲೆಯಲ್ಲಿ ಇರಬೇಕು. ಅಲ್ಲಿ ಕಾಣುವ, ಆಡುವ, ನೋಡುವ ಸನ್ನಿವೇಶಗಳನ್ನೇ ಇಲ್ಲೂ ಅನುಭವಿಸುವಂತಿರಬೇಕು, ಭಿನ್ನ ವಿಷಯಗಳಾಗಿ ಈಗ ಏರ್ಪಟ್ಟಿರುವ

ವಿವಿಧ ಜ್ಞಾನಗಳೆಲ್ಲ ಒಂದು ಉದ್ಯಮವನ್ನೋ ಸಮಾರಂಭವನ್ನೋ ಅಥವಾ ಇತರ ಚಟುವಟಿಕೆಯ ಸನ್ನಿವೇಶಗಳನ್ನೋ ರಚಿಸುವಾಗ ಒಟ್ಟಿಗೆ ಉಪಯೋಗಕ್ಕೆ ಬರುತ್ತವೆ. ಒಂದಕ್ಕೊಂದಕ್ಕೆ ಸಂಬಂಧಿಸಿದಂತೆಯೇ ತೋರುತ್ತವೆ..... ವಿಷಯವನ್ನೇ ಪ್ರಾಧಾನ್ಯವಾಗಿಟ್ಟುಕೊಂಡು ವರ್ಗೀಕರಿಸುವದರ ಬದಲು ಉದ್ದೇಶಪೂರ್ವಕವಾದ ಹಲವು ಉದ್ಯಮಗಳನ್ನು ಕೇಂದ್ರವಾಗಿಟ್ಟುಕೊಂಡು ಜ್ಞಾನವನ್ನು ವರ್ಗೀಕರಿಸಬಹುದು. ಆಗ ಮಕ್ಕಳಿಗೆ ಅವು ಕೃತಕವಾದುವೆಂದು ತೋರುವದಿಲ್ಲ'

"ಎಲ್ಲ ಮಕ್ಕಳಲ್ಲೂ ಅಭಿರುಚಿ ಆಸಕ್ತಿಗಳೂ ಸೂಕ್ಷ್ಮವಾಗಿ ಅಡಗಿವೆ. ಅವು ವಯೋಗುಣಕ್ಕನುಸಾರವಾಗಿ ಪ್ರಕಾಶಗೊಳ್ಳಲು ಕಾತರಿಸುತ್ತಿರುತ್ತವೆ. ಆ ಕಾರ್ಯಕ್ಕೆ ಚಟುವಟಿಕೆಗಳು ಅವಶ್ಯಕ. ಅದಕ್ಕೇ ಮಕ್ಕಳಿಗೆ ಚಟುವಟಿಕೆಯಿಂದಿರಲು ತುಂಬ ಆಸೆ. ಅವರ ಆಸಕ್ತಿಯ ಪ್ರವಾಹ ಸಾಮಾನ್ಯವಾಗಿ ಆಟ, ಸಮಾಜ ಜೀವನ, ರಚನೆ, ಶೋಧನೆ, ಕಲಾಕೌಶಲ ಈ ಐದು ಮಾರ್ಗಗಳಲ್ಲಿ ಹರಿಯುತ್ತದೆ. ಈ ಆಸಕ್ತಿಗೆ ತಕ್ಕ ಚಟುವಟಿಕೆಗಳನ್ನು ಒದಗಿಸುವಂತೆ ಪಠ್ಯವಿಷಯ ರೂಪಗೊಳ್ಳಬೇಕು. ಆ ಚಟುವಟಿಕೆಗಳಿಂದ ಮಕ್ಕಳ ಅಭಿರುಚಿ ಆಸಕ್ತಿಗಳು ಪ್ರಕಾಶನಕ್ಕೆ ಬರುವುದರ ಜೊತೆಗೆ ಅವರ ಆರೋಗ್ಯವೂ, ಕಾರ್ಯ ನಿರ್ವಹಣ ಶಕ್ತಿಯೂ, ಕಲಾಕೌಶಲ್ಯವೂ ಬೆಳೆಯಬೇಕು."

ಮೇಲೆ ಹೇಳಿದ **ಡಾ. ಸಿದ್ಧಲಿಂಗಯ್ಯ** ಅವರ ವಿಚಾರಗಳನ್ನು ಚನ್ನಾಗಿ ಪರಿಶೀಲಿಸಿದರೆ ಶಿಕ್ಷಣ ತಜ್ಞರು ಮೂಲ ಶಿಕ್ಷಣ ತತ್ತ್ವಗಳ ಕಡೆಗೆ ಹೇಗೆ ಸಾಗುತ್ತಿರುವರೆಂಬುದು ಸ್ಪಷ್ಟವಾಗದಿರದು.

**ಹಳೆಯ ವಿಷಯ ಪತ್ರಿಕೆಯಲ್ಲಿ ಕಂಡು ಬರುವ ದೋಷಗಳು:**

(೧) ಮಕ್ಕಳ ಶರೀರ–ಮನ ಇವುಗಳ ವಿಕಾಸದ ಮಟ್ಟಗಳ ವಿಶಿಷ್ಟ ಲಕ್ಷಣಗಳಿಗೆ ವಿಷಯಪತ್ರಿಕೆಯು ಹೊಂದಿಕೆಯಾಗಿಲ್ಲ. (೨) ಗಣಿತ, ಇತಿಹಾಸ, ಭೂಗೋಲ ಇತ್ಯಾದಿ ವಿಷಯಗಳ ಜ್ಞಾನ ಕೊಡುವುದೇ ಮುಖ್ಯವೆಂದು ಗ್ರಹಿಸಲಾಗಿದೆ. (೩) ಶಾಲೆಯಲ್ಲಿ ಮಕ್ಕಳು ತಮ್ಮ ನಿಜವಾದ ಜೀವನವನ್ನು ನಡೆಯಿಸುವದಿಲ್ಲ. (೪) ಪರೀಕ್ಷೆಗಳ ಕಡೆಗೆ ದೃಷ್ಟಿಯಿದೆ. (೫) ಚಟುವಟಿಕೆ, ಕಾರ್ಯಾಸಕ್ತಿ, ರಚನಾತ್ಮಕ ಒಲವು ನಿಲವುಗಳು ಸ್ಫುಟ

ಗೊಳ್ಳಲು ಸಾಕಷ್ಟು ಅವಕಾಶವಿಲ್ಲ. (೬) ಜ್ಞಾನವು ಮಕ್ಕಳ ಕೃತಿಗೆ ಅನುಬಂಧಿತವಾಗಿ ದೊರೆಯುವ ಯೋಜನೆಯಿಲ್ಲ. (೭) ಶಾಲೆಯ ಚಟು ವಟಿಕೆಗಳು ಮಕ್ಕಳ ನಿತ್ಯ ಜೀವನಕ್ಕೆ ನೆರವಾಗುವಂತಿಲ್ಲ. (೮) ಉದ್ಯಮ ಗಳನ್ನು ಸಶಾಸ್ತ್ರವಾಗಿ ಕಲಿಸುವ ರೀತಿಯಲ್ಲಿ ಯತ್ನ ನಡೆಯಲಿಲ್ಲ. (೯) ಸುಖಮಯ ಜೀವನಕ್ಕೆ ಅವಶ್ಯಕವೆನಿಸುವ ಸಂಗತಿಗಳಿಗೆ ಗಮನ ಕೊಟ್ಟಿಲ್ಲ. (೧೦) ಸಾಮಾಜಿಕ ಜೀವನದ ಆವಶ್ಯಕತೆಗಳಿಗೆ ತಕ್ಕಷ್ಟು ಗಮನಿಸಲಾಗಿಲ್ಲ.

**ಮೂಲ ಶಿಕ್ಷಣದ ಅಭ್ಯಾಸ ವಿಷಯ ಪತ್ರಿಕೆ:**

ಹಳೆಯ ಶಿಕ್ಷಣದ ವಿಷಯ ಪತ್ರಿಕೆಯಲ್ಲಿರುವ ದೋಷಗಳನ್ನು ದೂ ಡಲು ಮೂಲಶಿಕ್ಷಣವು ಮುಂದೆ ಬಂದಿದೆ. ಮೊದಲನೆಯದಾಗಿ, ಮಗು ವಿನ ಸಮವಾಯ ವಿಕಾಸವನ್ನು ಅದು ಪುರಸ್ಕರಿಸುತ್ತದೆ. ಮನೆ, ಶಾಲೆ. ಸಮಾಜ ಈ ಮೂರ ಕ್ಷೇತ್ರಗಳಲ್ಲಿ ವ್ಯಕ್ತವಾಗುವ ಮಗುವಿನ ಜೀವನವೇ ಪಠ್ಯವಸ್ತುವಾಗಿದೆ. ಜೀವನೋಪಯೋಗಿ ಉದ್ಯಮಗಳಿಗೆ ಮಹತ್ವದ ಸ್ಥಾನ ಕೊಟ್ಟಿದೆ. ಮಕ್ಕಳಿಗೆ ಜ್ಞಾನವು ಸ್ವಾಭಾವಿಕ ಸನ್ನಿವೇಶದಲ್ಲಿ ದೊರೆ ಯುವಂತೆ ಅಭ್ಯಾಸ ಪತ್ರಿಕೆ ನಿರ್ಮಾಣವಾಗಿದೆ. 'ಶಿಕ್ಷಣವು ಜೀವನ; ಜೀವನವೇ ಶಿಕ್ಷಣ' ಎಂಬ ತತ್ವವನ್ನು ಮಾನ್ಯ ಮಾಡಿದೆ. ಉದ್ದೇಶ ಪೂರಕ ಉದ್ಯಮಗಳನ್ನು ಕೇಂದ್ರವಾಗಿಟ್ಟುಕೊಂಡು ಜ್ಞಾನವನ್ನು ವರ್ಗೀ ಕರಿಸಲಾಗಿದೆ. ಸಮಾಜ ಸೇವೆಯ ಮುಖಾಂತರ ಆತ್ಮಸಿದ್ಧಿ ಹೊಂದಲು ವ್ಯಕ್ತಿಗೆ ಪ್ರೇರಣೆ ಕೊಡಲಾಗಿದೆ. ಸಾಮಾಜಿಕ ಜೀವನದ ಆವಶ್ಯಕತೆ ಗಳಿಗೆ ತಕ್ಕಷ್ಟು ಗಮನ ಕೊಡಲಾಗಿದೆ. ಮಕ್ಕಳು ಕ್ರಿಯಾತ್ಮಕ ವ್ಯಕ್ತಿಗಳಾಗಿ ಬೆಳೆಯುವಂತೆ ಸಾಕಷ್ಟು ಸನ್ನಿವೇಶಗಳಿವೆ.

ಝುಕೀರ ಸಮಿತಿಯವರು ತಯೊರಿಸಿದ ಅಭ್ಯಾಸ ವಿಷಯ ಪಟ್ಟಿ ಯಲ್ಲಿ ಕೆಳಗಿನ ವಿಷಯಗಳನ್ನು ಸೇರಿಸಿದ್ದಾರೆ. (೧) ಮೂಲ ಉದ್ಯೋಗ (೨) ತಾಯಿನುಡಿ (೩) ಗಣಿತ (೪) ಸಮಾಜ ವಿಜ್ಞಾನ (೫) ಸಾಮಾನ್ಯ ವಿಜ್ಞಾನ (೬) ಚಿತ್ರಕಲೆ (೭) ಸಂಗೀತ (೮) ಹಿಂದುಸ್ಥಾನಿ. ಇಲ್ಲಿಯೂ ವಿಷಯ ವರ್ಗೀಕರಣ ಮಾಡಿ ಪತ್ರಿಕೆಯನ್ನು ನಿರ್ಮಿಸಲಾಗಿದೆ

ಯೆಂದು ಅಕ್ಷೇಪಣೆ ತೆಗೆಯಬಹುದು. ಸಮಯ ಸಾಕಷ್ಟು ಸಿಗದಿದ್ದರಿಂದ ಹೀಗೆ ಮಾಡಲಾಗಿದೆಯೆಂದು ಸಮಿತಿಯವರು ಒಪ್ಪಿದ್ದಾರೆ. ಆದಾಗ್ಯೂ ಈ ಎಲ್ಲ ವಿಷಯಗಳನ್ನು ಅನುಬಂಧ ಪದ್ಧತಿಗೆ ಅನುಗುಣವಾಗಿ ಹೆಣೆಯುವ ದಾರಿಯನ್ನು ತೋರಿಸಿದ್ದಾರೆ. ಕೆಲಸಗಾರರು ಅವರು ತೋರಿದ ದಾರಿಯಿಂದ ಸಾಗಿ, ತಮ್ಮ ಅನುಭವದ ಬೆಳಕಿನಲ್ಲಿ ಮುದಂಡಿಯಿಡಬೇಕು. ಕೆಲಸಗಾರರಿಗೂ ಪ್ರಯೋಗಕ್ಕೆ ಸಾಕಷ್ಟು ಅವಕಾಶವಿದೆ. ಸ್ವಾವಲಂಬನ, ಸ್ವಾನುಭವಗಳು ಮೂಲ ಶಿಕ್ಷಣದ ತಾಯಿಬೇರಿನ ಟಿಸಳುಗಳು.

**ಮೂಲ ಉದ್ಯೋಗ:**

ಕೆಳಗಿನ ಉದ್ಯೋಗಗಳಲ್ಲಿ ಆರಿಸಿಕೊಳ್ಳಬಹುದೆಂದು ಸಮಿತಿಯವರು ಸೂಚಿಸಿದ್ದಾರೆ:—(೧) ನೂಲುವದು ಹಾಗು ನೇಯುವದು (೨) ಬಡಿಗತನ (೩) ಒಕ್ಕಲುತನ (೪) ಹಣ್ಣು- ಕಾಯಿಪಲ್ಯೆ ಬೆಳೆಯುವದು; ತೋಟಗಾರಿಕೆ (೫) ಚರ್ಮದ ಕೆಲಸ (೬) ಸ್ಥಳಿಕ ಪರಿಸ್ಥಿತಿಗೆ ಹೊಂದಿಕೆಯಾಗುವ ಯಾವುದೊಂದು ಉದ್ಯೋಗ.

ಯಾವ ಉದ್ಯೋಗವನ್ನು ಆರಿಸಿಕೊಂಡರೂ ನಡೆಯುವದೆಂದು ತಿಳಿಯಕೂಡದು. ಆ ಉದ್ಯೋಗಕ್ಕೆ ಬೇಕಾದ ಸಾಧನ ಸಾಮುಗ್ರಿಗಳು ಸುಲಭಸಾಧ್ಯವಿರಬೇಕು. ಅದರ ವಿವಿಧ ಕ್ರಿಯೆಗಳು ಶಿಕ್ಷಣದ ಸಾಧನಗಳಾಗಬೇಕು. ಜೀವನಾವಶ್ಯಕತೆಗಳನ್ನು ಪೂರೈಸುವ ಉದ್ಯೋಗವಿರಬೇಕು. ಹಳ್ಳಿಯ ಪರಿಸ್ಥಿತಿಗೆ ಹೊಂದಿಕೆಯಾಗುವಂತಹದಿರಬೇಕು.

**ತಾಯಿನುಡಿ** (Mother Tongue):

ಮಗುವು ಆಡುವ ಭಾಷೆಯು ತಾಯಿನುಡಿಯೆಂದು ಸಾಮಾನ್ಯವಾಗಿ ರೂಢವಾಗಿದೆ. ಮಗುವು ತಾಯಿಯ ಉಡಿಯಲ್ಲಿ ಬೆಳೆಯುವಾಗಲೆ ಮಾತು ಕಲಿಯತೊಡಗುವದು. ತಾಯಿಯ ಮಾತು ಮಗುವಿನ ಮಾತಾಗಬಹುದು. ಆದರೆ ತಾಯಿ ಒಂದು ಭಾಷೆಯಲ್ಲಿ ಬೆಳೆದು ಬಂದವಳಿರಬಹುದು. ತಂದೆ ಮತ್ತೊಂದು ಭಾಷೆಯಲ್ಲಿ ಬೆಳೆದು ಬಂದಿರಬಹುದು. ಆಗ ಮಗುವಿನ ಭಾಷೆ ಯಾವದು? **ಶ್ರೀ ಆರ್ಯ ನಾಯಕಂ** ಅವರ ಭಾಷೆ ತಮಿಳು, ಅವರ ಧರ್ಮಪತ್ನಿಯಾದ **ಶ್ರೀಮತಿ ಆಶಾದೇವಿ** ಅವರ ಭಾಷೆ

ಬಂಗಾಲಿ, ಅವರ ಮಗಳು ಕಲಿಯುವ ಭಾಷೆ ಮರಾಠಿ. ವರ್ಧಾದಲ್ಲಿ ಮರಾಠಿ ಭಾಷೆ ಬಳಿಕೆಯಲ್ಲಿದೆ, ಆದರಿಂದ ಅವರ ಮಗಳು ಆಡುವ ಭಾಷೆ ತಾಯಿಯದೂ ಅಲ್ಲ, ತಂದೆಯದೂ ಅಲ್ಲ; ಅದು ಆ ಭಾಗದ್ದು. ಮಗುವು ಕಲಿಯುವದು ಪ್ರಾದೇಶಿಕ ಭಾಷೆ. ಆದರಿಂದ ತಾಯ್ನುಡಿ ಎಂದು ಕರೆಯು ವದಕಿಂತ ಮಗುವಿನ ನುಡಿ ( child's tongue ) ಯೆಂದು ಕರೆಯುವು ದರಲ್ಲಿ ಹೆಚ್ಚು ಔಚಿತ್ಯವಿದೆಯೆಂದು **ಶ್ರೀ. ಕಿಶೋರಲಾಲ ಮಶ್ರುವಾಲಾ** ಅವರು ಹರಿಜನ ಪತ್ರಿಕೆಯಲ್ಲಿ ಸೂಚಿಸಿದ್ದಾರೆ. ಪ್ರಾದೇಶಿಕ ಭಾಷೆ (Regional Language) ಎಂದು ಇಟ್ಟು ಕೊಳ್ಳುವದೂ ಒಳಿತು.

ಮೂಲ ಶಿಕ್ಷಣದ ಯೋಜನೆಯಲ್ಲಿ ಮಗುವಿನ ಭಾಷೆಗೆ ಮಹತ್ವದ ಸ್ಥಾನವಿದೆ. ಬಾಲಕನು ಅನೇಕ ಸಂಗತಿಗಳನ್ನು ನೋಡಿ, ಮಾಡಿ ಕಲಿ ಯುವನು. ಕಲಿತದ್ದನ್ನೆಲ್ಲ ತನ್ನದಾಗಿ ಮಾಡಿಕೊಳ್ಳಲು ಇತರರಿಗೆ ಹೇಳ ಬಯ ಸುವನು. ಅಲ್ಲದೇ ತನ್ನ ' ಬೇಕು ಬೇಡ' ಗಳನ್ನು ತಿಳಿಸಲು ಹವಣಿಸುವನು. ನಿರೀಕ್ಷಣೆ, ಅನುಕರಣ ಮತ್ತು ಕೃತಿ ಇವು ಮಗುವಿನ ಜ್ಞಾನ ಸಂಗ್ರಹದ ಪ್ರಥಮ ಸೋಪಾನಗಳು. ಮಾತನಾಡಲು ಕಲಿಯುವುದು ಸಂಸ್ಕಾರದ ಮೊದಲು ಹೆಜ್ಜೆ. ಮಕ್ಕಳು ತಮ್ಮ ಆಟ–ನೋಟಗಳ ಇಲ್ಲವೆ ಕೃತಿಗಳ ಬಗೆಗೆ ಮಾತನಾಡಲು ಕಲಿಯುವರು. ಅದರಿಂದ ಅವರ ಚಟುವಟಿಕೆಗಳೇ ಅವರ ಭಾಷಾಭ್ಯಾಸದ ಸಾಧನಗಳು. ಚಟುವಟಿಕೆಗಳನ್ನು ಮಾಡುವಾಗ ವಿವಿಧ ಸಾಧನಗಳ ಪರಿಚಯವಾಗುವದು. ಶಬ್ದಸಂಗ್ರಹ ತಾನಾಗಿಯೇ ಆಗುವದು. ಕೃತಿ ವಿವರಣೆ ಹೇಳಿಸಿಕೊಳ್ಳುವಾಗ ಪೂರ್ಣ ಮಾತುಗಳ ಕಲ್ಪನೆಯೂ ಆಗುವದು. ಈ ಸಮಯದಲ್ಲಿ ಶಬ್ದಗಳ ಉಚ್ಚಾರದ ಶುದ್ಧತೆಗೆ ಲಕ್ಷ್ಯ ಪೂರೈಸಬೇಕು. ಹೀಗೆ ಮಾಡಿದಲ್ಲಿ, ವಾಚಾನಿಬಂಧವು ಕ್ರಮಬದ್ಧ ವಾಗಿಯೂ ಸೂಕ್ತವಾಗಿಯೂ ಸಾಗುವದು. "ಮೊದಲು ಓದು, ನಂತರ ಬರೆಹ" ಎಂದುಶಿಕ್ಷಣ ತಜ್ಞರು ಹೇಳಿದ ಮಾತಿನ ಮರ್ಮವೂ ಅದೇ.

ಕೃತಿ ಮೂಲ ಭಾಷಾಭ್ಯಾಸ ಸಾಗಿಸಲು ತಕ್ಕ ಪಠ್ಯ ಪುಸ್ತಕಗಳು ನಿರ್ಮಾಣವಾಗಿಲ್ಲ; ಇನ್ನು ತೀವ್ರವೇ ಆಗುವದು ಅಗತ್ಯವಿದೆ. ಶಿಕ್ಷಕರೇ ಕೃತಿಗೆ ಸಂಬಂಧಿಸಿದ ಪಾಠಗಳನ್ನು ರಚಿಸಿಕೊಂಡು ಓದ–ಬರೆಹ ರೂಢಿ ಮಾಡುತ್ತಿರುವರು. ಭಾಷಾಭ್ಯಾಸದ ಪಠ್ಯಪುಸ್ತಕಗಳು ಮಕ್ಕಳಿಗೆ

ಪೂರಕ ವಾಚನದ ಸಾಧನಗಳೆಂದು ತಿಳಿಯಬೇಕು. ಮೂಲ ಶಿಕ್ಷಣದ ಅವಧಿಯಲ್ಲಿ ಭಾಷಾಭ್ಯಾಸದ ಉದ್ದಿಶ್ಯಗಳು ಯಾವವೆಂಬದನ್ನು ಝಾಕೀರ ಸಮಿತಿಯವರು ಸ್ಪಷ್ಟ ಮಾಡಿದ್ದಾರೆ. ಅವು ಕೆಳಗಿನಂತ ಅವೆ:—

(೧) ಮಗುವಿನ ವಾತಾವರಣದಲ್ಲಿ ಬರುವ ವಸ್ತುಗಳ, ಜನರ ಹಾಗು ಘಟನೆಗಳ ಬಗೆಗೆ ಸ್ವತಂತ್ರವಾಗಿ, ಸ್ವಾಭಾವಿಕವಾಗಿ, ಆತ್ಮವಿಶ್ವಾಸ ಪೂರಿತ ವಾಗಿ ಮಾತಾಡುವ ಸಾಮರ್ಥ್ಯವುಂಟಾಗಬೇಕು. (೨) ನಿತ್ಯ ವ್ಯವ ಹಾರಕ್ಕೆ ಸಂಬಂಧಿಸಿದ ಒಂದು ವಿಷಯದ ಮೇಲೆ ನಿಚ್ಚಳವಾಗಿ, ಕ್ರಮ ಬದ್ಧವಾಗಿ ಹಾಗು ಸೂಕ್ತವಾಗಿ ಮಾತಾಡುವ ಸಾಮಾರ್ಥ್ಯವುಂಟಾಗಬೇಕು. (೩) ಕೈಬರೆಹ ಗದ್ಯಭಾಗಗಳನ್ನು ಮೌನವಾಗಿ, ಬುದ್ಧಿಯುತವಾಗಿ ಹಾಗು ತ್ವರಿತವಾಗಿ ಓದುವ ರೂಢಿಯಾಗಬೇಕು. (೪) ಗದ್ಯಪದ್ಯಭಾಗ ಗಳನ್ನು ಗಟ್ಟಿಯಾಗಿ, ಸ್ಪಷ್ಟವಾಗಿ ಹಾಗು ಅರ್ಥ ಬೋಧವಾಗುವಂತೆ ಓದುವ ರೂಢಿಯಾಗಬೇಕು. (೫) ದೊಡ್ಡ ಹೊತ್ತಿಗೆಗಳಿಂದ ವಿಷಯ ಸಂಗ್ರಹಿಸಲು, ಶಬ್ದಕೋಶ ಬಳಸಲು, ಆನಂದ ಪಡೆಯಲು ಸಾಧುವಾಗ ಬೇಕು. (೬) ನಿತ್ಯ ಜೀವನದ ಪ್ರಸಂಗಗಳ ನಿಬಂಧ ಸಭೆಗಳ ವರದಿ ಇತ್ಯಾದಿಗಳನ್ನು ತಯಾರಿಸಬೇಕು. (೭) ವೈಯಕ್ತಿಕ ಹಾಗು ವ್ಯಾವ ಹಾರಿಕ ಪತ್ರಲೇಖನ ರೂಢಿ ಮಾಡಿಸಬೇಕು. (೮) ಪ್ರಸಿದ್ಧ ಲೇಖಕರ ಪರಿಚಯವಾಗಬೇಕು. ಆದಕ್ಕಾಗಿ ಅವತರಣಿಕೆಗಳನ್ನು ಉಪಯೋಗಿಸ ಬೇಕು.

**ಗಣಿತ:**

ಗಣಿತ ವಿಷಯದಲ್ಲಿ ಅಂಕಗಣಿತ, ರೇಖಾಗಣಿತ (ಭೂಮಿತಿ) ಹಾಗು ಜಮಾಖರ್ಚು ಎಂಬ ವಿಭಾಗಗಳನ್ನು ಮಾಡುವರು. ಈ ವಿಷಯಗಳನ್ನು ಮಕ್ಕಳಿಗೆ ಕಲಿಸುವಾಗ ಹಾಗು ದೃಢೀಕರಿಸುವಾಗ ಕಲ್ಪಿತ ಉದಾಹರಣೆ ಗಳನ್ನು ಉಪಯೋಗಿಸುವರು. ಹಾಗೆ ಮಾಡುವದು ಸ್ವಾಭಾವಿಕ ಮಾರ್ಗ ವಲ್ಲ. ಮಕ್ಕಳ ಶಾಲೆಯ ಜೀವನದ ವ್ಯವಹಾರ ಚಟುವಟಿಕೆಗಳು ಈ ವಿಷಯಗಳನ್ನು ಕಲಿಸುವ ಸಾಧನಗಳಾಗಬೇಕು. ಎಂದರೆ, ಮಕ್ಕಳು

ಸ್ವಾಭಾವಿಕವಾಗಿ ಈ ಸಂಗತಿಗಳನ್ನು ಕಲಿಯುವರು, ತೀವ್ರ ಅರಗಿಸಿಕೊಳ್ಳು ವರು. ಗಣಿತಾಭ್ಯಾಸವು ಕೇವಲ ಜ್ಞಾನಕ್ಕಾಗಿ ಸಾಗಿದರೆ, ಅದು ನಿರಸ ವಾಗುವದು, ಕೆಲ ಬಾಲಕರಿಗೆ ಅದು ಜಡವೆನಿಸುವದು. ಅದರಿಂದ ಈ ಬಾಲಕನಿಗೆ ಗಣಿತದಲ್ಲಿ ಗತಿಯಿಲ್ಲ ಎಂದು ಶಿಕ್ಷಕರು ಉಸಿರೆಳೆಯುವರು, ಬಾಲಕನೂ ಹಾಗೆ ನಂಬುವನು. ಅವನ ಆಸಕ್ತಿ ಈ ದಿಸೆಯಲ್ಲಿ ಮುಂಕಾಗು ವದು. "ಗಣಿತ ಪಾಠವನ್ನು ಆಕರ್ಷಣೀಯವಾಗಿ ಬೋಧಿಸು ವಂತೆ ಮಾಡಲು ಪ್ರಾದೇಶಿಕ ವಾತಾವರಣದ, ಸನ್ನಿವೇಶಗಳ, ಜೀವ ನದ ಆವಶ್ಯಕತೆಗಳ ಸ್ವರೂಪವನ್ನು ಪ್ರತಿಬಿಂಬಿಸುವ ರೀತಿಯಲ್ಲಿ ಆ ಸಮಸ್ಯೆಗಳು ಬಂದಿಲ್ಲ," ಎಂದು **ಡಾ. ಸಿದ್ಧಲಿಂಗಯ್ಯ** ಅವರು ಹೇಳಿ ದ್ದಾರೆ. ಅವರ ಮತವು ಮೂಲ ಶಿಕ್ಷಣದ ದೃಷ್ಟಿಕೋನವನ್ನೇ ನಿರೂಪಿಸು ತ್ತಿದೆ. ಝಾಕೀರ ವರದಿಯಲ್ಲಿ ಈ ರೀತಿ ಹೇಳಲಾಗಿದೆ:

"ಮೂಲ ಉದ್ಯೋಗ, ಶಾಲೆಯ ಹಾಗು ಸಾಮುದಾಯಿಕ ಜೀವನದಲ್ಲಿ ಉದ್ಭೂತವಾಗುವ ವಿವಿಧ ಸಮಸ್ಯೆಗಳನ್ನು ಜೀವನ ಸನ್ನಿವೇಶಗಳಿಗೆ ಅನುಬಂಧಿಸಿ ಅದು (ಗಣಿತ ಜ್ಞಾನ) ಹೆಣೆಯಲ್ಪಡ ಬೇಕು." ಮಕ್ಕಳ ವಿಚಾರಪರ ದೃಷ್ಟಿ ವಿಕಾಸವಾಗಬೇಕು.

**ಸಮಾಜ ವಿಜ್ಞಾನ:**

ಈ ವಿಷಯದಲ್ಲಿ ಮೂರು ಉಪವಿಷಯಗಳು ಸಮಾವೇಶವಾಗಿವೆ. ಇತಿಹಾಸ, ಪೌರನೀತಿ, ಭೂಗೋಲ ಇವು ಈ ವರೆಗೆ ಮೂರು ಪ್ರತ್ಯೇಕ ವಿಷಯಗಳಾಗಿ ವಿಭಾಗಿಸಲ್ಪಟ್ಟಿವೆ; ಆದರೆ ಇವು ಮಾನವ ಪ್ರಗತಿಯ ವೃಕ್ಷದ ಮೂರು ಟಿಸಿಲುಗಳು. ಮಾನವನು ಸಮಾಜ ಜೀವಿಯಾಗಿ ಬೆಳೆಯುತ್ತ ತನ್ನ ಚಾರಿತ್ರ್ಯವನ್ನು ಹೇಗೆ ನಿರ್ಮಿಸಿದ, ಪರಿಸ್ಥಿತಿಯೊಡನೆ ಹೋರಾಡಿ ತನ್ನ ಬುದ್ಧಿ–ಅನುಭವಗಳನ್ನು ಬಳಸಿ ಭೂಮಿಯನ್ನು ಹೇಗೆ ತನ್ನ ನಿವಾಸ ವನ್ನಾಗಿ ಪರಿವರ್ತಿಸಿಕೊಂಡ, ನಾಗರಿಕತೆಯ ಉದಾತ್ತಮಟ್ಟವನ್ನು ಹೇಗೆ ಮುಟ್ಟಿದ ಎಂದು ತಿಳಿಸುವ ಮಾನವನ ಸಮಾಜ ಜೀವನದ ಮೂರು ಪ್ರವಾಹಗಳು. ಅದರಿಂದ ಮೂಲ ಶಿಕ್ಷಣದ ಪುರಸ್ಕರ್ತರು ಸಮಾಜ ವಿಜ್ಞಾನವೆಂದು ಪಠ್ಯ ವಸ್ತುವಿನಲ್ಲಿ ಸೇರಿಸಿದ್ದಾರೆ. ಈ ವಿಷಯವನ್ನು

ಕಲಿಸುವ ಉದ್ದಿಶ್ಯಗಳನ್ನು **ಝುಕೀರ ಸಮಿತಿಯವರು** ಕೆಳಗಿನಂತೆ ವಿವರಿಸಿದ್ದಾರೆ:—(೧) ಮಾನವ ಜಾತಿಯ ಸಾಮಾನ್ಯ ಹಾಗು ಹಿಂದುಸ್ತಾನದ ವಿಶಿಷ್ಟ ಪ್ರಗತಿಯಲ್ಲಿ ವಿಶಾಲ ದೃಷ್ಟಿಯ ಆಸಕ್ತಿ ಬೆಳೆಯಬೇಕು. (೨) ತನ್ನ ಸಾಮಾಜಿಕ ಹಾಗು ಭೌಗೋಲಿಕ ವಾತಾವರಣದ ಸರಿಯಾದ ಕಲ್ಪನೆಯಾಗಬೇಕು; (೩) ತಾಯಿನಾಡ ಪ್ರೇಮ ಬೀಜವನ್ನು ಬಿತ್ತಬೇಕು; ಗತಕಾಲದಲ್ಲಿ ಆದರ ತೋರಿ ಪ್ರೇಮ, ಸತ್ಯ, ನ್ಯಾಯ, ಇವುಗಳ ಮೇಲೆ ನಿರ್ಮಾಣವಾದ ಸಂಯುಕ್ತ ಸಾಹಕಾರಿಕ ಸಮಾಜದ ಆಗರವು ಭೂತಕಾಲದಲ್ಲಿ ಆಗಲಿರುವದೆಂದು ನಂಬುವಂತಾಗಬೇಕು. (೪) ನಾಗರಿಕತೆಯ ಹಕ್ಕು ಬಾಧ್ಯತೆಗಳ ಅರಿವು ಉಂಟಾಗಬೇಕು. (೫) ವಿಶ್ವಾಸಿಗ ಬಂಧು ಹಾಗು ನಂಬಿಗ ನೆರೆಯುವ ಎಂದು ಮನುಷ್ಯನನ್ನು ರೂಪುಗೊಳಿಸುವ ವೈಯಕ್ತಿಕ ಹಾಗು ಸಾಮಾಜಿಕ ಸದ್ಗುಣಗಳು ನೆಲಸಬೇಕು. (೬) ಜಗತ್ತಿನ ಧರ್ಮದಲ್ಲಿ ಪ್ರೇಮ ಬೆಳೆಯಬೇಕು.

ಕೆಲಕಾಲ ಆಳಿ ಅಳಿದು ಹೋದ ಅರಸರ ಕತೆಗಳ ಸಂಗ್ರಹವು ಇತಿಹಾಸವೆಂದು ಸಾಮಾನ್ಯವಾಗಿ ರೂಢವಾಗಿದೆ. ಇದು ತಪ್ಪು ಕಲ್ಪನೆ. ಇತಿಹಾಸವು ಜನಜೀವನದ ವಾಸ್ತವ ಚಿತ್ರವು. ಒಂದು ಜನಾಂಗದ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗು ಸಂಸ್ಕೃತಿಕ ಜೀವನ ಸ್ಮೃತಿಗಳನ್ನು ಅದು ನಿರೂಪಿಸಬೇಕು. ಈ ಹೊಸ ದೃಷ್ಟಿಯಿಂದ ಪಠ್ಯಪುಸ್ತಕಗಳು ನಿರ್ಮಾಣವಾಗಬೇಕು. ಭಾರತದ ಚರಿತ್ರೆಯಂತೂ ಹೊಸದಾಗಿ ಬರೆಯಲ್ಪಡಬೇಕು. ಆಂಗ್ಲರ ಆಳಿಕೆ ಭಾರತದಲ್ಲಿದ್ದಾಗೆ ಬರೆಯಲ್ಪಟ್ಟ ಗ್ರಂಥಗಳಲ್ಲಿ ಜನತೆಯ ಪುರೋಭಿವೃದ್ಧಿಗೆ ಕಂಟಕವೆನಿಸಬಹುದಾದ ಅನೇಕ ಅಂಶಗಳು ಸೇರಿಕೊಂಡಿವೆ. ಅವೆಲ್ಲ ಈಗ ಪುನರ್ವಿಮರ್ಶೆಯಾಗುವುದು ಅಗತ್ಯ. ಗ್ರಂಥವಸ್ತುವಿನಲ್ಲಿ, ಅದರ ನಿರೂಪಣೆಯ ದೃಷ್ಟಿಯಲ್ಲಿ ಭಾರತೀಯತೆ ಬೆಳಗುವಂತೆ ಭಾರತದ ಇತಿಹಾಸವು ರಚಿತವಾಗಬೇಕು. ಅಂತಹ ಇತಿಹಾಸವನ್ನು ನಮ್ಮ ಮಕ್ಕಳು ಕಲಿಯಬೇಕು. ಮಾನವ ಪ್ರಗತಿಯ ಇತಿಹಾಸವನ್ನೂ ಅವರು ಕಲಿಯಬೇಕು. **ಡಾ. ಎಂ. ಸಿದ್ಧಲಿಂಗಯ್ಯ** ಅವರ ಶಬ್ದಗಳಲ್ಲಿ ಹೇಳುವದಾದರೆ:

"ಮಾನವ ಜೀವನದ ಆರಂಭವಾದಂದಿನಿಂದಲೂ ಏಕಪ್ರಕಾರವಾಗಿ ಒಂದು ಸಂತತಿಯ ಕಲೆ, ಸಂಸ್ಕೃತಿ, ಸಾಹಿತ್ಯ, ಸಂಪ್ರದಾಯ, ದೃಷ್ಟಿ ಧ್ಯೇಯ–ಇವೆಲ್ಲ ಇನ್ನೊಂದು ಸಂತತಿಗೆ ದೊರಕುತ್ತಲೇ ಬಂದಿವೆ; ನಮ್ಮ ಹಿಂದಿನವರ ಕಲಾಕೃತಿಗಳನ್ನೂ, ಸಾಹಿತ್ಯ ಸಂಸ್ಕೃತಿಗಳನ್ನೂ, ಸಂಘ ಸಂಸ್ಥೆಗಳನ್ನೂ ನೋಡಿ ಆ ಅನುಭವಗಳನ್ನು ನಾವೂ ಪಡೆಯುತ್ತೇವೆ; ನಮಗಿಂತ ವಯಸ್ಸಿನಲ್ಲಿ ಹಿರಿಯರಾದ ನಮ್ಮ ಸಮಕಾಲೀನರಿಂದಲೂ ಅವು ಗಳ ಪರಿಚಯವಾಗುತ್ತದೆ; ಈ ದೃಷ್ಟಿಯಲ್ಲಿ ನೋಡುವದಾದರೆ, ಮಾನ ವನು ಅಮರನಲ್ಲದಿದ್ದರೂ ಅವನ ಅನುಭವಗಳು ಮಾತ್ರ ಅಮರ ಗಂಗಾ ಪ್ರವಾಹವಾಗಿ ಹರಿದು ಬರುತ್ತಿವೆ."

ಭೂಗೋಲ ಅಭ್ಯಾಸವು ಮನೆಯಿಂದ ಆರಂಭವಾಗಬೇಕು. ನಾವು ಉಪಯೋಗಿಸುತ್ತಿರುವ ಅನೇಕ ಸಾಮಾನುಗಳ ಪರಿಚಯ ಮಾಡಿ ಕೊಡು ವಾಗ ದೇಶದ ಹಾಗು ವಿದೇಶಗಳ ಹುಟ್ಟುವಳಿ, ಅವುಗಳಿಗೆ ತಕ್ಕ ಅನು ಕೂಲತೆಗಳು, ಅವುಗಳ ಸಾಗಾಟ ಇತ್ಯಾದಿಗಳನ್ನು ತಿಳಿಯುವಾಗ ಜಗ ತ್ತಿನ ಭೂಗೋಲ ಪರಿಚಯವಾಗುವದು. ಮನೆಯ, ಶಾಲೆಯ, ಹಳ್ಳಿಯ ವಾತಾವರಣದಿಂದ ಭೂಗೋಲ ಅಭ್ಯಾಸವನ್ನು ಆರಂಭಿಸಿ, ಪ್ರಾಂತದ ನಾಡಿನ, ಜಗತ್ತಿನ ವಾತಾವರಣದ ಭೌಗೋಲಿಕ ಜ್ಞಾನಕ್ಕೆ ತೆರಳಬೇಕು. ಉಪಯುಕ್ತ ಜ್ಞಾನವನ್ನು ಅರಗಿಸಿಕೊಳ್ಳುವದಕ್ಕೆ ಸಹಾಯಕವಾಗುವಂತೆ ಅನೇಕ ಚಟುವಟಿಕೆಗಳನ್ನು ಉಪಯೋಗಿಸಬೇಕು. ಪ್ರತ್ಯಕ್ಷ ಜೀವನದ ನವನಾಗರಿಕತೆಯು ವ್ಯವಹರಿಸುವಂತೆ, ದೇಶದ ಆಡಳಿತದ ವಿವಿಧಾಂಗ ಗಳೆಲ್ಲ ಪರಿಚಿತವಾಗುವಂತೆ ಸಾಮುದಾಯಿಕ ಜೀವನದ ಏರ್ಪಾಡು ಆಗ ಬೇಕು. ಇದು ಪೌರನೀತಿಯ ಸಾಮಾಜಿಕ ದೃಷ್ಟಿ.

**ಸಾಮಾನ್ಯ ವಿಜ್ಞಾನ:**

**ಝಾಕೀರ ಸಮಿತಿಯವರು** ಕೆಳಗಿನಂತೆ ಉದ್ದಿಷ್ಟಗಳನ್ನು ಸ್ಪಷ್ಟೀ ಕರಿಸಿದ್ದಾರೆ:—

[೧] ಮಕ್ಕಳಲ್ಲಿ ನಿಸರ್ಗವನ್ನು ವಿಮರ್ಶಾತ್ಮಕ ಬುದ್ಧಿಯಿಂದ ನೋಡುವ ಪ್ರವೃತ್ತಿಯುಂಟಾಗಬೇಕು. [೨] ಸರಿಯಾಗಿ ನಿರೀಕ್ಷಣೆ

ಮಾಡುವ ಹಾಗು ಅನುಭವವನ್ನು ಪ್ರಯೋಗದಿಂದ ಪರೀಕ್ಷಿಸುವ ಚಟಗಳು ಮಕ್ಕಳಲ್ಲಿ ಉಂಟಾಗಬೇಕು. [೩] ನೈಸರ್ಗಿಕ ವಾತಾವರಣದಲ್ಲಿ ಕಂಡು ಬರುವ ಮಹತ್ವದ ಶಾಸ್ತ್ರೀಯ ತತ್ವಗಳನ್ನೂ, ವಿಜ್ಞಾನವು ಹೇಗೆ ಮಾನ ವನ ಸೇವೆ ಮಾಡಬಲ್ಲದೆಂಬದನ್ನೂ ತಿಳಿಯುವ ಸಾಮರ್ಥ್ಯವುಂಟಾಗಬೇಕು. [೪] ಪ್ರಸಿದ್ಧ ವೈಜ್ಞಾನಿಕರ ಜೀವನದಲ್ಲಿ ಸಂಭವಿಸಿದ ಮಹತ್ವದ ಘಟನೆ ಗಳನ್ನು ಅವರು ತಿಳಿಯುವಂತಾಗಬೇಕು. ಅವರು ಸತ್ಯ ಶೋಧನಕ್ಕಾಗಿ ಹೇಗೆ ತ್ಯಾಗ ಮಾಡಿದರೆಂಬುದೂ ಮಕ್ಕಳಿಗೆ ತಿಳಿಯಬೇಕು. ಸಾಮಾನ್ಯ ವಿಜ್ಞಾನದ ವಿಷಯ ಪತ್ರಿಕೆಯಲ್ಲಿ ಪ್ರಕೃತಿ ವಿಮರ್ಶೆ, ಸಸ್ಯಾದಿಗಳ ಜೀವನ. ಪ್ರಾಣಿಗಳ ಪರಿಚಯ, ಶರೀರ ರಚನೆ, ಆರೋಗ್ಯ, ರಸಾಯನ ಶಾಸ್ತ್ರ, ನಕ್ಷತ್ರಗಳ ಪರೀಕ್ಷಣ ಮೊದಲಾದ ಉಪವಿಷಯಗಳು ಸೇರಿವೆ.

**ಚಿತ್ರಕಲೆ:**

**ಝುಕೀರ ಸಮಿತಿಯವರು** ಕೆಳಗಿನ ಉದ್ದಿಶ್ಯಗಳನ್ನು ಸ್ಪಷ್ಟೀಕರಿಸಿ ದ್ದಾರೆ:

[೧] ಆಕಾರ ಹಾಗು ಬಣ್ಣಗಳನ್ನು ಸರಿಯಾಗಿ ನಿರೀಕ್ಷಿಸುವಂತೆ ಹಾಗು ಗುರುತಿಸುವಂತೆ ಕಣ್ಣು ತರಬೇತು ಹೊಂದಬೇಕು ]೨] ಆಕೃತಿ ಗಳನ್ನು ನೆನೆಪಿನಿಂದ ತೆಗೆಯಬೇಕು. [೩] ನಿಸರ್ಗ ಹಾಗು ಕಲೆ ಇವು ಗಳಲ್ಲಿ ಜ್ಞಾನ ಹಾಗು ಸೌಂದರ್ಯಾಭಿರುಚಿ ಬೆಳೆಯಬೇಕು. ]೪] ಚೆಂದ ವಾದ ಸುಳುವು ತೆಗೆಯುವ ಹಾಗು ಅಲಂಕರಿಸುವ ಸಾಮರ್ಥ್ಯವನ್ನು ಬೆಳೆ ಯಿಸಬೇಕು. [೫] ವಸ್ತು ರಚನೆಯ ಚಿತ್ರಗಳನ್ನು ತೆಗೆಯುವ ರೂಢಿ ಯಾಗಬೇಕು. [೬] ಸುಳುವು, ಸ್ಕೇಲಡ್ರಾಯಿಂಗ, ಗ್ರಾಫುಗಳನ್ನು ತೆಗೆ ಯಲು ಬರಬೇಕು.

ಚಿತ್ರಕಲೆಯು ಒಂದು ಪ್ರತ್ಯೇಕ ವಿಷಯವೆಂದು ವೇಳಾಪತ್ರಕದಲ್ಲಿ ತೋರಿಸಿಯೇ ಕಲಿಸಬೇಕೆಂದಿಲ್ಲ. ಮೂಲ ಉದ್ಯೋಗದ ಸಾಧನ ಸಾಮಗ್ರಿಗಳ ಆಕೃತಿಗಳನ್ನೂ, ಹಳ್ಳಿಯಲ್ಲಿ ದೊರೆಯುವ ಮಣ್ಣು ಬಣ್ಣ ಗಳನ್ನು ಬಳಸುವ ಕೈಕೆಲಸದ ಚಟುವಟಿಕೆಗಳನ್ನೂ, ಶಾಲೆಯ ಸಮಾ ರಂಭದ ಸಮಯದಲ್ಲಿ ಅಲಂಕರಿಸುವ ಚಟುವಟಿಕೆಗಳನ್ನೂ ಬಹುವಾಗಿ

ಕೊಟ್ಟು, ಚಿತ್ರಕಲೆ, ಮೂಲ ಉದ್ಯೋಗ ಹಾಗು ಕೈಕೆಲಸ ಇವುಗಳ ಪರಸ್ಪರ ಸಂಬಂಧೀಕರಣದ ಸನ್ನಿವೇಶಗಳನ್ನು ಹೆಣೆಯಬೇಕು; ಎಂದರೆ, ಚಿತ್ರಕಲೆಗೆ ಸ್ವಾಭಾವಿಕತೆ ಹಾಗು ವ್ಯಾಪಕತೆ ದೊರೆಯುವದು.

**ಸಂಗೀತ:**

ಭಾರತೀಯರ ತತ್ತ್ವಜ್ಞಾನದಲ್ಲಿ ಸಂಗೀತಕ್ಕೆ ಮಹತ್ವದ ಸ್ಥಾನವಿದೆ. ಶಿವ, ಕೃಷ್ಣ, ಸರಸ್ವತಿ ಮೊದಲಾದವರ ಕೈಗಳಲ್ಲಿ ಸಂಗೀತ ಸಾಹಿತ್ಯಗಳನ್ನು ಕೊಟ್ಟು ಚಿತ್ರ ತೋರಿಸಿದ್ದಾರೆ. ಸಂಗೀತವು ಕೇವಲ ಮನರಂಜನೆಯ ಸಾಧನವಲ್ಲ; ದೇವ ಸಾನಿಧ್ಯವನ್ನು ಹೊಂದುವ ಸಾಧನವು. ಭಕ್ತಿ ರಸವು ಉಕ್ಕೇರಿ ಬಂದಾಗ ಹೆಣೆಯಲ್ಪಟ್ಟ ಪುರಂದರದಾಸ-ತುಕಾರಾಮ ಮೊದಲಾದವರ ಹಾಡುಗಳು ಮನವನ್ನು ತಣಿಸುತ್ತವೆ. ಕಷ್ಟಗಳನ್ನು ಮರೆಯಿಸುತ್ತವೆ, ಶಾಂತ ವಾತಾವರಣವನ್ನು ನಿರ್ಮಿಸುತ್ತವೆ, ಚಿತ್ತವನ್ನು ದೇವರಲ್ಲಿ ನಿಲ್ಲಿಸಿ ಏಕತ್ವವನ್ನು ತಂದುಕೊಡುತ್ತವೆ. ಸಂಗೀತವು ಉದಾತ್ತ ಧ್ಯೇಯದತ್ತ ಒಯ್ಯುವ ಸಾಧನವು; ಅದುವೇ ಅನುಭವಾಮೃತವು. "ತಾಳ,ಲಯ ಗೊತ್ತಿದ್ದವನು ಮೋಕ್ಷವನ್ನು ಹೊಂದಬಲ್ಲನು" ಎಂದು ಯಾಜ್ಞವಲ್ಕನು ಹೇಳಿರುವನು. ನಮ್ಮ ನಾಡಿನಲ್ಲಿ ಶಿಲ್ಪಿಕಲೆಯ ತುತ್ತತುದಿಯನ್ನು ಮುಟ್ಟಿದ ಕುರುಹುಗಳಾಗಿ ಮೆರೆಯುವ ದೇವ ಮಂದಿರಗಳು ಅವೆ. ಕೆಲವು ಗುಡಿಗಳ ಕಂಬಗಳನ್ನು ಬಾರಿಸಿದರೆ ಮಧುರ ಧ್ವನಿಯು ಹೊರಡುವದು. ಅಲ್ಲಿಯೂ ಸಂಗೀತವು ಹುದುಗಿದೆ. ಅವೆಲ್ಲ ಸಾಂಸ್ಕೃತಿಕ ಜೀವನದ ಕುರುಹುಗಳು. ತಾನಸೇನನು ಹಾಡಿದನೆಂದರೆ ಸಸ್ಯಾದಿಗಳು ತಲೆ ಹಾಕುತ್ತಿದ್ದವು, ಪ್ರಾಣಿಗಳು ಅಲ್ಲಿಯೇ ನಿಲ್ಲುತ್ತಿದ್ದವು, ಪ್ರಶಾಂತ ವಾತಾವರಣವು ನಿರ್ಮಾಣವಾಗುತ್ತಿತ್ತೆಂದು ಹೇಳುವರು. ಆಂಜನೇಯನು ಒಳ್ಳೇ ಸ್ವಾರಸ್ಯವಾಗಿ ಹಾಡುತ್ತಿದ್ದನಂತೆ. ಎಲ್ಲರಿಗೂ ಹಾಡಲಿಕ್ಕೆ ಬರುವದಿಲ್ಲ ಆದರೆ ಮಧುರ ಧ್ವನಿ ಕೇಳಿ ಎಲ್ಲರಿಗೂ ಆನಂದವಾಗುವದು. ಅಂತಹದೊಂದು ಅದ್ಭುತವಾದ ಶಕ್ತಿ ಎಲ್ಲರಲ್ಲಿಯೂ ಹುದುಗಿದೆ. ಅದು ಎಳೆ ವಯಸ್ಸಿನಲ್ಲಿ ಪ್ರಕಟವಾಗುವ ಸನ್ನಿವೇಶ ದೊರೆತರೆ ಒಳಿತು: ಪ್ರೌಢ ಜೀವನದಲ್ಲಿ ಅದು ಕಮರಿ ಹೋಗುವದು. ಮೂಲ ಶಿಕ್ಷಣದ ಅವಧಿಯಲ್ಲಿ ಸಂಗೀತಕ್ಕೆ ಸ್ಥಾನ ಕೊಡಲಾಗಿದೆ; ಸಂಗೀತವು ಶಾಸ್ತ್ರವೆಂದು ಆಳವಾಗಿ

ಅಭ್ಯಾಸ ಮಾಡಿಸುವದು ಸಾಧ್ಯವಿಲ್ಲ. ಅದು ಆನಂದವನ್ನು ನೀಡಿ ಜೀವನ ವನ್ನು ಸುಖಮಯವಾಗಿ ಮಾಡುವ ಕಲೆ ಎಂದು ಗಣ್ಯವಾಗುವದು. ಪ್ರತಿ ಯೊಬ್ಬನಿಗೂ ಎರಡು ಹಾಡುಗಳನ್ನು ಅನ್ನಲಿಕ್ಕೆ ಬಂದರೆ ಮಾತ್ರ ಎಲ್ಲ ರಿಗೂ ಮತದಾನದ ಹಕ್ಕು ದೊರೆಯುವ ಕಾಲ ಬಂದೀತೆಂದು **ಪ್ರೊ. ಸಾಂಬಮೂರ್ತಿ**ಯವರು ತಾ. ೧೪—೧೦—೪೪ನೇ ದಿನ ಸೇವಾಗ್ರಾಮ ದಲ್ಲಿ ಹೇಳಿದರು. ಪ್ರಜಾತಂತ್ರ ರಾಜ್ಯಾಂಗದಲ್ಲಿ ಸಂಗೀತಕ್ಕೆ ತಕ್ಕ ಸ್ಥಾನ ದೊರೆಯಬೇಕೆಂಬುದೇ ಅವರ ಹಿರಿಯಾಸೆ. "ಸಂಗೀತವೆಂದರೆ ಲಯ ಬದ್ಧತೆ, ಒಂದು ವ್ಯವಸ್ಥೆ. ಅದರ ಪ್ರಭಾವ ವಿದ್ಯುತ್ತಿನಂತೆ. ಅದು ಕ್ಷಣಮಾತ್ರದಲ್ಲಿ ಮನಸ್ಸನ್ನು ಶಾಂತಗೊಳಿಸುವದು. ನಮ್ಮ ಇತರ ಶಾಸ್ತ್ರಗಳಂತೆ ಸಂಗೀತವೂ ಬರಿ ಕೆಲವರ ಸೊತ್ತಾಗಿ ಕುಳಿತಿದೆ. ರಾಷ್ಟ್ರೀಯ ಗೀತಗಳನ್ನು ಶುದ್ಧವಾಗಿ ಎಲ್ಲರಿಗೂ ಅನ್ನಲು ಬರಬೇ ಕೆಂದು ನನಗೆ ಅನಿಸುತ್ತದೆ. ಇದಕ್ಕೋಸ್ಕರ ಪ್ರತಿ ಕಾಂಗ್ರೆಸ ಅಧಿ ವೇಶನಕ್ಕೂ ಪ್ರತಿ ಪರಿಷತ್ತಿಗೂ ಉದ್ದಾಮ ಸಂಗೀತಜ್ಞರನ್ನು ಬರ ಮಾಡಿಕೊಂಡು ಸಂಗೀತವನ್ನು ಕಲಿಸುವಂತೆ ಮಾಡಬೇಕೆನ್ನುವೆ."

**ಗಾಂಧೀಜಿ.**

ರಾಷ್ಟ್ರೀಯ ಗೀತೆಗಳನ್ನು ಎಲ್ಲರೂ ಸುಶ್ರಾವ್ಯವಾಗಿ ಹಾಡಲು ಕಲಿಯ ಬೇಕೆಂಬುದು ಗಾಂಧೀಜಿಯವರ ಮನೀಷೆಯಾಗಿತ್ತು. ಅದಕ್ಕಾಗಿಯೇ ಸಾಮೂಹಿಕವಾಗಿ ಹಾಡುವ ಕವನಗಳಿಗೆ ಮೂಲಶಿಕ್ಷಣ ಯೋಜನೆಯಲ್ಲಿ ಮಹತ್ವದ ಸ್ಥಾನವನ್ನು ಕೊಡಲಾಗಿದೆ. ಸಾಭಿನಯ ಗೀತೆಗಳು, ದಾಸರ ಪದಗಳು, ವಚನಗಳು, ಹಳ್ಳಿಯ ಹಾಡುಗಳು, ನಾಡಗೀತೆಗಳು, ಇವು ಗಳನ್ನೇ ಹೆಚ್ಚಾಗಿ ಮಕ್ಕಳಿಗೆ ಕಲಿಸಬೇಕು. ತಾಳ, ಲಯ, ರಾಗಗಳಿಗೆ ಹೊಂದಿಕೆಯಾಗುವಂತೆ ಅನ್ನಲಿಕ್ಕೆ ಮಕ್ಕಳಿಗೆ ರೂಢಿಯಾಗಬೇಕು. ಇದಕ್ಕೆ ಅನುಕೂಲವಾಗುವ ಹಾಡುಗಳ ಹೊತ್ತಿಗೆಗಳೂ ನಿರ್ಮಾಣವಾಗಬೇಕು.

**ಹಿಂದುಸ್ಥಾನಿ:**

**ಪ್ರಾಥಮಿಕ** ೫ನೇ, ೬ನೇ, ೭ನೇ ವರ್ಗಗಳಲ್ಲಿ ಹಿಂದುಸ್ಥಾನಿ ಭಾಷೆ ಯನ್ನು ಕಲಿಸಲಾಗುವದು. ಪರ ಪ್ರಾಂತದ ಕೂಡ ಬಳಕೆ ಮಾಡಲು

ಒಂದು ರಾಷ್ಟ್ರಭಾಷೆಯು ನಮಗೆ ಬೇಡವೇ? ತಾ. ೪—೪—೪೮ನೇ ದಿನ ದ. ಭಾ. ವಿದ್ಯಾಧಿಕಾರಿಗಳಾದ ಶ್ರೀ. ಎ.ಎನ್.ಸಾನೆ ಅವರು ಸಕಾಲ ಸಕಲರಿಗೂ ಎಚ್ಚರಿಕೆ ಕೊಟ್ಟರು. ಅವರ ಅಂದಿನ ಭಾಷಣದಲ್ಲಿ ಕೆಲ ಮಾತುಗಳನ್ನು ಇಲ್ಲಿ ಉದಾಹರಿಸುವಾ. "ನಿಕಟ ಭವಿಷ್ಯದಲ್ಲಿ ಹಿಂದುಸ್ತಾನಿಯು ಈ ದೇಶದ ರಾಷ್ಟ್ರಭಾಷೆಯಾಗಿಯೇ ತೀರುವುದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವು ಮಾತೃ ಭಾಷೆಯ ಮುಖಾಂತರ ಸಾಗಿದಾಗ್ಯೂ ನಿಕಟ ಭವಿಷ್ಯದಲ್ಲಿ ಉಚ್ಚ ಶಿಕ್ಷಣವು ಹಿಂದುಸ್ತಾನಿಯ ಮುಖಾಂತರ ಕೊಡಲ್ಪಡುವುದೆಂಬುದರಲ್ಲಿಯೂ ಯಾವ ಸಂದೇಹವೂ ಇಲ್ಲ....ಈ ಭಾಷೆಯನ್ನು ನಾವು ಕಲಿತಲ್ಲಿ ನಮಗೆ ಇದರ ಉಚ್ಚ ತರಗತಿಯ ಸಾಹಿತ್ಯದ ಬಾಗಿಲವೂ ತೆರೆಯುವದು. ಇದಕ್ಕೂ ಹೆಚ್ಚಾಗಿ ನಮ್ಮ ನಾಡಿನ ಐಕ್ಯದ ದೃಷ್ಟಿಯಿಂದ ಈ ಭಾಷೆಯ ಲಾಭವು ನಮಗೆ ದೊರೆಯುವುದು ಹೆಚ್ಚು ಅಗತ್ಯವಿದೆಯೆಂದು ನನಗೆ ತೋರುತ್ತದೆ." ಮೂಲ ಶಿಕ್ಷಣವು ನಾಗರಿಕತೆಯ ಶಿಕ್ಷಣವು. ನವ ನಾಗರಿಕನಾಗುವಷ್ಟರಲ್ಲಿ ಇಡಿ ರಾಷ್ಟ್ರವನ್ನು ಒಂದು ಭಾಷೆಯಿಂದ ಹೆಣೆಯುವ ಕಾರ್ಯವನ್ನು ಪ್ರತಿಯೊಬ್ಬ ಬಾಲಕನು ಮಾಡಬೇಕಾಗಿದೆ. ಅದಕ್ಕಾಗಿ ಹಿಂದುಸ್ತಾನಿಯನ್ನು ಅಭ್ಯಾಸ ಪತ್ರಿಕೆಯಲ್ಲಿ ಸೇರಿಸಲಾಗಿದೆ. ವೇಳಾ ಪತ್ರಕದಲ್ಲಿ ಹಿಂದುಸ್ತಾನಿ ಮತ್ತು ಸಂಗೀತ ಇವುಗಳಿಗೆ ಪ್ರತ್ಯೇಕವಾಗಿ ಸಮಯ ಕೊಡಬೇಕಾಗುವದು.

"ಸ್ಥೂಲವಾಗಿ ೫ನೇ ಇಯತ್ತೆಯ ವರೆಗೆ ಬಾಲಕ ಬಾಲಿಕೆಯರು ಅಭ್ಯಾಸ ಪತ್ರಿಕೆಯು ಒಂದೇ. ೪ನೇ, ೫ನೇ ವರ್ಗಗಳಲ್ಲಿ ಸಾಮಾನ್ಯ ವಿಜ್ಞಾನದಲ್ಲಿ ಬಾಲಕಿಯರಿಗಾಗಿ ಗೃಹವಿಜ್ಞಾನವನ್ನು ಸೇರಿಸಬೇಕು. ೬ನೇ, ೭ನೇ ವರ್ಗಗಳಲ್ಲಿ ಮೂಲ ಉದ್ಯೋಗದ ಬದಲು ಗೃಹವಿಜ್ಞಾನದ ಹೆಚ್ಚಿನ ವಿಷಯವನ್ನು ಕಲಿಯಲು ಬಾಲಿಕೆಯರಿಗೆ ಅನುವು ಕೊಡಲಾಗುವದು."

**ಝುಕೀರ ವರದಿ.**

ಪ್ರತಿಯೊಂದು ವಿಷಯವನ್ನು ಯಾಕೆ ಸೇರಿಸಿದೆ ಎಂಬುದನ್ನು ಶಿಕ್ಷಕರು ಚನ್ನಾಗಿ ತಿಳಿದುಕೊಂಡು ತಮ್ಮ ಕೆಲಸವನ್ನು ಸಾಗಿಸುತ್ತ ಹೋಗಬೇಕು.

## ೩. ಶಿಸ್ತು

ಶಿಸ್ತು ಉತ್ತಮ ಶಾಲೆಯ ಲಕ್ಷಣವು. ಶಾಲೆಯು ಒಂದು ವ್ಯವಸ್ಥಿತ ಸಂಸ್ಥೆ. ಶಾಲೆಯ ಪ್ರತಿಷ್ಠೆಯನ್ನು ಶಾಲೆಯಲ್ಲಿ ಕಂಡುಬರುವ ಶಿಸ್ತಿನಿಂದಲೇ ಅಳೆಯಬಹುದು. ಮಕ್ಕಳು ಓದುವಾಗ, ಬರೆಯುವಾಗ, ಆಡುವಾಗ, ಮಾಡುವಾಗ ಶಿಸ್ತು ಒಡಮೂಡಬೇಕು. ಮಕ್ಕಳು ಗೊಂದಲ ಮಾಡದೆ ಓದುತ್ತಿದ್ದರೆ, ಏನೊಂದು ಕೆಲಸ ಮಾಡುತ್ತಿದ್ದರೆ ಅವರಲ್ಲಿ ಶಿಸ್ತು ಉಂಟಾಗಿದೆಯೆಂದು ಹೇಳುವ ರೂಢಿಯುಂಟು. ಶಾಂತತೆ ಶಿಸ್ತಿನ ಒಂದು ಲಕ್ಷಣ; ಆದರೆ ಶಾಲೆಯಲ್ಲಿ ಬೇಕಾದುದು ಸ್ಮಶಾನ ಶಾಂತತೆಯಲ್ಲ. ನಿರ್ಜೀವಿಗಳ ನಿವಾಸಸ್ಥಾನದ ಶಾಂತತೆಯು ಬೇಕಿಲ್ಲ. ಸಜೀವಿಗಳ ಏಕಾಗ್ರತೆಯ ಶಾಂತತೆಯು ಬೇಕು.

**ಶಿಸ್ತು ಉಂಟಾಗುವ ಬಗೆ:**

ಶಿಕ್ಷಕನ ಕಾರ್ಯವು ಯಶಸ್ವಿಯಾಗಬೇಕಾದರೆ ವರ್ಗದಲ್ಲಿ ಶಿಸ್ತು ಬೇಕು. ವರ್ಗದ ಶಿಸ್ತಿನ ಮೇಲಿಂದ ಶಿಕ್ಷಕನ ಯೋಗ್ಯತೆಯನ್ನು ತಿಳಿಸಬಹುದು. ಆದರೆ ಶಿಸ್ತನ್ನು ಕಾಯಲು ಶಿಕ್ಷಕರು ಏನು ಮಾಡುವರು? ಮಾತಾಡಬಾರದು, ಗೊಂದಲ ಹಾಕಬಾರದು, ಸುಮ್ಮನೆ ಕೂಡ್ರಿ ಎಂದು ಮುಂತಾಗಿ ಮಕ್ಕಳಿಗೆ ಹುಕುಮುಗಳನ್ನು ಒಬ್ಬ ಶಿಕ್ಷಕನು ಕೊಡಬಹುದು. ಕೈ ಚಪ್ಪಾಳೆ ಹಾಕಿ, ಛಡಿ ಮೇಜಿಗೆ ಬಡಿದು ಶಾಂತತೆಯನ್ನು ಕಾಯಲು ಯತ್ನಿಸುವ ಇನ್ನೊಬ್ಬ ಶಿಕ್ಷಕನನ್ನು ನೋಡಬಹುದು. ಈಗ ಮಹತ್ವದ ಸಂಗತಿಯನ್ನು ಹೇಳುತ್ತಿದ್ದೇನೆ, ಇದು ಪರೀಕ್ಷೆಯಲ್ಲಿ ಸಹಾಯಕವಾಗುವ ವಿಷಯ ಎಂದು ಹೇಳಿ ಪಾಠ ಸಾಗಿಸುತ್ತಿರುವ ಬೇರೊಬ್ಬ ಶಿಕ್ಷಕನನ್ನು ನೀವು ಕಾಣಬಹುದು. ಆದರೆ ಇವೆಲ್ಲ ನಿಜವಾದ ಶಿಸ್ತಿನ ಲಕ್ಷಣಗಳಲ್ಲ. ಹೀಗೆ ಮಾಡಿದಲ್ಲಿ ತೋರಿಕೆಯ ಶಿಸ್ತು ಉಂಟಾಗಬಹುದು. ಮಕ್ಕಳು ಕೈ ಕಟ್ಟಿಕೊಂಡು ಸುಮ್ಮನೆ ಕೂಡ್ರಬಹುದು. ಶಿಕ್ಷಕನನ್ನೇ ಮಿಕಿಮಿಕಿ ನೋಡಬಹುದು. ವಿಷಯ ಕಲಿಯುತ್ತಿರುವಂತೆ ನಟಿಸಬಹುದು. ಆದರೆ ಮಗುವಿನ

ಕಣ್ಣು ಒಂದು ಕಡೆಗೆ ಅವನ ಹೃದಯ ಮತ್ತೊಂದು ಕಡೆಗೆ, ಅವನು ನೋಡುವದೊಂದು ತಿಳಿಯುವದು ಮತ್ತೊಂದು. ಹೀಗೆ ಪರಿಣಮಿಸಿದರೆ ಶಿಕ್ಷಣವು ಹೇಗೆ ಫಲಪ್ರದವಾದೀತು? ನಡೆಯಲ್ಲಿ ನುಡಿಯಲ್ಲಿ ಹೃದಯದ ಮಿಲನವಿರಬೇಕು. ಎಂದರೆ ತೋರಿಕೆ ಇರುವಿಕೆಗಳೊಂದಾಗಿ ಚಲಿಸುವವು. ಈ ಸನ್ನಿವೇಶದಲ್ಲಿ ಮಾತ್ರ ನಿಜವಾದ ಶಿಸ್ತೇ ಹೊರ ಸೂಸುವದು. ನಿಜವಾದ ಶಿಸ್ತು ಅಂತರಿಕವಾದದು; ಅತಃ ಸ್ಫೂರ್ತಿಯೇ ಅದರ ಸೆಲೆ. ಇದಕ್ಕೆ ಸ್ವಯಂ ಶಿಸ್ತು (Self discipline) ಎಂದು ಆಧುನಿಕ ಶಿಕ್ಷಣ ತಜ್ಞರು ಹೇಳುವರು. ಆದರೆ ಇಂತಹ ಶಿಸ್ತು ಯಾವ ವಾತಾವರಣದಲ್ಲಿ ಉಂಟಾಗಬಹುದು? ಶಿಕ್ಷಕನ ವ್ಯಕ್ತಿತ್ವವು ಹೇಗೆ ಕಾರಣೀಭೂತವಾಗಬಹುದು? ಮಕ್ಕಳ ಚಟುವಟಿಕೆಗಳು ಹೇಗೆ ಸಹಾಯಕವಾಗಬಲ್ಲವು? ಎಂದು ಮುಂತಾಗಿ ವಿಚಾರಿಸಬೇಕಾಗುವದು. ಈ ಮೂರು ಸಂಗತಿಗಳ ಮೇಲೆ ಸ್ವಯಂ ಶಿಸ್ತು ಅವಲಂಬಿಸಿದೆ.

ಹಳೆಯ ಶಿಕ್ಷಣ ಕ್ರಮದಲ್ಲಿ ಶಿಕ್ಷಕನು ಬೆತ್ತದ ಬೆದರಿಕೆಯಿಂದಲೊ, ಕಿಡಿಗಣ್ಣಿನ ನೋಟದಿಂದಲೋ ಶಾಲೆಯಲ್ಲಿ ಶಿಸ್ತನ್ನು ಕಾಯುತ್ತಿದ್ದನು. ಆದರೆ ಭಯೋತ್ಪಾದಕ ವಾತಾವರಣದಲ್ಲಿ ಮಗುವಿನ ಸ್ವಪ್ರಕಾಶನಕ್ಕೆ ಅವಕಾಶ ದೊರೆಯುವುದಿಲ್ಲ. ಅದಕ್ಕಾಗಿ "ಮಗುವು ಮಗುವಾಗಿಯೇ ಬೆಳೆಯಲಿ' ಎಂದು ರೂಸೋ ಕೂಗಿದ. "ಪ್ರೇಮವು ಶಿಸ್ತಿಗೆ ತಳಹದಿ, ಅದುವೇ ಶಿಸ್ತನ್ನು ನಿಯಂತ್ರಿಸುವದು" ಎಂದು ಪೇಸ್ಟಾಲಜಿ ಹೇಳಿದನು. ಆಧುನಿಕ ಶಿಕ್ಷಣ ತಜ್ಞರೂ ಆ ಮಾತುಗಳನ್ನು ಒಪ್ಪಿದರು; ಅದರೆ ಶಾಲೆಯ ವಾತಾವರಣವು ಸಂಪೂರ್ಣ ಬದಲಾಗಲಿಲ್ಲ. ಶಿಕ್ಷಕನು ಈ ದಿಸೆಯಲ್ಲಿ ನಂಬಿ ಮುಂದಡಿ ಇಡಲಿಲ್ಲ. ಮೂಲ ಶಿಕ್ಷಣವು ಶಾಲೆಯಲ್ಲಿ ಪ್ರೇಮಮಯ ವಾತಾವರಣವನ್ನು ತುಂಬುವದು. ಗುರುಗಳು ಮಕ್ಕಳ ಹಿರಿಯ ಗೆಳೆಯರಾಗಿ ದುಡಿದು, ಮಕ್ಕಳ ವಿಶ್ವಾಸಕ್ಕೆ ಪಾತ್ರರಾಗುವರು. ಗುರುಗಳ ಆದರ್ಶ ಜೀವನವೇ ಅವರ ವ್ಯಕ್ತಿತ್ವದ ಪ್ರತೀಕವಾಗಿ ಪರಿಣಮಿಸುವದು. ಮಕ್ಕಳ ಆಸಕ್ತಿ ಹುಟ್ಟಿ ಬೆಳೆಯುವದು. ಅವರ ಸ್ವಯಂಸ್ಫೂರ್ತಿ ಅರಳುವದು. ಶಾಸ್ತ್ರೀಯವಾಗಿ ಚಟವಟಿಕೆಗಳನ್ನು ಮಾಡುವಾಗ ಅವರಲ್ಲಿ ಜ್ಞಾನಾರ್ಜನೆಯ ಲಾಲಸೆಯು ತಾನಾಗಿಯೇ ಹುಟ್ಟುವದು.

ಶೋಧಕ ಪ್ರವೃತ್ತಿಯು ಸ್ಫುಟವಾದಂತೆ ಅವರಲ್ಲಿ ಆತ್ಮಾನಂದವುಂಟಾಗುವದು. ಇಂತಹ ಒಂದು ಸನ್ನಿವೇಶದಲ್ಲಿ ಉಂಟಾದುದೇ ನಿಜವಾದ ಶಿಸ್ತು. ಅಲ್ಲಿ ಕಾರ್ಯತತ್ಪರತೆಯಿದೆ, ಇನ್ನೊಬ್ಬನ ಒತ್ತಾಯವಿಲ್ಲ, ತಲ್ಲೀನತೆಯು ಪ್ರಾಮುಖ್ಯವಾಗಿದೆ. ಅದರಿಂದ ಸ್ವೈಜವಾದ ಶಿಸ್ತು ಕೆಲಸದ ಮುಖಾಂತರವೇ ಹೊರಹೊಮ್ಮುವದು. ಕಿವಿಯಿಂದ ಕೇಳಿ ಕಲಿಯುವದಕ್ಕೆ ಬೆತ್ತವು ಸಹಾಯ ನೀಡಿತು. ಕೈಯಿಂದ ಮಾಡಿ ಕಲಿಯುವದಕ್ಕೆ ಬೆತ್ತವು ಬೇಡವೆನಿಸಿತು. ಇದುವೇ ಹಳೆ ಹೊಸ ವಿಚಾರಗಳ ಶಿಕ್ಷಣದ ತಿರುಳು. ಕ್ರಿಯಾತ್ಮಕ ಚಟುವಟಿಕೆಗಳ ಮುಖಾಂತರ ಹುಟ್ಟುವ ಸಹಜ ಶಿಸ್ತಿಗೆ ಕ್ರಿಯಾತ್ಮಕ ಶಿಸ್ತು (Creative discipline) ಎಂದು ರೆ. ರಾಯಬರ್ನ್ ಅವರು ಕರೆದಿದ್ದಾರೆ. ಮೂಲ ಶಿಕ್ಷಣವು ಈ ಮಾತನ್ನೇ ಹೇಳುವದು.

ಶಿಸ್ತು ಎಂದರೆ ಸಾಮಾನ್ಯವಾಗಿ ಅಚ್ಚುಕಟ್ಟುತನ, ನಿಯಮಿತತನ, ಕಾರ್ಯದಕ್ಷತೆ ಮೊದಲಾದ ಸದ್ಗುಣಗಳ ಸಮೂಹವೆಂದು ಹೇಳಬಹುದು. ವ್ಯಕ್ತಿಯ ದೇಹ–ಮನ–ನೀತಿಗಳ ಸಮವಾಯ ವಿಕಾಸದಿಂದ ಮಾತ್ರ ವ್ಯಕ್ತಿಯಲ್ಲಿ ಸ್ವಶಿಸ್ತು (self-control) ನೆಲಗೊಳ್ಳುವದು. "ಶಿಸ್ತು ಸ್ವನಿಯಂತ್ರಣದ ಚೇತನ ಸ್ವರೂಪವಾಗಬೇಕಾದರೆ ಮತ್ತು ಸಾಮಾಜಿಕ ವಿವೇಕ (Social Conscience) ವನ್ನು ಸ್ಫುಟಗೊಳಿಸುವದಾದರೆ, ಅದು ಕ್ರಿಯಾಪರ ಇರಬೇಕು. ನಿಷೇಧಪರ ಇರಕೂಡದು." ರೆ. ರಾಯಬರ್ನ್. ಯಾವುದನ್ನು ಮಾಡಬಾರದು ಎಂದು ಹೇಳುವುದಕ್ಕಿಂತ ಏನು ಮಾಡಬೇಕೆಂಬುದನ್ನಷ್ಟೇ ತಿಳಿಸಿ ಕೊಡುವುದು ಒಳಿತು. ಇದೇ ಮೂಲ ಶಿಕ್ಷಣದ ದೃಷ್ಟಿಕೋನವು.

**ಶಿಕ್ಷೆಗಳು** (Punishments):

ಮೂಲ ಶಿಕ್ಷಣ ಸಾಲೆಗಳಲ್ಲಿ ಶಿಕ್ಷೆಗಳು ಅವೆಯೋ ಇಲ್ಲವೋ ಎಂಬುದನ್ನು ವಿವೇಚಿಸುವ. ಸಮಾಜದಲ್ಲಿ ತಪ್ಪುಗಾರರಿಗೆ ಶಿಕ್ಷೆಗಳನ್ನು ವಿಧಿಸುವ ರೂಢಿಯುಂಟು. ಶಾಲೆಯು ಮಕ್ಕಳ ಸಮಾಜದ ಸಂಸ್ಥೆ. ಕೆಲವೊಂದು ನಿಯಮಗಳು ಈ ಸಂಸ್ಥೆಗೂ ಬೇಕು. ಆದರೆ ನಿಯಮಗಳನ್ನು ಮುರಿದವರಿಗೆ ಶಿಕ್ಷೆ ವಿಧಿಸಬೇಕೋ ಬೇಡವೊ ಎಂಬುದು ಒಂದು ಸಮಸ್ಯೆ. ಎಳೆಯ

ಮಕ್ಕಳಿಗೆ ಯಾವದೇ ತರದ ಶಿಕ್ಷೆ ವಿಧಿಸುವದು ಕೃತಕವೂ, ಅನಾವಶ್ಯ ಕವೂ ಎಂದು ರೂಸೋ ಮತ್ತು ಹರ್ಬಾರ್ಟ್ ಸ್ಪೆನ್ಸರ ಪ್ರತಿಪಾದಿಸಿದರು. ಅವರು ನಿಸರ್ಗ ಪದ್ಧತಿಯಲ್ಲಿ ನಂಬಿಗೆಯುಳ್ಳವರು; ಆದರೆ ನಿಸರ್ಗ ಪದ್ಧತಿ ಯಿಂದ ಮಕ್ಕಳು ತೀವ್ರ ಸುಧಾರಿಸುವದಿಲ್ಲ. ಸಣ್ಣವರ ತಪ್ಪುಗಳನ್ನು ಕೂಡಲೆ ತಿದ್ದುವದು ಅಗತ್ಯ ಎಂದು ಕೆಲವರು ಪ್ರತಿಪಾದಿಸಿದರು. ಮಗು ವಾಗಿ ನಿಯಮ ಪಾಲಿಸದಿದ್ದರೆ, ದೊಡ್ಡವನಾದ ಮೇಲೆ ಪಾಲಿಸುವದೆಂತು ಎಂದು ಬ್ರೀ ಅವರು ವಾದ ಹಾಕಿದರು. ಹಾಗಾದರೆ ಶಿಕ್ಷೆಗಳನ್ನು ಕೊಡುವ ಮುಖ್ಯ ಉದ್ದಿಶ್ಯಗಳು ಯಾವವು?

ಉದ್ದಿಶ್ಯಗಳು ಮುಖ್ಯವಾಗಿ ಎರಡು ಇವೆ. (೧) ತಪ್ಪುಗಾರನ ಅದೇ ತಪ್ಪನ್ನು ಇನ್ನೊಮ್ಮೆ ಮಾಡಬಾರದು. (೨) ತಪ್ಪುಗಾರನಿಗೆಆದ ಶಿಕ್ಷೆಯನ್ನು ಕಂಡು ಇನ್ನೊಬ್ಬನು ಅದೇ ತಪ್ಪನ್ನು ಮಾಡಬಾರದು.

ಈ ಸಂಗತಿಗಳನ್ನು ಗಮನಿಸಿದರೆ ಶಿಕ್ಷೆಗಳು ಬೇಕೆಂದು ಹೇಳ ಬಹುದು. ಆದರೆ ಶಿಕ್ಷೆಯ ವಿಧಾನಗಳನ್ನು ಲಕ್ಷಿಸಿದರೆ, ಶಿಕ್ಷೆಗೆ ಸ್ಥಾನವೇ ಇರಕೂಡದೆಂಬ ನಿರ್ಣಯಕ್ಕೆ ಮುಟ್ಟುತ್ತೇವೆ.

**ಶಿಕ್ಷಾ ವಿಧಾನಗಳು:**

ಎಚ್ಚರಿಕೆ ಅಥವಾ ನಿಂದೆ, ಕೆಳನಂಬರು ಕೊಡುವದು, ಗುಣಗಳನು ಕಡಿಮೆ ಮಾಡುವದು, ಶಾಲೆ ಬಿಟ್ಟನಂತರ ಹಿಡಿದು ಹಾಕುವದು, ವಿಶ್ರಾಂತಿ ಯ ಸಮಯದಲ್ಲಿ ಕೆಲಸ ಹಚ್ಚುವದು, ಆಟದಿಂದ ದೂರಿಡುವದು, ದಂಡ ಮಾಡುವದು, ಕೆಲವೊಂದು ಅವಧಿಯ ವರೆಗೆ ಶಾಲೆಯಿಂದ ಹೊರಗೆ ಹಾಕುವದು, ಕಿವಿ ಹಿಂಡುವದು, ಬೆತ್ತದಿಂದ ಬಡಿಯುವದು, ಕೈಯಿಂದ ಗುದ್ದುವದು, ಒಂಟಗಾಲಿನಿಂದ ನಿಲ್ಲಿಸುವದು, ಬಿಸಿಲಲ್ಲಿ ನಿಲ್ಲಿಸುವದು ಇತ್ಯಾದಿ.

ಇವೆಲ್ಲ ಹಿಂಸಾತ್ಮಕ ವಿಧಾನಗಳು. ಮಗುವಿನ ಸ್ವಾಭಾವಿಕ ಬೆಳ ವಣಿಗೆಗೆ ಆತಂಕಗಳು. ಅವನ ಮನಸ್ಸಿಗೆ ಬಲವಾಗಿ ನೋವನ್ನುಂಟು ಮಾಡುವ ಕ್ರಿಯೆಗಳು. ಸ್ವಾತಂತ್ರ್ಯವನ್ನು ಹರಣ ಮಾಡುವ ಯುಕ್ತಿ ಗಳು; ಒಲವು ನಿಲವುಗಳನ್ನು ಕಮರಿಸುವ ಸಾಧನಗಳು. ಪ್ರೌಢನ ಅಳವಿನಲ್ಲಿ

ಮಗುವನ್ನು ತರುವ ದುರಾಸೆಯ ದುಃಶ್ಚಿನ್ಹಗಳು. ಮಗುವನ್ನು ಪಶುವಿ ನಂತೆ ನಡೆಸಿಕೊಳ್ಳುವ ಕ್ರೂರ ಕೃತಿಗಳು. "ಮೂಲ ಶಿಕ್ಷಣವು ಅಹಿಂಸಾ ತತ್ತ್ವದ ಪ್ರಯೋಗವು" ಎಂದು **ಶ್ರೀ. ಕಿಶೋರಲಾಲ ಮಶ್ರುವಾಲಾ** ಅವರು ಹೇಳಿರುವರು. ಅಂಹಿಸಾತ್ಮಕ ಸಮಾಜವನ್ನು ನಿರ್ಮಾಣ ಮಾಡುವುದರಲ್ಲಿಯೇ ಮೂಲ ಶ್ಕ್ಷಣದ ಮಹತಿಯುಂಟು. ಶಿಕ್ಷೆ ಗಳಿಗೆ ಸ್ಥಾನವೇ ಇರದಿದ್ದರೆ, ಸುವ್ಯವಸ್ಥೆ ಹೇಗೆ ನೆಲಸುವದು? ಮಕ್ಕಳ ನಡತೆ ಹೇಗೆ ಸುಧಾರಿಸುವದು? ಎಂದು ಕೇಳಬಹುದು. ಪ್ರವೃತ್ತಿಗಳ ಉದಾತ್ತೀಕರಣದಿಂದ ಮಕ್ಕಳ ನಡತೆ ತಿದ್ದಬೇಕೆಂದು ಹಿಂದೆ ವಿವೇಚಿಸಿದೆ. ಮಕ್ಕಳ ತಪ್ಪಿನ ಕಾರಣಗಳನ್ನು ಕಂಡು ಹಿಡಿಯಲು ಗುರುಗಳು ಯತ್ನಿಸ ಬೇಕು. ಅವರಿಗೆ ವಿವಿಧ ಚಟುವಟಿಕೆಗಳನ್ನು ಕಲ್ಪಿಸಿ ಕೊಡಬೇಕು. ಶಾಲೆಯ ಒಳ ಆಡಳಿತವನ್ನು ಮಕ್ಕಳೇ ನಿರ್ವಹಿಸುವಂತೆ ಹೊಣೆ ಹಂಚಿ ಕೊಡಬೇಕು. ಮಕ್ಕಳ ಮಂತ್ರಿಮಂಡಲವನ್ನು ರಚಿಸಿಕೊಟ್ಟು ಪ್ರಜಾ ತಂತ್ರದ ಪ್ರಯೋಗ ಮಾಡಬೇಕು. ಮಕ್ಕಳಿಗೆ ಶಾಲೆಯ ಕೆಲಸದಲ್ಲಿ ಆತ್ಮೀಯತೆ ಉಂಟಾಗುವದು. ಮಕ್ಕಳ ತಪ್ಪುಗಳನ್ನು ಪರೀಕ್ಷಿಸಿ ಪಾಲಕರ ಸಹಕಾರದಿಂದ ಅವುಗಳನ್ನು ತಿದ್ದಲು ಯತ್ನಿಸಬೇಕು. ಮಗುವನ್ನು ಆದರ ಪೂರ್ವಕವಾಗಿಯೂ, ಪ್ರಯೋಗ ಬುದ್ಧಿಯಿಂದಲೂ, ಆತ್ಮೀಯ ಭಾವನೆ ಯಿಂದಲೂ ಗುರುಗಳು ಕಂಡರೆ ಶಿಕ್ಷಾಸಮಸ್ಯೆಗಳು ತಂತಾನೇ ಮಾಯ ವಾಗುವವು. ಹೀಗೆ ಮಾಡಿದಲ್ಲಿ ಶಾಲೆಯು ಅಹಿಂಸಾ ಪ್ರಯೋಗದ ರಂಗ ಭೂಮಿಯಾಗುವುದರಲ್ಲಿ ಸಂದೇಹವಿಲ್ಲ.

**ಇನಾಮುಗಳು** (Rewards):

ಮೂಲ ಶಿಕ್ಷಣ ಸಾಲೆಗಳಲ್ಲಿ ಇನಾಮುಗಳಿಗೂ ಸ್ಥಾನವಿಲ್ಲವೆಂದು ಹೇಳಿದರೆ ಆಶ್ಚರ್ಯವಾಗುವದು. ಯೋಗ್ಯ ಕೆಲಸ ಮಾಡಿದ ಬಾಲಕನಿಗೆ ತಕ್ಕ ಪ್ರೋತ್ಸಾಹವೂ ಬೇಡವೇ ಎಂದು ಕೇಳಬಹುದು. ಉತ್ತಮ ಕೆಲಸ ಮಾಡಿದ ಮಕ್ಕಳು ಪ್ರೋತ್ಸಾಹವನ್ನು ಮೆಚ್ಚುವರು; ಆದರಿಂದ ಅವರು ಇನ್ನೂ ಹೆಚ್ಚು ಉತ್ಸಾಹದಿಂದ ಕೆಲಸ ಮಾಡುವರು. ಆದರೆ ಇದು ಉಳಿದ ಮಕ್ಕಳ ಮೇಲೆ ಹೇಗೆ ಪರಿಣಮಿಸುವುದೆಂಬುದನ್ನು ಗಮನಿಸಬೇಕು. ಉಳಿದವರ ಉತ್ಸಾಹವನ್ನು ಕುಗ್ಗಿಸುವದೋ ಹೇಗೆ ಎಂಬುದನ್ನು

ಗಮನಿಸಬೇಕು. ಮಕ್ಕಳಲ್ಲಿ ಪರಸ್ಪರ ದ್ವೇಷಾಸೂಯೆಗಳನ್ನು ಬೆಳೆಯಿಸಲು ಇನಾಮುಗಳು ಕಾರಣವಾಗಬಹುದು. ಯಾವಾಗಲೂ ಕೆಲವೇ ಬಾಲಕರು ಇನಾಮುಗಳನ್ನು ಪಡೆಯುವವರಾದರೆ, ಅನೇಕ ಬಾಲಕರ ಉತ್ಸಾಹಕ್ಕೆ ತಣ್ಣೀರು ಎರಚಿದಂತೆ ಆಗುವದು. ಪಾಟಿ, ಪುಸ್ತಕ, ಹಣ, ಕಾಗದ, ಹೂವು, ಪದಕ ಇತ್ಯಾದಿಗಳ್ನು ಇನಾಮಾಗಿ ಕೊಡುವ ಪರಿಪಾಠವುಂಟು. ಅವು ವಿಶಿಷ್ಟ ಬಾಲಕರಿಗೆ ದೊರೆಯದೆ ಎಲ್ಲರಿಗೂ ದೊರೆಯುವಂತಾದರೆ ಒಳಿತು; ಯಾಕಂದರೆ ಎಲ್ಲ ಮಕ್ಕಳಲ್ಲಿ ಕರ್ತವ್ಯದ ಅರಿವು ಉಂಟಾಗಬೇಕು. ಎಲ್ಲ ಮಕ್ಕಳಿಗೂ ಮೆಚ್ಚುಗೆಯ ಸಮಪಾಲು ದೊರೆಯಬೇಕು. ಪ್ರತಿಯೊಬ್ಬ ಮಗುವಿಗೂ ನ್ಯಾಯ ದೊರೆಯಬೇಕು. ತನ್ನ ಬುದ್ಧಿಮತ್ತೆಗೆ ತಕ್ಕಷ್ಟು ಪ್ರತಿಯೊಬ್ಬನು ಮಾಡಿದ್ದರೆ ಸಾಕು.

ಶಿಕ್ಷೆ ಹಾಗು ಇನಾಮುಗಳು ಮಕ್ಕಳಲ್ಲಿ ಬಾಹ್ಯ ಶಿಸ್ತನ್ನು ಉಂಟು ಮಾಡಬಹುದು. ಆದರೆ ನಮಗೆ ಬೇಕಾದುದು ಆಂತರಿಕ ಶಿಸ್ತು. ಅದಕ್ಕೆ ಸ್ವಶಿಸ್ತು, ಕ್ರಿಯಾತ್ಮಕ ಶಿಸ್ತು, ಅಹಿಂಸಾತ್ಮಕ ಶಿಸ್ತು ಎಂದು ಕರೆಯಬಹುದು; ಅದುವೇ ಮೂಲ ಶಿಕ್ಷಣ ಯೋಜನೆಯಲ್ಲಿ ಕಂಡುಬರುವ ಸ್ವೈಜವಾದ ಶಿಸ್ತು.

---

## ೪ ಹೊಸ ಸಾಲೆಯ ವಿವಿಧ ಚಟುವಟಿಕೆಗಳು

ಮೂಲ ಶಿಕ್ಷಣ ಸಾಲೆಯು ಚಟುವಟಿಕೆಯ ಸಾಲೆಯು. ಸಾಲೆಗಳಲ್ಲಿ ವಿವಿಧ ಚಟುವಟಿಕೆಗಳಿರಬೇಕೆಂಬುದು ಆಧುನಿಕ ಶಿಕ್ಷಣ ತಜ್ಞರ ಮತ. ಜಗತ್ತಿನ ಪ್ರಮುಖ ರಾಷ್ಟ್ರಗಳಲ್ಲಿ ಒಂದಿಲ್ಲೊಂದು ಬಗೆಗೆ ಕೃತಿ ಪ್ರಧಾನ ಪದ್ಧತಿಯು ಬಳಕೆಯಲ್ಲಿದೆ. **ಎಡಾಲ್ಫ ಫೆರಿಯರ** ಅವರ ವಿಚಾರಗಳು ಜಗತ್ತಿನ ತುಂಬ ಪ್ರಚಾರವಾಗಿವೆ. **ಜನಾಬ ಕೆ. ಜಿ. ಸೈಯುದ್ದೈನ** ಅವರು ಫೆರಿಯರರ ವಿಚಾರಗಳನ್ನು ಸಂಗ್ರಹಿಸಿ ಜಗತ್ತಿಗೆ ಹೊಸ ಶಿಕ್ಷಣದ ಮುನ್ನೋಟವನ್ನು ತೋರಿಸಿದ್ದಾರೆ. ಪ್ರಾಜೆಕ್ಟ ಪದ್ಧತಿ, ಡಾಲ್ಟನ್ ಯೋಜನೆ, ಮಾಂಟಿಸರಿ ಕ್ರಮ ,ಡ್ಯೂಯಿ ಪ್ಲಾನ್, ಕಾಂಪ್ಲೆಕ್ಸ ಕ್ರಮ, ಕ್ರೀಡನ ಪದ್ಧತಿ ಮೊದಲಾದ ಹೊಸ ಪ್ರಯೋಗಗಳೆಲ್ಲ ಚಟುವಟಿಕೆಗಳಿಗೆ ಅಗ್ರಸ್ಥಾನ ಕೊಟ್ಟಿವೆ. 'ಚಟುವಟಿಕೆಯ ಮುಖಾಂತರ ಶಿಕ್ಷಣ'ಎಂಬ ಚಳುವಳಿಯೇ ಹೊಸಗಾಳಿಯು. ಮೂಲ ಶಿಕ್ಷಣವು ಸಹ ಈ ಚಳುವಳಿಯ ಪ್ರವಾಹದಗುಂಟ ಸಾಗಿದೆ. ಈ ಪ್ರವಾಹವನ್ನು ಆಳವಾದ, ವಿಶಾಲವಾದ ಸಾಗರಕ್ಕೆ—ಸಾಂಸ್ಕೃತಿಕ ಜಗತ್ತು ನಿರ್ಮಾಣ ಕಾರ್ಯಕ್ಕೆ ಒಯ್ಯುವದು.

### ೧. ಮೂಲ ಉದ್ಯೋಗ (Basic Craft):

ಜೀವನಾವಶ್ಯಕತೆಗಳನ್ನು ಪೂರೈಸುವ ಉದ್ಯೋಗಗಳು ಮೂಲ ಉದ್ಯೋಗಗಳೆಂದು ಗಣ್ಯವಾಗಿವೆ. ಅಶನ, ಅರಿವೆ, ವಸತಿ ಇವು ಜೀವನದ ಮೂಲ ಆವಶ್ಯಕತೆಗಳು. ಇವುಗಳಿಗೆ ಪೂರಕವಾದ ಹಾಗು ಪೋಷಕವಾದ ಇತರ ಗ್ರಾಮ ಕೈಗಾರಿಕೆಗಳನ್ನು ಸೇರಿಸಬಹುದು. ಮುಖ್ಯ ಉದ್ದೇಶಗಳು—(೧)ಉದ್ಯಮವು ಮಕ್ಕಳ ದೇಹ–ಬುದ್ಧಿ –ನೀತಿ ಇವುಗಳ ಸಮವಾಯ ವಿಕಾಸಕ್ಕೆ ನೆರವಾಗುವದು. (೨) ಮಕ್ಕಳಿಗೆ ತಮ್ಮ ಸುತ್ತು ಮುತ್ತಲಿನ ಪರಿಸ್ಥಿತಿಯ ಪರಿಚಯವಾಗುವದು. (೩) ಮಕ್ಕಳಲ್ಲಿ ಉತ್ಪಾದನ ಶಕ್ತಿಯು ಬೆಳೆಯುವದು. (೪) ಮಕ್ಕಳು ಸ್ವಾವಲಂಬಿ ವ್ಯಕ್ತಿಗಳಾಗಿ

ಬೆಳೆಯುವರು. (೫) ಮಕ್ಕಳು ಸ್ವಾರ್ಥದಿಂದ ಪರಾರ್ಥದ ಕಡೆಗೆ ಸಾಗುವರು. (೬) ಸಾಹಕಾರಿಕ ಚಟುವಟಿಕೆಗಳ ಪರಿಣಾಮವಾಗಿ ಮಕ್ಕಳಲ್ಲಿ ಸ್ವಾತಂತ್ರ್ಯ, ಸಮತೆ, ಸೋದರತೆ ಈ ತತ್ತ್ವಗಳು ಅಂಕುರಿಸುವವು. (೭) ಮಕ್ಕಳಲ್ಲಿ ಶಾಸ್ತ್ರೀಯ ಪ್ರವೃತ್ತಿಯು ಬೆಳೆಯುವದು. (೮) ಬುದ್ಧಿ ಜೀವಿಗಳು ಶ್ರಮಜೀವಿಗಳು ಎಂಬ ದ್ವಂದ್ವವು ಮಾಯವಾಗುವದು. (೯) ಮಕ್ಕಳಲ್ಲಿ ಕಾಯಕ ತತ್ತ್ವದ ಅರಿವು ಉಂಟಾಗುವದು. ಸಾಮಾಜಿಕ ಸಮತೆಯ ಸೆಲೆಯು ಹೊರಚಿಮ್ಮುವದು. (೧೦) ಬಾಳಿನ ತಿರುಳು ಅರಿತವರಾಗಿ, ಶೋಷಣರಹಿತ ಅರ್ಥಾತ್ ಅಹಿಂಸಾತ್ಮಕ ಸಮಾಜದ ಘಟಕಗಳಾಗಿ ಬೆಳೆಯುವರು.

೨. **ಸಫಾಯಿ** (Safai):

ಸಫಾಯಿ ಎಂದರೆ ಸ್ವಚ್ಛತೆ. ಸ್ವಚ್ಛತೆಯು ಅಂದ ಜೀವನದ ಆವಶ್ಯಕತೆಯು. ಅಸ್ವಚ್ಛ ವಸ್ತುವನ್ನು ಕಂಡ ಕೂಡಲೆ ಒಂದು ತರದ ಹೇಸಿಕೆಯುಂಟಾಗುವದು. ಸ್ವಚ್ಛವಾದುದನ್ನು ಕಂಡಾಗ ಹರುಷವಾಗುವದು. ಇದೊಂದು ಮನಸ್ಸಿನ ಪ್ರತಿಕ್ರಿಯೆಯೆಂದು ಹೇಳಬಹುದು. ಸಾಮಾನ್ಯವಾಗಿ ನಾವು ಬಾಹ್ಯ ಸ್ವಚ್ಛತೆಗೆ ಮಹತ್ವ ಕೊಡುತ್ತೇವೆ. ಆದರೆ ಸ್ವಚ್ಛತೆಯ ಸೆಲೆ ಅಂತರಂಗದಲ್ಲಿದೆ. ನಿರ್ಮಲ ಮನಸ್ಸು ನಿರ್ಮಲ ದೇಹದಲ್ಲಿ ನೆಲಸುವದು. ಮನುಷ್ಯನು ಮನಶ್ಶರೀರಾತ್ಮಕ ಜೀವಿ. ಅಂತೇಯೇ ಪ್ರಾಚೀನ ಕಾಲದಿಂದಲೂ ಸ್ವಚ್ಛತೆಗೆ ಧಾರ್ಮಿಕ ಸ್ವರೂಪ ಕೊಟ್ಟಿದ್ದಾರೆ. ಸ್ವಚ್ಛವಾಗಿ ಸ್ನಾನಮಾಡಿ, ಮಡಿಬಟ್ಟೆಗಳನ್ನು ಧರಿಸಿ ದೇವರ ಪೂಜೆಮಾಡುತ್ತೇವೆ. ಬಾಹ್ಯಶುದ್ಧಿಯು ಆಂತರಿಕ ಶುದ್ಧಿಗೆ ಕಾರಣವಾಗುವದು, ಕಾರಣವಾಗಬೇಕು. ಮನ ಶುದ್ಧವಿಲ್ಲದೆ, ಮನೆ ಶುದ್ಧ ಮಾಡಿದರೆ, ಭಾವ ನಿರ್ಮಲವಿಲ್ಲದೆ ದೇಹ ಸ್ವಚ್ಛ ಮಾಡಿದರೆ, ದೇವ ಮೆಚ್ಚುವನೇ? ದೇಹವೂ ಸ್ವಚ್ಛವಾಗಬೇಕು; ಮನವೂ ಸ್ವಚ್ಛವಾಗಬೇಕು; ಎಂದರೆ ಸಫಾಯಿ ಸೊಗಸು ಜೀವನದ ಸಾಧನವಾಗುವದು. **ಕವಿ ರವೀಂದ್ರರು** ಒಂದು ಕಡೆ ಹೀಗೆ ಹೇಳಿದ್ದಾರೆ:—"ನಾನು ನನ್ನ ಶರೀರವನ್ನು ಯಾವಾಗಲೂ ಸ್ವಚ್ಛವಾಗಿ ಇಡುತ್ತೇನೆ; ಯಾಕಂದರೆ, ಭಗವಂತನ ಸನ್ನಿಧಾನವು ನನ್ನಲ್ಲಿ ಇದೆ." ಗಾಂಧೀಜಿಯವರು ಒಂದು ಕಡೆ ಹೀಗೆ ಹೇಳಿದ್ದಾರೆ:—"ಯಾವ ಮನುಷ್ಯನು ಹೊ

ರಗಿನ ಜಗತ್ತನ್ನು ಅನುಲಕ್ಷಿಸಿ ಸರ್ವಾಂಗೀಣ ಬಾಹ್ಯ ಶುದ್ಧಿಯನ್ನು ಇಟ್ಟು ಕೊಳ್ಳುವನೋ ಅವನಿಗೆ ಆತ್ಮ ಶುದ್ಧಿಯು ಸಹಜವಾದ ವಿಷಯ. ಇದಕ್ಕೆ ವಿರುದ್ಧವಾಗಿ ಯಾವನು ಅಂತಃಶುದ್ಧಿಗಾಗಿ ಬಾಹ್ಯ ಶುದ್ಧಿಯನ್ನು ಅಲಕ್ಷಿಸು ವನೋ ಅವನು ಎರಡನ್ನೂ ಕಳೆದುಕೊಳ್ಳುತ್ತಾನೆ.'' ಇದರಿಂದ ಬಾಹ್ಯ ಶುದ್ಧಿಯು ಆವಶ್ಯಕವೆಂಬುದು ಸಿದ್ಧ.

**ಸಫಾಯಿ ವಿಜ್ಞಾನವೂ ಶಿಕ್ಷಣವೂ:**

**ಗಾಂಧೀಜಿ**ಯವರು ೧೯೨೬ರಲ್ಲಿ ಸಾಬರಮತಿ ಆಶ್ರಮವನ್ನು ಸ್ಥಾಪಿ ಸುವ ಸಮಯದಲ್ಲಿ ಹೀಗೆ ಹೇಳಿದರು:"ನನ್ನ ಶಿಕ್ಷಣವು ಮೊದಲು ಸ್ವಚ್ಛತೆ ಯಿಂದ ಪ್ರಾರಂಭವಾಗುತ್ತದೆ." ಬಂದ ಅನುಯಾಯಿಗಳಿಗೆಲ್ಲ ಪಾಯ ಖಾನೆಯನ್ನು ಸ್ವಚ್ಛ ಮಾಡುವ ಕೆಲಸ ಕೊಟ್ಟರು. ಅವರಲ್ಲಿ ಡಾ **ರಾಮ ಚಂದ್ರನ್** ಅವರೂ ಒಬ್ಬರಾಗಿದ್ದರು. ಅವರ ಲೇಖದಿಂದ ಈ ಮಾತು ಗಳನ್ನು ಆಯ್ದುಕೊಳ್ಳಲಾಗಿದೆ. ಹೊಸ ಶಿಕ್ಷಣವು ಸ್ವಚ್ಛತೆಯಿಂದ ಆರಂಭ ವಾಗುತ್ತದೆ ಎಂಬ ತತ್ವವನ್ನು ಮೂಲ ಶಿಕ್ಷಣ ಕೆಲಸಗಾರರು ನಂಬುವರು.

ಒಂದು ರೋಗಕ್ಕೆ ಔಷಧ ಕೊಡುವ ಪೂರ್ವದಲ್ಲಿ ವೈದ್ಯನು ರೋಗಿಗೆ ಭೇದಿಗಾಗಿ ಏನಾದರೂ ಕೊಡುವನು. ಮಲಿನವನ್ನು ಹೊರಗೆ ಹಾಕಿ ಹೊಸ ಉಪಚಾರವನ್ನು ಆರಂಭಿಸುವನು. ಹಾಗೆ ಹೊಸ ಸಂಸ್ಕಾರ ಕೊಡುವ ಮುಂಚೆ ಹಳೆಯ ಕೊಳೆಯನ್ನು ಕಿತ್ತೊಗೆಯಬೇಕು. ಎಂದರೆ ಹೊಸ ಅನು ಭವವು ಪರಿಣಾಮಕಾರಿಯಾಗುವದು. ಮಗುವಿನ ನಿತ್ಯದ ಜೀವನವು ಅನು ಭವ ಮಾಲೆಯನ್ನು ಹೆಣೆಯುವದು. ಜೀವನವು ಹಸನಾದಂತೆ ಶಿಕ್ಷಣವು ಹೊಸತಾಗುವದು.

ಕಣ್ಣಲ್ಲಿ ಪಿಚ್ಚುತುಂಬಿದ ಮೂಗಿನಲ್ಲಿ ಸುಂಬಳ ಸುರಿಯುತ್ತಿರುವ ಮಗು ಶಾಲೆಗೆ ಬಂದರೆ, ಅವನಿಗೆ ಸ್ವಚ್ಛತೆಯನ್ನು ಮಾಡಿಕೊಳ್ಳಲು ಅನುವು ಮಾಡಿ ಕೊಡುವದು ಮೊದಲ ಕೆಲಸ. ಹಾಗೆ ಮಾಡದೆ ಅವನಿಗೆ ಅಕ್ಷರಾಭ್ಯಾಸ ಮಾಡಹಚ್ಚಿದರೆ, ಅದು ಶಿಕ್ಷಣವೇ ಆಗುವದಿಲ್ಲ. ಮಗುವಿನ ಜೀವನಕ್ಕೆ ಅಗತ್ಯವಿದ್ದ ಕಾರ್ಯವೇ ಅವನ ಶಿಕ್ಷಣದ ಹಾದಿ. ಅದರಿಂದ ಮೂಲ ಶಿಕ್ಷಣ ಶಾಲೆಯಲ್ಲಿ ದಿನಾಲು ಬೆಳಿಗ್ಗೆ ಸಾಮೂಹಿಕ ಪ್ರಾರ್ಥನೆ ನಡೆಯುವ ಮುಂಚೆ ಮಕ್ಕಳ ಸ್ವಚ್ಛತೆಯ ಪರೀಕ್ಷೆ ನಡೆಯುವದು. ಪ್ರತಿಯೊಬ್ಬ

ಬಾಲಕನ ಕಣ್ಣು, ಮೂಗು, ಕಿವಿ, ಹಲ್ಲು, ಉಗುರು ಇತ್ಯಾದಿ ಅವಯವಗಳ ಸ್ವಚ್ಛತೆಯ ನಿರೀಕ್ಷಣೆಯನ್ನು ಆ ವರ್ಗದ ಹಿರೇ ಮಣಿ ಇಲ್ಲವೆ ಸ್ವಚ್ಛತಾ ಮಂತ್ರಿ ಮಾಡುವನು. ಅಸ್ವಚ್ಛ ಹುಡುಗರಿಗೆ ಸ್ವಚ್ಛ ಮಾಡಿಕೊಳ್ಳಲು ಅವಕಾಶ ಕೊಡಲಾಗುವದು. ವೈಯಕ್ತಿಕ ಸ್ವಚ್ಛತೆಗೆ ಅವಶ್ಯಕವಿದ್ದ ಜ್ಞಾನವನ್ನು ಒದಗಿಸಿ ಕೊಡುವುದು ಆದ್ಯಕರ್ತವ್ಯವು. ಶಾಲೆ, ವಸತಿ ಗೃಹ ಹಾಗು ಸುತ್ತುಮುತ್ತಲಿನ ಸ್ಥಳ ಇವೂ ಸ್ವಚ್ಛವಾಗಿರಬೇಕು. ನೆಲ ತಂಪು ಇದ್ದರೆ, ಹವೆ ಸರಿಯಾಗಿ ಆಡದಿದ್ದರೆ, ಬೆಳಕು ಸರಿಯಾಗಿ ಬೀಳದಿದ್ದರೆ, ಮಕ್ಕಳ ಆರೋಗ್ಯವು ಕೆಡುವದು. ಶಾಲೆಯ ಹಾಗು ಅದರ ಸುತ್ತಲಿನ ಪ್ರದೇಶವು ಸ್ವಚ್ಛವಾಗಿದ್ದರೆ ಮಕ್ಕಳ ಆರೋಗ್ಯಕ್ಕೆ ಅನುಕೂಲವು. ಹಳ್ಳಿಯ ಮಕ್ಕಳಿಗೆ ಜೀವನ ಸತ್ವವುಳ್ಳ ಆಹಾರ ದೊರೆಯುವದು ಕಡಿಮೆ. ಅನಾರೋಗ್ಯ ಪರಿಸ್ಥಿತಿಯಲ್ಲಿ ಅವರು ವಿದ್ಯಾಭ್ಯಾಸ ಮಾಡಿದರೆ ಅವರ ಆರೋಗ್ಯವು ಮತ್ತಷ್ಟು ಕೆಡುವದು. ಅದರಿಂದ ಆರೋಗ್ಯದ ಚಟಗಳನ್ನು (Healthy habits) ಮೊದಲಿನಿಂದಲೇ ರೂಢಿ ಮಾಡುವದು ಒಳಿತು.

ಮೂಲ ಶಿಕ್ಷಣದ ಶಾಲೆಯ ಒಳ ಆಡಳಿತವು ಮಕ್ಕಳಿಗೇ ಸೇರಿದೆ. ಅವರ ಸಾಲೆಯನ್ನು ಅವರು ಸ್ವಚ್ಛ ಮಾಡಿಕೊಳ್ಳಬೇಕು, ಅಲಂಕರಿಸಬೇಕು. ಎಂಬ ಭಾವನೆಯು ಬೆಳೆದು ಅವರಲ್ಲಿ ಸಾಮಾಜಿಕ ದೃಷ್ಟಿ (Social Sense) ವಿಕಸಿತವಾಗುವದು. ಸಾಮುದಾಯಿಕ ಸ್ವಚ್ಛತೆಯ ಕಡೆಗೆ ಅವರ ಲಕ್ಷವು ಹರಿಯುವದು. ಇದು ನಾಗರಿಕತೆಯ ಶಿಕ್ಷಣದಲ್ಲಿ ಆವಶ್ಯಕ ಅಂಶವು. ಡಿ. ರಾಮ ಚಂದ್ರನ್ ಅವರ ಶಬ್ದಗಳಲ್ಲಿ ಹೇಳುವುದಾದರೆ,

"ಸ್ವಚ್ಛತೆಯನ್ನು ಕೇವಲ ಬೇನೆಯಿಂದ ರಕ್ಷಣೆಗಾಗಿ, ಆತ್ಮ ರಕ್ಷಣೆಯ ಸಲುವಾಗಿ ಮಾಡಬಾರದು; ಆದರೆ ಕೇವಲ ಮನಸ್ಸಿನ ಶಾಂತಿಗಾಗಿ ಮಾಡಬೇಕು. ಸ್ವಚ್ಛತೆಯು ಇಲ್ಲದೆ ಹೋದರೆ ಅದು ಒಂದು ನೈತಿಕ ಅಪರಾಧ, ಆಧ್ಯಾತ್ಮಿಕ ಅಪರಾಧ ಎಂದು ತಿಳಿಯಲ್ಪಡಬೇಕು. ಎಂದು ನಮ್ಮ ದೇಶದ ಹುಡುಗರು ಹಾಗು ಹುಡಿಗೆಯರು ಓಣಿಯಲ್ಲಿ ಬಿದ್ದ ಕಾಗದದ ತುಣುಕನ್ನು ತೆಗೆದು ಕಸದ ಬುಟ್ಟಿಯಲ್ಲಿ ಹಾಕುವರೋ ಅಂದಿಗೆ ನಮ್ಮ ದೇಶದಲ್ಲಿ ಸ್ವಚ್ಛತೆಯ ಭಾವನೆಯು ಮೈಗೊಂಡಿತೆಂದು ತಿಳಿಯಬೇಕು.

" ಸ್ವಚ್ಛತೆಯು ಯಾವದೊಂದು ಶಿಕ್ಷಣ ಸಂಸ್ಥೆಯಲ್ಲಿ ಒಂದು ಅಭ್ಯಾಸ ವಿಷಯವಾಗಬೇಕು. ಯಾವ ಶಿಕ್ಷಣದಲ್ಲಿ ಇದು ಅದರ ಅಂಗವಾಗಿಲ್ಲವೋ ಅದು ಶಿಕ್ಷಣವಲ್ಲ " ಎಂದು ಗಾಂಧೀಜಿಯವರು ಒಮ್ಮೆ ಹೇಳಿದ್ದಾರೆ. ತಕಲಿ ಹಾಗು ಕಸಬರಿಗೆಗಳು ಅಹಿಂಸಾತ್ಮಕ ಅಸ್ತ್ರಗಳೆಂದು ಒಮ್ಮೆ **ಡಾ. ರಾಮಚಂದ್ರನ್** ಅವರು ಸೇವಾಗ್ರಾಮದಲ್ಲಿ ಹೇಳಿದರು. ಇವುಗಳಿಂದಲೇ ಭಾರತದ ಭವಿಷ್ಯವು ಭವ್ಯವಾಗಬೇಕಾಗಿದೆ, ಉಜ್ವಲವಾಗಬೇಕಾಗಿದೆ, ಉದಾತ್ತವಾಗಬೇಕಾಗಿದೆ. ಕಸಬರಿಗಿಯನ್ನು ಹಿಡಿಯಬಲ್ಲವನು ನಾಡಿನ ನಾಯಕನಾಗಬಲ್ಲ ಎಂಬುದನ್ನು ತರುಣರ ಹೃನ್ಮಂದಿರದಲ್ಲಿ ನೆಲಿಸಬೇಕಾಗಿದೆ. ಇದು ಹೊಸ ಶಿಕ್ಷಣದ ಹೊಸ ಕರೆ.

ಬಾಯಿ ಮಾತಿನಿಂದ ಸ್ವಚ್ಛತೆಯ ಶಿಕ್ಷಣವನ್ನು ಕೊಡಬಾರದು. ಗುರುಗಳು ಮಕ್ಕಳೊಡನೆ ಕೆಲಸ ಮಾಡಬೇಕು. ಮಕ್ಕಳ ಮನಸ್ಸನ್ನು ಹದಗೊಳಿಸಬೇಕು. ಬಾಲಕರು ಪ್ರೌಢರು ಹಾಗು ಮುದುಕರು ಸ್ವಚ್ಛತೆಯ ಕೆಲಸ ಮಾಡುವಾಗ ಆನಂದವನ್ನು ಪಡೆಯಬೇಕು. ಮನುಷ್ಯನು ಸುಖ– ಶಾಂತಿಗಳನ್ನು ಪಡೆಯಬೇಕಾದರೆ, ಸ್ವಚ್ಛತೆಯು ತೀರ ಆವಶ್ಯಕವಾದುದೆಂದು ಮಕ್ಕಳಿಗೆ ತಿಳಿಯಬೇಕು. ಅವರಲ್ಲಿ ಹೊಲಸಿನ ಬಗ್ಗೆ ಸೂಕ್ಷ್ಮ ತಿರಸ್ಕಾರ ಉಂಟಾಗಬೇಕು. ಹೊಲಸನ್ನು ಎಲ್ಲಿ ಕಂಡರೂ ಅದನ್ನು ತೆಗೆದು ಸ್ವಚ್ಛ ಮಾಡಬೇಕೆಂಬ ಭಾವನೆಯು ಮಕ್ಕಳಲ್ಲಿ ಬಲಿಯಬೇಕು. ಇದು ಸಣ್ಣ ಕ್ರಾಂತಿಯಲ್ಲ. ಇದಕ್ಕೆ ಆಧ್ಯಾತ್ಮಿಕ ತೇಜವು ಪ್ರಜ್ವಲಿಸಬೇಕು. ಇಂತಹ ಉದಾತ್ತ ದೃಷ್ಟಿಯಿಂದಲೇ **ಗಾಂಧೀಜಿ**ಯವರು ಭಂಗೀ ಕೆಲಸ ಮಾಡಿದರು.

ಮೂಲ ಶಿಕ್ಷಣ ಶಾಲೆಯಲ್ಲಿ ಸಫಾಯಿ ಕೆಲಸದ ವಿವಿಧ ಕ್ರಿಯೆಗಳು ಶಾಸ್ತ್ರೀಯವಾಗಿ ಮಾಡಲ್ಪಡುವವು. ಅದರಿಂದ ಸಾಮಾನ್ಯ ವಿಜ್ಞಾನ, ಸಮಾಜ ಶಾಸ್ತ್ರ, ಆರೋಗ್ಯವಿಜ್ಞಾನ, ರಸಾಯನ ಶಾಸ್ತ್ರ ಮೊದಲಾದ ವಿಷಯಗಳ ಜ್ಞಾನವನ್ನು ಸಂಬಂಧೀಕರಿಸಲು ಸುಲಭ ಸಾಧ್ಯವಿದೆ. ಸ್ವಚ್ಛತೆಯ ಕಾರ್ಯ ಕ್ರಮಗಳ ಮುಖಾಂತರ ಮಗುವಿನ ಮನೋ ವಿಜ್ಞಾನವನ್ನೂ, ರಸಾಯನಿಕ ಪದಾರ್ಥಗಳ ಗುಣಧರ್ಮಗಳನ್ನೂ ಹಾಗು ಸಾಮು

ದಾಯಿಕ ಜೀವನದ ಫಲಿತವನ್ನೂ ಗುರುಗಳು ಪ್ರಾಯೋಗಿಕವಾಗಿ ಅಭ್ಯ ಸಿಸಬಹುದು.

**ಅಡಿಗೆಯ ಕೆಲಸ** (Science of cooking):

ವಸತಿ ಗೃಹವುಳ್ಳ ಶಾಲೆಗಳಲ್ಲಿ ಮಕ್ಕಳು ಅಡಿಗೆಯ ಕೆಲಸನ್ನು ತಾವೇ ಮಾಡಬೇಕು. ಸೇವಾ ಗ್ರಾಮದ ಆನಂದ ನಿಕೇತನದಲ್ಲಿ ಬಾಲಕ ಬಾಲಿಕೆ ಯರು ಕೂಡಿ ಪಾಳಿಯ ಪ್ರಕಾರ ಅಡಿಗೆಯ ಕೆಲಸ ಮಾಡುವರು. ಬಡ ಮಕ್ಕಳಿಗೆ ಸಮತೋಲ ಆಹಾರವನ್ನು ಕೊಟ್ಟು ವಿದ್ಯಾಭ್ಯಾಸ ಮಾಡಿಸ ಬೇಕೆಂಬ ತತ್ತ್ವವನ್ನು ಅಲ್ಲಿ ಬಳಿಕೆಯಲ್ಲಿ ತರಲಾಗಿದೆ. ಹಗಲು ಸಾಲೆ ಯಲ್ಲಿ (Day School) ಇದು ಸಾಧ್ಯವಾಗುವದಿಲ್ಲ. ಆದರೆ ಪ್ರವಾಸಗಳನ್ನು ಕೈಕೊಳ್ಳುವ ಅನೇಕ ಸಂದರ್ಭಗಳು ಬರುವವು. ಆಗ ಮಕ್ಕಳ ಅನ್ನ, ಆಂಬ್ರ, ಪಲ್ಲೆ. ಚಪಾತಿ, ಚಟ್ನಿ ಮೊದಲಾದವುಗಳನ್ನು ತಾವೇ ಸಿದ್ಧ ಗೊಳಿಸಕೊಳ್ಳಬೇಕು. ತಕ್ಕ ಸಾಹಿತ್ಯಗಳನ್ನು ಮೊದಲೇ ಯೋಚಿಸಿ ಹೊರ ಸ್ಥಳಕ್ಕೆ ಒಯ್ಯಬೇಕು. ಹೀಗೆ ಸ್ಕೌಟ ಕ್ಯಾಂಪಿನ ತತ್ತ್ವವನ್ನು ಬಳಕೆಯಲ್ಲಿ ತರುವುದು ಒಳಿತು.

**ಅಡಿಗೆಯ ಕೆಲಸವೂ ಶಿಕ್ಷಣವೂ:**

ಹೆಣ್ಣು ಮಕ್ಕಳು ಮನೆಯಲ್ಲಿ ಅಡಿಗೆ ಮಾಡಬೇಕು; ಗಂಡಸರು ಹೊರಗಿನ ಕೆಲಸ ಮಾಡಬೇಕು. ಹೀಗೆ ಶ್ರಮ ವಿಭಾಗದಿಂದ ಕೌಟುಂಬಿಕ ಜೀವನವನ್ನು ಸುಗಮವಾಗಿ ಸಾಗಿಸಬೇಕೆಂಬುದೇ ಈ ವಿಚಾರದ ರಹಸ್ಯವು. ಕ್ರಮೇಣ ಅಡಿಗೆಯ ಕೆಲಸಕ್ಕೆ ಮೇಲ್ಬುದ್ಧಿ ಬೇಡ, ಹೊರಗೆಲಸಕ್ಕೆ ಬುದ್ಧಿ ಬೇಕು. ಎಂಬ ಗ್ರಹಿಕೆ ಬಲಿಯಿತು. ಇದರ ಪರಿಣಾಮವಾಗಿ ಗಂಡಸು ಬುದ್ಧಿ ಜೀವಿಯಾಗಿ, ಹೆಂಗಸು ಭಾವ ಜೀವಿಯಾಗಿ ಬೆಳೆಯತೊಡಗಿದರು. ಹೀಗಾಗಿ ಹೆಂಗಸಿನ ತಲೆ ಗಂಡಸಿನ ಹೃದಯ ಮಂಕಾಗತೊಡಗಿದವು. ಇವೆರಡರಲ್ಲಿ ಸಮತೋಲವನ್ನುಂಟು ಮಾಡುವದು ಅಗತ್ಯವು.

ರೊಟ್ಟಿ ಮಾಡುವ ಪೂರ್ವದಲ್ಲಿ ಹಿಟ್ಟನ್ನು ಕೆಲಹೊತ್ತು ಕಲಿಸಿ ಇಡು ವರು. ನೀರು ಕುದಿಯಲಿಕ್ಕೆ ಹತ್ತಿದ ಮೇಲೆ ಬೇಳೆ ಹಾಕುವರು. ಹಾಲನ್ನು ಕಾಸಿ ಮುಚ್ಚಿ ಇಡುವರು. ಅಡಿಗೆ ಮಾಡುವ ಭಾಂಡೆಗಳಿಗೆ

ಮಣ್ಣು ಹಚ್ಚಿ ಇಡುವರು. ನೀಡುವ ಮುಂಚೆ ಆಹಾರ ಪದಾರ್ಥಗಳನ್ನು ಎತ್ತರವಾದ ಸ್ಥಳದಲ್ಲಿ ಇಡುವರು. ನೀಡಲು ಅನುಕೂಲವಾಗುವಂತೆ ಅವು ಗಳನ್ನು ಕ್ರಮವಾಗಿ ಇಡುವರು. ಉಪ್ಪಿನ ಹತ್ತಿರ ಬೆಲ್ಲ ಇಡುವದಿಲ್ಲ. ಪಲ್ಯೆಯನ್ನು ಹೆಚ್ಚುವ ಮುಂಚೆ ತೊಳೆಯುವರು. ಪಲ್ಯೆಕಾಯಿಗಳನ್ನು ಸಣ್ಣ ಸಣ್ಣ ತುಂಡುಗಳಾಗಿ ಹೆಚ್ಚುವರು. ಪಲ್ಯೆ ಹೆಚ್ಚಿ ಹವೆಯಲ್ಲಿ ಇಡುವ ದಿಲ್ಲ. ಬದನೆಯ ಹೋಳುಗಳನ್ನು ನೀರಲ್ಲಿ ಹಾಕುವರು. ಕುಡಿಯುವ ನೀರನು ಸೋಸುವರು; ನೀರಿನ ಪಾತ್ರೆಯನ್ನು ಸ್ವಚ್ಛವಾಗಿ ತೊಳೆಯುವರು. ಉರಿ ಹೊತ್ತಿಸುವಾಗ ಊದುವರು. ಉರಿ ನಂದಿಸುವಾಗ ಬೂದಿಯಿಂದ ಮುಚ್ಚುವರು. ಕಡಲೆ ಹಾಗು ಹೆಸರುಗಳನ್ನು ನೆನೆಯಿಸಿ ಉಸುಳಿ ಮಾಡು ವರು. ಉರಿಯುವ ಕಟ್ಟಿಗೆಯನ್ನು ಕೈಯಿಂದ ಹಿಡಿಯುವರು.; ತುದಿ ಕಾಯ್ದ ಕಬ್ಬಿಣದ ಕಡಚಿಯನ್ನು ಅರಿವೆಯಿಂದ ಹಿಡಿಯುವರು. ಕೆಲವರು ಮನೆಯಲ್ಲಿ ಬೀಸಿದ ಹಿಟ್ಟನ್ನೇ ಉಪಯೋಗಿಸುವರು. ಮನೆಯಲ್ಲಿ ಕುಟ್ಟಿದ ಅಕ್ಕಿಯನ್ನೇ ಉಪಯೋಗಿಸುವರು. ಒಬ್ಬರ ಎಂಜಲು ಮತ್ತೊಬ್ಬರು ಊಟ ಮಾಡುವದಿಲ್ಲ. ಒಬ್ಬರು ಕುಡಿದ ನೀರಿನ ಪಾತ್ರೆಯನ್ನು ಮತ್ತೊ ಬ್ಬರು ಉಪಯೋಗಿಸುವದಿಲ್ಲ. ತಂಗಳ ಆಹಾರ ಊಟ ಮಾಡುವದಿಲ್ಲ. ವೇಳೆಗೆ ಸರಿಯಾಗಿ ಮಕ್ಕಳಿಗೆ ಉಣಿಸುವರು; ಮತ್ತು ಮೇಲಿಂದ ಮೇಲೆ ತಿನಸು ಕೊಡುವದಿಲ್ಲ. ಕೌಟುಂಬಿಕ ಜೀವನದ ಪರಂಪರೆಯಿಂದು ತುಸು ಮಟ್ಟಿಗೆ ತಮಗೆ ದೊರೆತ ಹೊರಗಿನ ಜ್ಞಾನದಿಂದ ಹಾಗು ನೆರೆ ಯವರ ಅನುಕರಣದಿಂದ ಕೆಲವು ಹೆಣ್ಣು ಮಕ್ಕಳಲ್ಲಿ ಮೇಲೆ ಹೇಳಿದ ಉತ್ತಮ ಚಟಗಳು ಬಳಕೆಯಲ್ಲಿರುವವು. ಆದರೆ ಅವರಿಗೆ ಕಾರ್ಯ ಕಾರಣ ಭಾವ ತಿಳಿದಿರಲಿಕ್ಕಿಲ್ಲ.

ಬಡತನ, ಅಜ್ಞಾನ, ಅನಾನುಕೂಲತೆ ಇವುಗಳ ಮೂಲಕ ಕೆಲವು ಹೆಣ್ಣು ಮಕ್ಕಳಲ್ಲಿ ಅಪಾಯಕರ ಚಟಗಳು ಕಂಡು ಬರುವವು. ಸಿದ್ಧವಾದ ಆಹಾರ ವನ್ನು ಆರಿಸುವರು. ಉಪಯೋಗಿಸುವ ಪಾತ್ರೆಗಳನ್ನು ಸ್ವಚ್ಛವಾಗಿ ತೊಳೆ ಯುವದಿಲ್ಲ. ಹಾಲು ಹಿಂಡುವಾಗ ಕೆಚ್ಚಲ ತೊಳೆಯುವದಿಲ್ಲ. ಬೆಣ್ಣೆ ಮಾಡುವಾಗ ಹೊಲಸು ಕೂಡಿಸುವರು. ಬೆಣ್ಣೆ ಕೈಯನ್ನು ಬಟ್ಟೆಗೆ ಒರಸಿ ಕೊಳ್ಳುವರು. ಅಡಿಗೆ ಮನೆಯಲ್ಲಿ ಕಸದ ಗುಂಪಿ ಹಾಕುವರು. ಆಹಾರ

ಸಾಮಗ್ರಿಗಳನ್ನು ಸರಿಯಾಗಿ ಜತನ ಮಾಡುವದಿಲ್ಲ. ಆಹಾರ ಪದಾರ್ಥ ಗಳನ್ನು ಪ್ರಮಾಣಕ್ಕನುಸರಿಸಿ ಕೂಡಿಸುವ ಕ್ರಮ ಗೊತ್ತಿರುವದಿಲ್ಲ. ಚವು ಚಿಗೆ ಕಲೆ ಬೀಳುವದು, ಪ್ರವಾಹಿ ಪದಾರ್ಥಗಳ ರೂಪಾಂತರ, ಉಷ್ಣತೆ ಅವಾಹಕ, ವಾಹಕ, ಉರಿಗೆ ಹವೆಯು ಅವಶ್ಯಕತೆ, ಮೂಲ ಪದಾರ್ಥ ಮತ್ತು ಮಿಶ್ರ ಪದಾರ್ಥ, ಉಷ್ಣತೆಯಿಂದ ಪದಾರ್ಥಗಳ ಸ್ಥಿತ್ಯಂತರ, ಆಂಬ್ಲ ಗಳು ಮೊದಲಾದ ಸಂಗತಿಗಳನ್ನು ತಿಳಿಸಿ ಕೊಡುವದಕ್ಕೆ ಅಡಿಗೆಯ ಮನೆ ಯಲ್ಲಿಯೇ ಸ್ವಾಭಾವಿಕ ಸನ್ನಿವೇಶಗಳು ದೊರೆಯುತ್ತವೆ. ಅವುಗಳನ್ನು ಉಪಯೋಗಿಸದೆ ಶ್ರಮಬಟ್ಟು ಅನೇಕ ಪ್ರಯೋಗಗಳನ್ನು ಮಾಡಿ ತೋರಿಸಲು ಯತ್ನಿಸುವರು. ಇದರಿಂದ ವೇಳೆ ಮತ್ತು ಹಣ ಅನ ವಶ್ಯಕವಾಗಿ ಹಾಳು ಮಾಡಿದಂತಾಗುವದಿಲ್ಲವೆ? ಶುದ್ಧ ನೀರು, ಅಶುದ್ಧ ನೀರು, ಕಠಿಣೋದಕ (ಸೌಳು ನೀರು), ಮೃದೋದಕ (ಸೀ ನೀರು), ಜೀವನ ಸತ್ವ ಪದಾರ್ಥಗಳು, ಆಹಾರ ನೀರುಗಳ ದೋಷಗಳಿಂದ ಬರುವ ರೋಗಗಳು, ಆಹಾರ ಸಾಮಗ್ರಿಗಳಲ್ಲಿ ಸೇರುವ ಕ್ರಿಮಿಕೀಟಕಗಳು ಮೊದ ಲಾದ ಆರೋಗ್ಯ ಶಾಸ್ತ್ರದ ವಿಷಯಗಳು ನಮ್ಮ ಅನ್ನ ನೀರುಗಳಲ್ಲಿ ಸಮಾ ವೇಶವಾಗುತ್ತವೆ. ಕಾಯಿಪಲ್ಯೆಗಳನ್ನು ಹೆಚ್ಚುವಾಗ ಕೈಗೆ ಗಾಯವಾದರೆ, ಅಡಿಗೆ ಮಾಡುವಾಗ ಕೈ ಸುಟ್ಟರೆ, ರೋಗಿಗಳ ಆರೈಕೆ ಮಾಡುವಾಗ, ಮೊದಲಾದ ಕೆಲಸಗಳಲ್ಲಿ ಪ್ರಥಮೋಪಚಾರ ಬರುವದು. ಹೀಗೆ ಬೇರೆ ಬೇರೆ ವಿಷಯಗಳಿಗೆ ಸಂಬಂಧಪಟ್ಟ ಎಷ್ಟೋ ಸಂಗತಿಗಳನ್ನು ಅಡಿಗೆಯ ಮನೆಯಲ್ಲಿ ನಡೆಯುವ ಕ್ರಿಯೆಗಳನ್ನು ಸಂಬಂಧಿಸಿ ಕಲಿಸಲು ಬರುವದು. ಇಂಥ ನಿತ್ಯ ಜೀವನದ ಸ್ವಾಭಾವಿಕ ಪ್ರಸಂಗಗಳನ್ನು ಬಿಟ್ಟು, ಕೃತ್ರಿಮ ಸನ್ನಿವೇಶಗಳನ್ನು ಕಲ್ಪಿಸಿಕೊಂಡು ಕಲಿಸುವದು ವಿಹಿತವಲ್ಲ. ಮೇಲೆ ಹೇಳಿದ ಉದಾಹರಣೆಗಳಲ್ಲಿ ಆಹಾರಶಾಸ್ತ್ರ, ಆರೋಗ್ಯಶಾಸ್ತ್ರ, ಪದಾರ್ಥ ವಿಜ್ಞಾನ, ರಸಾಯನಶಾಸ್ತ್ರ, ಪ್ರಥಮೋಪಚಾರ ಮುಂತಾದ ಸಾಮಾನ್ಯ ವಿಷಯಗಳು ಅಡಕವಾಗಿವೆ.

ಇವಲ್ಲದೆ, ಅನೇಕ ಆಹಾರ ಸಾಮಗ್ರಿಗಳ ತೂಕ, ಅಳತೆ, ಮಾಡುವ ಕ್ರಿಯೆಗಳು, ಅವುಗಳನ್ನು ಕೊಳ್ಳುವ ಕೆಲಸ, ತಮ್ಮ ಆಹಾರದ ಲೆಖ್ಖ ಪತ್ರ ಇಡುವ ಕೆಲಸ, ರಂಗವಲ್ಲಿ ಹಾಕುವದು, ಈ ಮೊದಲಾದ ಕ್ರಿಯೆಗಳಿಂದ

ಗಣಿತ, ಪೇಟಿಯ ಧಾರಣಿ, ಜಮಾ ಖರ್ಚು, ಭೂಮಿತಿ ಈ ವಿಷಯಗಳಿಗೆ ಸಂಬಂಧೀಕರಿಸಿ ಎಷ್ಟೋ ಸಂಗತಿಗಳನ್ನು ಸ್ವಾಭಾವಿಕವಾಗಿ ಕಲಿಸಲು ಸಾಧ್ಯವಿದೆ. ನಮ್ಮ ಆಹಾರ, ಬೇರೆ ಜನಾಂಗಗಳ ಆಹಾರ, ನಮ್ಮ ಉಡುಪು, ಬೇರೆ ಜನಾಂಗಗಳ ಉಡುಪು, ನಮ್ಮ ಮನೆ, ಬೇರೆ ಜನಾಂಗಗಳ ಮನೆ, ನಮ್ಮ ನಡೆನುಡಿ, ಇತರರ ನಡೆನುಡಿ ಹೀಗೆ ಸಾಮಾಜಿಕ ಅಭ್ಯಾಸವು ಮಕ್ಕಳ ವಯೋಮಾನಕ್ಕನುಸರಿಸಿ ವಿಕಾಸವಾಗಬೇಕು. ಈ ಕಾರಣ ಗಳ ಮೂಲಕ ಬಾಲಕ ಬಾಲಿಕೆಯರು ಕೂಡಿ ಅಡಿಗೆಯ ಕೆಲಸಗಳಲ್ಲಿ ಭಾಗ ವಹಿಸುವದು ಅಗತ್ಯ. ಇದು ಸ್ವಾವಲಂಬನ ಹಾಗೂ ಜೀವನ ಶಿಕ್ಷಣ ಈ ತತ್ವಗಳಿಗೆ ನಿಕಟ ಸಂಬಂಧವಾಗಿದೆ.

**(೪) ಸಾಂಸ್ಕೃತಿಕ ಚಟುವಟಿಕೆಗಳು** (Cultural activities):

ಮೂಲ ಶಿಕ್ಷಣ ಸಾಲೆಗಳಲ್ಲಿ ಅನೇಕ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ:– (೧) ಪುಣ್ಯತಿಥಿ ಹಾಗು ಹಬ್ಬಗಳ ದಿನಾಚರಣೆ (೨) ಪ್ರವಾಸಗಳು (೩) ಮನರಂಜನೆಯ ಕಾರ್ಯಕ್ರಮಗಳು (೪) ಸಾಹಿತ್ಯ ವಿಷಯಕ ಚಟುವಟಿಕೆಗಳು (೫) ಪ್ರದರ್ಶನ ಗಳು ಇತ್ಯಾದಿ.

**ಶಾಲಾ ಸಮಾರಂಭಗಳ ಮಹತ್ವ :**

ಶಾಲೆಯು ಸಾಮಾಜಿಕ ಸಂಸ್ಥೆ. ಅಲ್ಲಿ ಕೂಡಿ ಬಾಳುವ ಕಲೆಯನ್ನು ಮಕ್ಕಳು ಪ್ರತ್ಯಕ್ಷ ಜೀವನದ ಮುಖಾಂತರ ಕಲಿಯುವರು. ಮಕ್ಕಳ ಸಾಮಾ ಜಿಕ ಜೀವನಕ್ಕೆ ಸಂಬಂಧಪಟ್ಟ ಎಷ್ಟೋ ವಿಷಯಗಳು ಅಭ್ಯಾಸ ಪತ್ರಿಕಾ ತೀತ ಚಟುವಟಿಕೆಗಳೆಂದು ಕಲಿಸಲ್ಪಡುತ್ತಿದ್ದವು. ಆದರೆ ಈಗ ಅವೆಲ್ಲ ಪಠ್ಯ ವಸ್ತುಗಳ ಸಾಧನಗಳಾಗಿವೆ. ಹಬ್ಬ ಹಾಗು ಉತ್ಸವಗಳು ಸಾಮಾಜಿಕ ವಾತಾವರಣದ ಚಟುವಟಿಕೆಗಳು. ಅವುಗಳನ್ನು ಶಾಲೆಗಳಲ್ಲಿ ಯಾಕೆ ಆಚರಿಸ ಬೇಕು ? (೧) ಅವು ಮಕ್ಕಳ ಸಾಂಘಿಕ ಪ್ರವೃತ್ತಿಯ ಉದಾತ್ತೀಕರಣಕ್ಕೆ ಸಹಾಯಕವಾಗುತ್ತವೆ. (೨) ನಿಸರ್ಗದ ಚಮತ್ಕಾರಗಳಿಗೆ ಮನಸೋತು ದೇವರಲ್ಲಿ ಶ್ರದ್ಧೆಯನ್ನು ಕಲ್ಪಿಸಿಕೊಳ್ಳುವ ಸುಸಂಧಿಗಳು. (೩) ತನ್ನ ಜೀವ ನವು ಉದಾತ್ತಮಟ್ಟಕ್ಕೆ ಹೋಗಬೇಕೆಂದು ಬಯಸುವ ಸುದಿನಗಳು. (೪)

ಮಕ್ಕಳ ಒಲವು ನಿಲವುಗಳ ಪ್ರಕಾಶನಕ್ಕೆ ಅವಕಾಶ ದೊರೆಯುವದು. (೫) ಶಾಲೆಯನ್ನು ಅಲಂಕರಿಸುವಲ್ಲಿ ಅವರ ಕೌಶಲ್ಯವು ಉಪಯೋಗವಾಗುವದು. (೬) ಮಕ್ಕಳಲ್ಲಿ ಸೌಂದರ್ಯ ಭಾವನೆಯು ವಿಕಸಿತವಾಗುವದು. (೭) ವಿರಾಮ ಕಾಲದ ಸದುಪಯೋಗಕ್ಕೆ ಸುಸಂಧಿ ದೊರೆಯುವದು. (೮) ಮಕ್ಕಳಲ್ಲಿ ಬೆಳೆದ ಲಲಿತಕಲೆಗಳ ಆವಿರ್ಭಾವಕ್ಕೆ ಅವಕಾಶ ಸಿಗುವದು. (೯) ಮಕ್ಕಳಿಗೆ ತಮ್ಮ ವಿಚಾರಗಳನ್ನು ಪ್ರಕಟ ಮಾಡುಲು ಸಂಧಿ ಸಿಗುವದು. (೧೦) ಹಬ್ಬದ ದಿನದ ಕಾರ್ಯಕ್ರಮವನ್ನೆಲ್ಲ ಮಕ್ಕಳೇ ನಿರ್ವಹಿಸುವರು. ಅವರಿಗೆ ಈ ದಿಸೆಯಲ್ಲಿ ಅನುಭವ ದೊರೆಯುವದು.

ಶಾಲಾ ಸಮಾರಂಭಗಳನ್ನು ನಾಲ್ಕು ರೀತಿಯಾಗಿ ವಿಭಾಗಿಸಬಹುದು:— (೧) ಧಾರ್ಮಿಕ ಹಬ್ಬಗಳು. (೨) ನೈಸರ್ಗಿಕ ಅಥವಾ ಕೃಷಿ ಹಬ್ಬಗಳು. (೩) ರಾಷ್ಟ್ರೀಯ ಹಬ್ಬಗಳು. (೪) ಸಾಂಸ್ಕೃತಿಕ ಹಬ್ಬಗಳು.

**ಧಾರ್ಮಿಕ ಹಬ್ಬಗಳು:**

ಧಾರ್ಮಿಕ ದೃಷ್ಟಿಯಿಂದ ಆಚರಿಸುವ ಎಲ್ಲ ಹಬ್ಬ ಹುಣ್ಣಿವೆಗಳನ್ನು ಶಾಲೆಗಳಲ್ಲಿ ಆಚರಿಸುವ ಆವಶ್ಯಕತೆಯಿಲ್ಲ. ಸಾಮುದಾಯಿಕ ಜೀವನಕ್ಕೆ ಅಗತ್ಯವಾದವುಗಳನ್ನು ಆರಿಸಿಕೊಳ್ಳಬೇಕು. ಸಾಮಾಜಿಕ ಜೀವನಕೆ ಪೋಷಕವಾಗುವ ಹಾಗು ಸಾಂಸ್ಕೃತಿಕ ಪ್ರಗತಿಯ ಹೆಜ್ಜೆಗಳನ್ನು ತೋರಿ ಸುವ ಧಾರ್ಮಿಕ ಹಬ್ಬಗಳನ್ನು ಆಚರಿಸಬೇಕು. ಮುಖ್ಯ ಧರ್ಮಗಳ ಸಂಸ್ಥಾ ಪಕರ ದಿನಾಚರಣೆಯನ್ನು ಅವಶ್ಯವಾಗಿ ಮಾಡಬೇಕು. ಅದರಿಂದ ಅವರ ಕಾಲದ ಧಾರ್ಮಿಕ ಹಾಗು ಸಾಮಾಜಿಕ ವಿಚಾರಗಳ ಹಾಗು ಆ ಮಹಾ ಪುರು ಷರು ಮಾಡಿದ ಮಹಾಕಾರ್ಯದ ತಿಳಿವಳಿಕೆಯುಂಟಾಗುವದು. ಎಲ್ಲ ಧರ್ಮ ದವರ ಹಬ್ಬಗಳನ್ನು ಎಲ್ಲರೂ ಕೂಡಿ ಶಾಲೆಗಳಲ್ಲಿ ಆಚರಿಸುವುದರಿಂದ ಈ ಹಬ್ಬಗಳಿಗೆ ರಾಷ್ಟ್ರೀಯ ದೃಷ್ಟಿ ಬರುವದು. ಅಲ್ಲದೆ ಮಕ್ಕಳಲ್ಲಿ ಪರಧರ್ಮ ಸಹಿ ಷ್ಣುತೆ ಉಂಟಾಗುವದು. ಸರ್ವ ಧರ್ಮಗಳಲ್ಲಿ ಸಮಗೌರವ ತೋರಿಸ ಬೇಕೆಂಬ ಭಾವನೆಯು ಹುಟ್ಟಿಬೆಳೆಯುವದು. ಇದರಿಂದ ರಾಷ್ಟ್ರದ ಐಕ್ಯ ತೆಗೆ ಪೋಷಕವಾಗುವದು. ಈ ಉದಾತ್ತ ವಿಚಾರಗಳನ್ನು ಅನುಲಕ್ಷಿಸಿ ಹಬ್ಬಗಳನ್ನು ಆಚರಿಸಬೇಕು. ವಿಶಿಷ್ಟ ಹಬ್ಬಗಳಲ್ಲಿ ವಿಶಿಷ್ಟ ಆಹಾರವನ್ನು ತಕ್ಕೊಳ್ಳುತ್ತೇವೆ; ವಿಶಿಷ್ಟ ಉಡುಪು ಧರಿಸುತ್ತೇವೆ; ವಿಶಿಷ್ಟ ಆಟಗಳನು

ಆಡುತ್ತೇವೆ. ಆದರೆ ಅವೆಲ್ಲ ಸರಿಯಾಗಿ ಅರ್ಥವಾಗುವ ರೀತಿಯಲ್ಲಿ ಹಬ್ಬಗಳನ್ನು ಆಚರಿಸುವುದು ಅಗತ್ಯ. ಆದರಿಂದ ಮಕ್ಕಳಿಗೆ ಸಮಾಜ ವಿಜ್ಞಾನದ ಪರಿಜ್ಞಾನವುಂಟಾಗುವದು. ಉದಾ: ಧಾರ್ಮಿಕ ಪುರುಷರ ದಿನಾಚರಣೆ, ಗಣಪನೋತ್ಸವ, ದಸರೆ, ದೀಪಾವಳಿ, ಸಂಕ್ರಮಣ ಇತ್ಯಾದಿ.

**ನೈಸರ್ಗಿಕ ಅಥವಾ ಕೃಷಿ ಹಬ್ಬಗಳು :**

ಒಕ್ಕಲುತನವು ನಮ್ಮ ದೇಶದ ಮುಖ್ಯ ಉದ್ಯೋಗವು. ೧೦೦ಕ್ಕೆ ೭೦ರಷ್ಟು ಜನರು ಈ ಉದ್ಯೋಗದ ಮೇಲೆ ಅವಲಂಬಿಸಿರುವರು. ನಿಸರ್ಗ ಪೂಜೆಗೆ ಸಂಬಂಧ ಪಟ್ಟ ಅನೇಕ ಹಬ್ಬಗಳನ್ನು ಆಚರಿಸುವರು. ಬಿತ್ತುವ ಪೂರ್ವದಲ್ಲಿ, ಬಿತ್ತುವಾಗ, ಬೆಳೆ ಬಂದಾಗ, ಬೆಳೆ ಕೊಯ್ಯುವಾಗ ಈ ಹಬ್ಬಗಳು ಬರುವವು. ಅವು ಋತುಮಾನಗಳ ಬದಲಾವಣೆಗಳನ್ನು ಸೂಚಿಸುವವು. ಒಕ್ಕಲಿಗರು ತಮಗೆ ಸಹಾಯಕವಾದ ಭೂಮಿ, ಎತ್ತು ಹಾಗು ಇತರ ಸಾಧನಗಳನ್ನು ಬೇರೆ ಬೇರೆ ಕಾಲದಲ್ಲಿ ಪೂಜಿಸುವರು, ಮಣ್ಣೆತ್ತಿನ ಅಮಾವಾಸಿ, ನಾಗರ ಪಂಚಮಿ, ಕಾರುಹುಣ್ಣಿವೆ, ಶೀಗೆ ಹುಣ್ಣಿವೆ. ಶರತ್ ಪೌರ್ಣಿಮಾ ಮೊಲಾದವುಗಳು ಮಹತ್ವವಾದವುಗಳು. ಈ ಹಬ್ಬಗಳನ್ನು ಆಚರಿಸಲು ಹೊಲಗಳಿಗೆ ಹೋಗುವದು ಒಳಿತು. ನೈಸರ್ಗಿಕ ವಾತಾವರಣದ ಚಟುವಟಿಕೆಗಳನ್ನಾಗಿ ಆಯ್ದುಕೊಂಡು ಮಕ್ಕಳಿಗೆ ಭೂಮಿ, ಹವೆ, ವಿವಿಧ ಬೆಳೆಗಳು ಇತ್ಯಾದಿಗಳ ಬಗೆಗೆ ಪ್ರತ್ಯಕ್ಷ ಜ್ಞಾನ ಮಾಡಿ ಕೊಡಬೇಕು.

**ರಾಷ್ಟ್ರೀಯ ಹಬ್ಬಗಳು :**

ನಾಡಿನ ಚಾರಿತ್ರ್ಯವನ್ನು ಕಟ್ಟಿದ ಮಹಾಪುರುಷರ ದಿನಾಚರಣೆ, ಸ್ವಾತಂತ್ರ್ಯ ಹೋರಾಟದ ಮಹತ್ವದ ಘಟನೆಗಳು, ನಾಡಿನ ಭವಿತವ್ಯವನ್ನು ರೂಪಿಸಲು ಕಷ್ಟಪಟ್ಟ ಪುರುಷ ಸ್ತ್ರೀಯರ ದಿನಾಚರಣೆ ಮೊಲಾದವುಗಳನ್ನು ಆಚರಿಸಬೇಕು. ಉದಾ: ಸ್ವಾತಂತ್ರ್ಯ ದಿನ, ಅಗಸ್ಟ ೮, ಟಿಳಕ, ಗಾಂಧಿ, ಸುಭಾಸ ಮೊಲಾದವರ ಜಯಂತಿ. ಈ ಹಬ್ಬಗಳನ್ನು ಆಚರಿಸುವದರಿಂದ ಮಕ್ಕಳಿಗೆ ನಾಡಿನ ಚರಿತ್ರೆಯು ತಿಳಿಯುವದು. ಅವರಲ್ಲಿ ದೇಶಾಭಿಮಾನವು ಸ್ಫುಟಗೊಳ್ಳುವದು. ನಾಡಿನ ಹಿರಿಮೆಯ ಬಗ್ಗೆ ಆದರ ಹುಟ್ಟುವದು.

**ಸಾಂಸ್ಕೃತಿಕ ಹಬ್ಬಗಳು :**

ಮಹಾ ಕವಿಗಳ ಹಾಗು ವಿಜ್ಞಾನಿಗಳ ದಿನಾಚರಣೆ, ಸಾಹಿತ್ಯ ಕಲೆಗಳಿಗೆ ಸಂಬಂಧ ಪಟ್ಟ ಮಹತ್ವದ ದಿನಗಳು, ಶಾಲೆಯ ಹುಟ್ಟು ಹಬ್ಬ, ಪಾಲಕರ ದಿನ, ಮಕ್ಕಳ ದಿನ, ಶಾರೀರಕ ದಿನ ಇತ್ಯಾದಿ. ಇವು ಮಕ್ಕಳ ಚಟು ವಟಿಕೆಗಳನ್ನು ಪ್ರದರ್ಶಿಸಲಿಕ್ಕೆ ಮಹತ್ವದ ಪ್ರಸಂಗಗಳು. ಸಾಹಿತ್ಯ, ಸಂಗೀತ, ಚಿತ್ರಕಲೆ, ನೃತ್ಯ, ವಿಜ್ಞಾನ ಇವುಗಳಲ್ಲಿ ಮಕ್ಕಳ ಪ್ರೇಮವು ಹುಟ್ಟುವದು. ಪಾಲಕರು ತಮ್ಮ ಮಕ್ಕಳ ಕೃತಿಗಳನ್ನು ನೋಡಲು ಅವ ಕಾಶ ಸಿಗುವದು. ಗುರುಗಳಿಗೆ ಪಾಲಕರ ಸಹಕಾರ ದೊರೆಯುವದು. ಶಾಲೆಯ ಪ್ರತಿಷ್ಠೆ ಹೆಚ್ಚುವದು. ಇಂತಹ ಸಂದರ್ಭಗಳಲ್ಲಿ ಮಕ್ಕಳ ವಿವಿಧ ಚಟುವಟಿಕೆಗಳನ್ನು ತೋರಿಸುವ ಪ್ರದರ್ಶನಗಳನ್ನು ಏರ್ಪಡಿಸಬೇಕು.

**ಶಾಲಾ ಸಮಾರಂಭಗಳ ಸಂಘಟನೆ:**

ಯಾವ ಸಮಾರಂಭಗಳನ್ನು ಯಾವ ತಿಂಗಳಲ್ಲಿ ಜರುಗಿಸಬೇಕೆಂಬು ದನ್ನು ಮೊದಲೇ ನಿಶ್ಚಯಿಸಿಕೊಳ್ಳಬೇಕು. ಸಮಾರಂಭಕ್ಕೆ ಅಗತ್ಯವಿದ್ದ ಪೂರ್ವ ಸಿದ್ಧತೆಯನ್ನು ಮಾಡಿಕೊಳ್ಳಬೇಕು. ಮಕ್ಕಳಿಗೆ ಬೇರೆ ಬೇರೆ ಕೆಲಸ ಗಳ ಹೊಣೆ ಹಂಚಿ ಕೊಡಬೇಕು. ಎಲ್ಲ ಮಕ್ಕಳಿಗೂ ಏನಾದರೊಂದು ಕೆಲಸ ಸಿಗುವಂತೆ ಯೋಜಿಸಬೇಕು. ಎಲ್ಲರಿಗೂ ಆನಂದ ದೊರೆಯುವಂತಹ ಸನ್ನಿವೇಶಗಳಿರಬೇಕು. ಶಾಲೆಯ ಸ್ವಚ್ಛತೆ, ಅಲಂಕಾರ ಹಾಗೂ ಆಸನಗಳ ವ್ಯವಸ್ಥೆ ಮಾಡುವದು, ಸಭಗೆ ತಯಾರಿ ಮಾಡುವದು, ಅತಿಥಿಗಳನ್ನು ಕೂಡ್ರಿಸುವದು ಶಾರೀರಿಕ ಚಟುವಟಿಕೆಗಳು, ಧ್ವಜವಂದನೆ, ಸಾಮೂಹಿಕ ಪ್ರಾರ್ಥನೆ ಮೊದಲಾದವುಗಳನ್ನು ಏರ್ಪಡಿಸುವದು, ಅಗತ್ಯವಿದ್ದ ಸಾಧನ ಸಾಮುಗ್ರಿಗಳನ್ನು ಕೂಡಹಾಕುವದು, ಅಂದಿನ ದಿನದ ಮಹತ್ವದ ಬಗೆಗೆ ಸಾಹಿತ್ಯ (ಗದ್ಯ ಪದ್ಯ) ಕಲೆ ಹಾಕುವದು, ಸಂಗೀತ, ನೃತ್ಯ, ಅಭಿನಯ ಮೊದಲಾದ ಮನರಂಜನೆಯ ಕಾರ್ಯಕ್ರಮಗಳನ್ನು ಏರ್ಪಡಿಸುವದು ಮುಂತಾದ ಅನೇಕ ಚಟುವಟಿಕೆಗಳಲ್ಲಿ ಯುಕ್ತವಾದವುಗಳನ್ನು ಆರಿಸಿಕೊಂಡು ಅಂದಿನ ಕಾರ್ಯಕ್ರಮದ ರೂಪುರೇಷೆ ತಯಾರಿಸಬೇಕು. ಈ ಕಾರ್ಯ ನಿರ್ವಹ ಣಕ್ಕೆ ಬಾಲಕ ಬಾಲಿಕೆಯರ ಸಮಿತಿಗಳನ್ನು ನೇಮಿಸಬೇಕು. ಗುರುಗಳು

ಸಕಾಲ ಮಾರ್ಗದರ್ಶನ ಮಾಡಬೇಕು. ಈ ಸಮಾರಂಭಗಳನ್ನು ಏರ್ಪಡಿಸು ವಾಗ ಮಾಡಬೇಕಾದ ಅನೇಕ ಚಟುವಟಿಕೆಗಳನ್ನು ಅನುಬಂಧದ ಕೇಂದ್ರ ಗಳನ್ನಾಗಿ ಉಪಯೋಗಿಸಿಕೊಳ್ಳಬೇಕು; ಎಂದರೆ ಸಾಮಾಜಿಕ ವಾತಾ ವರಣವು ಫಲಪ್ರದವಾದಂತಾಗುವದು.

**ಪ್ರವಾಸಗಳು:**

ನೈಸರ್ಗಿಕ ಚಟುವಟಿಕೆಗಳನ್ನು ಕೈಕೊಳ್ಳುವಾಗ ಚಿಕ್ಕ ಪ್ರವಾಸ ಗಳನ್ನು ಏರ್ಪಡಿಸಬೇಕಾಗುವದು. ಹಳ್ಳ, ಹೊಳೆ. ಗುಡ್ಡ, ಕಂದಕ, ದಿಬ್ಬ, ಹಳ್ಳಿಯ ಹೊರನೋಟ ಮುಂತಾದವುಗಳನ್ನು ನಿರೀಕ್ಷಣೆ ಮಾಡಿಸಬೇಕು. ವನಭೋಜನಕ್ಕಾಗಿ ಕೃಷಿ ಹಬ್ಬಗಳಲ್ಲಿ ಹೊಲಗಳಿಗೆ ಹೋಗಬೇಕು. ಬೆಳೆ ಗಳ ನಿರೀಕ್ಷಣೆ ಮಾಡಿಸಬೇಕು. ಹಳ್ಳಿಯ ಸಮೀಪದ ಕೋಟೆ ಕೊತ್ತಲ ಗಳು, ಗವಿಗಳು ಮೊದಲಾದ ಐತಿಹಾಸಿಕ ಅಥವಾ ಭೌಗೋಲಿಕ ಮಹತ್ವ ವುಳ್ಳ ಸ್ಥಳಗಳಿಗೆ ಸಂದರ್ಶನ ಕೊಡಬೇಕು. ಈ ಚಟುವಟಿಕೆಗಳ ಮುಖಾಂತರ ಇತಿಹಾಸ, ಭೂಗೋಲ, ಸಾಮಾನ್ಯ ವಿಜ್ಞಾನ ಮೊದಲಾದ ವಿಷಯಗಳ ಸಂಬಂಧೀಕರಣ ಮಾಡಲು ಅನುಕೂಲವಾಗುವದು. ಅಲ್ಲದೆ ವರ್ಗದ ಕೋಣೆಯಲ್ಲಿ ಕೆಲಸ ಮಾಡುವದರಿಂದ ಉಂಟಾದ ಬೇಸರಕ್ಕೆ ಇದು ತಕ್ಕ ಔಷಧವೆಂದು ಹೇಳಬಹುದು. ಹೋಗುವ ಸ್ಥಳ, ಹತ್ತುವ ವೇಳೆ, ಬೇಕಾದ ಸಾಮಾನು, ಮಾಡಬೇಕಾದ ಕೆಲಸ ಮುಂತಾದವುಗಳ ಬಗೆಗೆ ಮೊದಲೇ ಆಲೋಚಿಸಬೇಕು. ಶಿಲ್ಪಕಲೆ, ಚಿತ್ರಕಲೆ ತೋರಿಸುವ ಗುಡಿ ಗೋಪುರ ಗಳನ್ನೂ, ಔದ್ಯೋಗಿಕ ಕೇಂದ್ರಗಳನ್ನೂ, ರೈಲು ನಿಲ್ದಾಣ, ವಿಮಾನ ನಿಲ್ದಾಣ ಹಡಗು ನಿಲ್ದಾಣ, ಅಂಚೆಯ ಮನೆ, ಸಂತೆ, ಜಾತ್ರೆ ಮೊದ ಲಾದವುಗಳನ್ನೂ ಸಂದರ್ಶಿಸುವ ಯೋಜನೆಗಳನ್ನು ಕೈಕೊಳ್ಳಬೇಕು. ಹೀಗೆ ಪಂಕ್ತಿ, ಪರ್ಯಟನ, ಪ್ರವಾಸ ಮುಂತಾದವುಗಳನ್ನು ಮಕ್ಕಳ ಸಹ ಕಾರದಿಂದ ಏರ್ಪಡಿಸಬೇಕು. ಇವುಗಳ ಮುಖಾಂತರ ಮಕ್ಕಳು ಅನೇಕ ಸಂಗತಿಗಳನ್ನು ಕಲಿಯುವರು. ಸಾಮುದಾಯಿಕ ಜೀವನದ ಮಹತ್ವವನ್ನು ಅರಿಯುವರು. ನಾಗರಿಕತೆಯ ಅನುಭವವನ್ನು ಪಡೆಯುವರು. ಇಂಥ ಸಮ ಯದಲ್ಲಿ ಮನರಂಜನೆಯ ಕಾರ್ಯಕ್ರಮಗಳನ್ನು ಏರ್ಪಡಿಸಬಹುದು. ಮಕ್ಕಳ

ಒಲವು ನಿಲವುಗಳ ವ್ಯಕ್ತತೆಗೆ ಅವಕಾಶ ದೊರೆಯುವದು. ವಿರಾಮ ಕಾಲದ ಸದುಪಯೋಗವೂ ಆಗುವದು.

**ಮನರಂಜನೆಯ ಕಾರ್ಯಕ್ರಮಗಳು:**

ವರುಷದಲ್ಲಿ ಶಾಲಾಸಮಾರಂಭಗಳು ಅನೇಕ ನಡೆಯುವವು. ಅಂತಹ ಪ್ರಸಂಗಗಳಲ್ಲಿ ಮನರಂಜನೆಯ ಕಾರ್ಯಕ್ರಮಗಳನ್ನೂ ಒಮ್ಮೊಮ್ಮೆ ಏರ್ಪಡಿಸಬೇಕು. ಕ್ರೈಸ್ತ, ಬುದ್ಧ, ಬಸವ, ಮಹಮ್ಮದ ಪೈಗಂಬರ ಮೊದಲಾದವರ ಜೀವನ ಚರಿತ್ರೆಗಳ ದೃಶ್ಯಗಳನ್ನು ಅಭಿನಯಿಸಬಹುದು. ನಿರಕ್ಷರತೆಯನ್ನು ನಿರ್ಮೂಲ ಮಾಡುವದಕ್ಕೆ, ಮದ್ಯಪಾನ ನಿರೋಧ ಮಾಡುವದಕ್ಕೆ, ಸಾಮಾಜಿಕ ಕೊಳೆ ಕಿತ್ತೊಗೆಯುವದಕ್ಕೆ ಸಹಾಯಕವಾಗುವ ಸಂಭಾಷಣಗಳನ್ನು ಮಕ್ಕಳಿಂದ ಮಾಡಿಸಬೇಕು. ದಾಸರ ಪದ, ಗೀಗೀ ಪದ, ಹಂತೀ ಪದ, ಲಾವಣಿ ಮೊದಲಾದ ಹಳ್ಳಿಯ ಹಾಡುಗಳನ್ನು ಮಕ್ಕಳು ಮಾರ್ಮಿಕವಾಗಿ ಅನ್ನಬೇಕು. ವಿವಿಧ ವಾದ್ಯ ಬಾರಿಸಲು ಅನುವು ಕೊಡಬೇಕು. ಮಕ್ಕಳ ಸ್ವಪ್ರಕಾಶನಕ್ಕೆ ಅವಕಾಶ ದೊರೆಯುವದು, ಅಲ್ಲದೆ ಹಳ್ಳಿಗರಿಗೆ ಬೋಧೆಯೂ ಮನರಂಜನೆಯೂ ಕೂಡಿಯೇ ಸಾಗುವದು, ಎಂದರೆ, ನಮ್ಮ ಶಾಲೆಯು ಹಳ್ಳಿಯ ಸುಧಾರಣೆಯ ಕೇಂದ್ರವಾಗುವದು. ಶಾಲೆಯ ವಿನೋದ ಸಂಘವು ಈ ಕಾರ್ಯ ನಡೆಯಿಸಬೇಕು.

**ಸಾಹಿತ್ಯ ವಿಷಯಕ ಚಟುವಟಿಕೆಗಳು:**

ಮಕ್ಕಳಿಗೆ ಯಾವದೊಂದು ವಿಷಯದ ಬಗೆಗೆ ಮಾತಾಡುವದನ್ನು ರೂಢಿ ಮಾಡಿಸಬೇಕು. ತಮ್ಮ ವಿಚಾರಗಳನ್ನು ಸುಸ್ಪಷ್ಟವಾಗಿ ಪರರ ಮುಂದೆ ಇಡುವುದು ಒಂದು ಕಲೆ. ಅದನ್ನು ಸಾಧಿಸಿಯೇ ಕೈವಶಮಾಡಿಕೊಳ್ಳಬೇಕು. ಚರ್ಚಾ ಸಂಘವೊಂದನ್ನು ಸ್ಥಾಪಿಸಬೇಕು. ಆಗಾಗ ಪ್ರಚಲಿತ ಇಲ್ಲವೆ ಉಪಯುಕ್ತ ವಿಷಯಗಳ ಬಗೆಗೆ ಚರ್ಚೆಗಳನ್ನು ಏರ್ಪಡಿಸಬೇಕು.

**ಬರೆಯುದೂ ಒಂದು ಕಲೆ**. ಅದನ್ನು ಮಕ್ಕಳು ರೂಢಿಯಿಂದಲೇ ಬೆಳೆಯಿಸಿಕೊಳ್ಳಬೇಕು. ನಿಬಂಧ, ಕತೆ, ಕವನ, ಪತ್ರ, ವರದಿ ಮುಂತಾದವುಗಳನ್ನೊಳಗೊಂಡ ಮಕ್ಕಳ ಕೈಬರೆಹ ಪತ್ರಿಕೆಯೊಂದನ್ನು ತಯಾರಿಸುವ ಯೋಜನೆಯನ್ನು ಕೈಕೊಳ್ಳಬೇಕು. ಇದರಿಂದ ಮಕ್ಕಳಲ್ಲಿ ಓದುವ ಚಟವು ಹೆಚ್ಚುವದು, ಬರೆಹ ಕಲೆ ಸಾಧಿಸುವದು.

**ಮಕ್ಕಳ ವಾಚನಾಲಯವು ಇರಬೇಕು:**

ಅವರ ವರ್ಗ ಹಾಗು ವಯೋಮಾನಕ್ಕೆ ಹೊಂದಿಕೆಯಾಗುವ ಅನೇಕ ಪುಸ್ತಕಗಳಿರಬೇಕು. ತಮ್ಮ ಬಿಡುವಿನಲ್ಲಿ ಮಕ್ಕಳು ಓದುವಂತೆ ಗುರುಗಳು ಪ್ರೋತ್ಸಾಹಿಸಬೇಕು. ದಿನಪತ್ರಿಕೆ, ವಾರಪತ್ರಿಕೆ, ಹಾಗು ಮಾಸಿಕ ಪತ್ರಿಕೆಗಳನ್ನು ತರಿಸುವ ವ್ಯವಸ್ಥೆ ಮಾಡಿದರಂತೂ ಬಹಳೇ ಒಳಿತು. ವಾಚನಾಲಯದ ಲೆಕ್ಕ ಪತ್ರ ಇಡುವ, ಪುಸ್ತಕ ಹಂಚುವ, ಅದರ ಸುವ್ಯವಸ್ಥೆ ಕಾಯುವ ಹೊಣೆಗಳನ್ನು ಮಕ್ಕಳ ಮಂತ್ರಿಮಂಡಲಕ್ಕೆ ಕೊಡುವದು ಒಳಿತು.

**ಪ್ರದರ್ಶನಗಳು :**

ವರುಷಕ್ಕೊಮ್ಮೆಯಾದರೂ ಶಾಲೆಯಲ್ಲಿ ಪ್ರದರ್ಶನವನ್ನು ಏರ್ಪಡಿಸಬೇಕು. ಅದರ ಮುಖ್ಯ ಉದ್ದೇಶವು ಮಕ್ಕಳ ಕೆಲಸವನ್ನು ಪ್ರದರ್ಶಿಸುವದು, ಹಾಗೂ ಪಾಲಕರ ಮುಂದೆ ಅದನ್ನು ಇಡುವದು. ಮೂಲ ಉದ್ಯೋಗದಲ್ಲಿ ಮಕ್ಕಳು ತೋರಿಸಿದ ಪ್ರಗತಿ ಪಟಗಳು, ಗ್ರಾಫುಗಳು, ಅವರು ತೆಗೆದ ನೂಲು, ನೇಯ್ದ ಬಟ್ಟೆ, ಮಾಡಿದ ಕೆಲಸ ಮುಂತಾದವುಗಳನ್ನೂ, ಅವರ ಮಾಸಿಕ ವರದಿ, ದಿನಚರಿ, ಬರೆಹ ಪುಸ್ತಕ ಮುಂತಾದವುಗಳನ್ನು, ಅವರ ಶಾಲೆ, ತೋಟ, ಅಡಿಗೆಯ ಮನೆ, ವಸತಿಗೃಹ ಇವುಗಳ ವೈಶಿಷ್ಟ್ಯಗಳನ್ನೂ, ಗುರುಗಳು ಮಾಡಿದ ಪ್ರಯೋಗಗಳನ್ನೂ ಅಚ್ಚುಕಟ್ಟಾಗಿ ಬೇರೆ ಬೇರೆ ವಿಭಾಗಗಳನ್ನು ಮಾಡಿ ಇಡಬೇಕು. ಅನವಶ್ಯಕ ಚಿತ್ರಪಟಗಳು ಅಲ್ಲಿ ಇರಕೂಡದು. ಮಕ್ಕಳ ಕೆಲಸಗಳ ನಿದರ್ಶನಗಳಿಗೇ ಪ್ರಾಶಸ್ತ್ಯ ಕೊಡಬೇಕು. ಶೈಕ್ಷಣಿಕ, ಆರ್ಥಿಕ ಹಾಗು ಸಮಾಜಿಕ ದೃಷ್ಟಿಯಿಂದ ಗುರುಗಳು ಪ್ರಯೋಗ ಮಾಡಿ, ಅವುಗಳ ಫಲವನ್ನು ತೋರಿಸುವ ಪಟಗಳನ್ನು ತಯಾರಿಸಬೇಕು. ಹೀಗೆ ಮಕ್ಕಳ ಹಾಗು ಗುರುಗಳ ಕೆಲಸಗಳ ನಿದರ್ಶನಗಳೇ ಪ್ರದರ್ಶನಗಳ ಸಾಧನ-ಸಾಮಗ್ರಿಗಳೆಂದು **ಶ್ರೀಮತಿ ಆಶಾದೇವಿ** ಅವರು ಹೇಳಿರುವರು. ಆರು ತಿಂಗಳಿಗೊಮ್ಮೆ ಪ್ರದರ್ಶನಗಳನ್ನು ಏರ್ಪಡಿಸಬೇಕು. ಹೀಗೆ ಮಾಡಿದಲ್ಲಿ ಮಕ್ಕಳು ಉತ್ಸಾಹದಿಂದ ದುಡಿಯುವರು. ಪ್ರದರ್ಶನಗಳಿಗಾಗಿ ತಯಾರಿಸಿದ ನಿದರ್ಶನಗಳೆಲ್ಲ ಅವರ ಕೆಲಸಗಳ ಸಾಕ್ಷಿ. ಪರೀಕ್ಷಾ ಪದ್ಧತಿಯನ್ನು ತೆಗೆದು ಹಾಕಲು ಇದೊಂದು ದೊಡ್ಡ ಸಾಧನವು. ಮಕ್ಕಳ ಅಭಿರುಚಿಗಳ ವ್ಯಕ್ತತೆಗೆ ಆತ್ಮಾನುಭವದ ಆವಿರ್ಭಾವಕ್ಕೆ ತಕ್ಕ ಸುಸಂಧಿಗಳು ದೊರೆ

ಯುವವು. ತಮ್ಮ ಕೆಲಸವನ್ನು ಪರಸ್ಪರರ ತುಲನಾತ್ಮಕ ದೃಷ್ಟಿ ಯಿಂದ ಪರಿಶೀಲಿಸಲು ಮಕ್ಕಳಿಗೆ ಅವಕಾಶ ದೊರೆಯುವದು. ಇದ ರಿಂದ ಉತ್ತಮ ಕೆಲಸ ಮಾಡಬೇಕೆಂಬ ಪ್ರೇರಣೆಯು ಮಕ್ಕಳಲ್ಲಿ ಉಂಟಾ ಗುವದು. ಪ್ರದರ್ಶನಗಳನ್ನು ಸಂಘಟಿಸುವಲ್ಲಿ ಮಕ್ಕಳಿಗೆ ಸ್ವಾನುಭವ ವುಂಟಾಗುವದು. ಪ್ರದರ್ಶನಗಳ ಉದ್ದಿಶ್ಯಗಳನ್ನು ಗಮನಿಸಿ, ಅವುಗಳನ್ನು ಶಾಲೆಗಳಲ್ಲಿ ಏರ್ಪಡಿಸಬೇಕು.

### ೫ ಸಾಮಾಜಿಕ ಚಟುವಟಿಕೆಗಳು:

ಮಗುವು ಸಂಘಜೀವಿಯಾಗಿ ಬೆಳೆಯಬೇಕು. ಪರೋಪಕಾರ ಬುದ್ಧಿ ಅವರಲ್ಲಿ ಹುಟ್ಟಬೇಕು. ಸಾಮಾಜಿಕ ಸೇವೆಯನ್ನು ಮಾಡುವ ನಾಗರಿಕ ನಾಗಬೇಕು. ಇದು ಮೂಲ ಶಿಕ್ಷಣದ ಸಂದೇಶ. ಶಾಲೆಯಲ್ಲಿರುವಾಗಲೇ ಅನೇಕ ಸಾಮಾಜಿಕ ಚಟುವಟಿಕೆಗಳನ್ನು ಮಾಡುವ ಸುಸಂಧಿಗಳನ್ನು ಮಕ್ಕಳಿಗೆ ಕಲ್ಪಿಸಿ ಕೊಡಬೇಕು.

ಹಳ್ಳಿಯ ಬೀದಿಗಳ ಸ್ವಚ್ಛತೆ, ಜನರ ಆರೋಗ್ಯ, ಓಣಿಗಳ ದುರಸ್ತಿ, ಕುಡಿಯುವ ನೀರಿನ ಭಾವಿಯ ಸ್ವಚ್ಛತೆ, ಗೊಬ್ಬರ ಜತನ ಮಾಡುವ ವ್ಯವಸ್ಥೆ ಮೊದಲಾದ ಕೆಲಸಗಳು ಹಳ್ಳಿಯ ಜನರ ಸೊಗಸು ಜೀವನಕ್ಕೆ ಅಗತ್ಯವಾದವುಗಳು. ಆದರೆ ಜನರ ದಾರಿದ್ರ್ಯ, ಅಜ್ಞಾನ ಹಾಗು ಆಲಸ್ಯ ತನ ಇವುಗಳ ಮೂಲಕ ಸಾರ್ವಜನಿಕ ಆರೋಗ್ಯ ಕೆಡುವ, ಊರಲ್ಲಿ ರೋಗ ಗಳು ಹುಟ್ಟುವ ಪ್ರಸಂಗಗಳು ಉಂಟಾಗುವವು. ಎಷ್ಟೋ ಸುಶಿಕ್ಷಿತರು ಸಹ ಸಾರ್ವಜನಿಕ ಆರೋಗ್ಯದ ಕಡೆಗೆ ಲಕ್ಷ್ಯ ಹಾಕುವದಿಲ್ಲ. ಊರ ಲ್ಲಿಯ ಹೊಲಸು ತೆಗೆಯುವದು, ಗೊಬ್ಬರ ಕುಣಿ ತೋಡುವದು, ಕುಡಿ ಯುವ ನೀರಿನ ಸ್ವಚ್ಛತೆ ಕಾಯುವದು, ರೋಗಗಳು ಹಬ್ಬಿದಾಗ ನಿವಾರ ಣೋಪಾಯಗಳನ್ನು ಕೈಕೊಳ್ಳುವದು ಮೊದಲಾದ ಸಾರ್ವಜನಿಕ ಹಿತದ ಕೆಲಸಗಳನ್ನು ಅಗತ್ಯವೆನಿಸಿದಾಗ ಏರ್ಪಡಿಸಬೇಕು. ಹಳ್ಳಿಯಲ್ಲಿ ಜಾತ್ರೆ ನೆರೆದಾಗ ಸಾರ್ವಜನಿಕ ಆರೋಗ್ಯ ಕಾಯುವದು ಅಗತ್ಯವು. ಸ್ಥಳಗಳ ಸ್ವಚ್ಛತೆ, ಕುಡಿಯುವ ನೀರಿನ ವ್ಯವಸ್ಥೆ, ಸಾರ್ವಜನಿಕ ಮಠಗಳಲ್ಲಿ ಜನ ರಿಗೆ ಆಹಾರ ನೀಡುವ, ನೀರು ಪೂರೈಸುವ ಹಾಗು ತೇರು ಎಳೆಯುವಾಗ

ಜನಸಂದಣಿಯಲ್ಲಿ ಅಪಘಾತಗಳು ಸಂಭವಿಸದಂತೆ ಎಚ್ಚರಪಡುವ, ಅಪ ಘಾತಗಳು ಘಟಿಸಿದಲ್ಲಿ ಪ್ರಥಮೋಪಚಾರ ಮಾಡುವ ಮುಂತಾದ ಅನೇಕ ಕೆಲಸಗಳನ್ನು ಸಮಾಜ ಸೇವೆಯ ದೃಷ್ಟಿಯಿಂದ ಮಕ್ಕಳು ಮಾಡಲು ಉದ್ಯುಕ್ತರಾಗಬೇಕು. ಇಂಥ ಪ್ರಸಂಗಗಳಲ್ಲಿ ಹಿರಿಯ ಬಾಲಕರ ಸ್ವಯಂಸೇವಕ ಪಥಕಗಳನ್ನು ತಯಾರು ಮಾಡಿ, ಗುರುಗಳು ಅವ ರೊಡನೆ ಬೆರೆತು, ಸಾಮಾಜಿಕ ಸೇವೆಯ ಚಟುವಟಿಕೆಗಳನ್ನು ನಿರ್ವ ಹಿಸಬೇಕು. ಹೀಗೆ ಮಾಡಿದಲ್ಲಿ ಆ ಹಳ್ಳಿಯು ಸ್ವಚ್ಛವಾಗುವದು, ಅಲ್ಲಿ ರೋಗಗಳು ಹಬ್ಬುವದಿಲ್ಲ; ಜನರ ಆರೋಗ್ಯ ಕೆಡುವದಿಲ್ಲ; ಶಿಸ್ತು ಸಂಘ ಟನೆಗಳು ನೆಲಸುವವು; ಜನರ ಜಗಳಗಳು ಕಡಿಮೆಯಾಗುವವು. ಪರ ಸ್ಪರ ಸಹಕಾರ, ಪ್ರೇಮ, ಸಹಾಯ ಮೊದಲಾದ ಸದ್ಗುಣಗಳು ಜನರಲ್ಲಿ ಬಿಂಬಿಸುವವು. ಜನತೆಯ ಸಾಮೂಹಿಕ ಜೀವನಕ್ಕೆ ಹೊಸ ಕಳೆಯುಂಟಾ ಗುವದು. ಮಕ್ಕಳ ಜೀವನದಲ್ಲಿಯೂ ಹೊಸ ತೇಜವುಂಟಾಗುವದು. ಈ ವಿವಿಧ ಚಟುವಟಿಕೆಗಳನ್ನು ಮಾಡುವಾಗ ಅವರಿಗೆ ಮಹತ್ತರ ವಾದ ವ್ಯಾವಹಾರಿಕ ಜ್ಞಾನವಾಗುವದು. ನಾಗರಿಕ ಜೀವನವು ನಿರ್ಮಾಣವಾಗುವದು. ಹಳ್ಳಿಯ ಉದ್ಧಾರವಾಗುವದು. ನಾಡಿಗೆ ಕಳೆ ಕಟ್ಟುವದು.

"ಭಾರತದ ಹಳ್ಳಿಗಳಲ್ಲಿ ಜೀವಂತ ಕಳೆ ತುಂಬಲು ಬಯಸುವೆ" ಎಂದು **ಗಾಂಧೀಜಿಯವರು** ಮೂಲ ಶಿಕ್ಷಣದ ಹೊಸ ದೃಷ್ಟಿಯನ್ನು ವಿವರಿಸುವಾಗ ಉದ್ಗಾರ ತೆಗೆದರು. ಮೂಲ ಶಿಕ್ಷಣವು ಹಳ್ಳಿಗರ ಜೀವನ ಮಟ್ಟವನ್ನು ಏರಿಸಬೇಕು; ಉದ್ಯಮ ಕೇಂದ್ರಗಳನ್ನು ಹೆಚ್ಚಿಸ ಬೇಕು; ಉತ್ಪಾದನ ಶಕ್ತಿಯನ್ನು ಬೆಳೆಯಿಸಬೇಕು; ಒಳ್ಳೆಯ ಜೀವನದ ಸುಗಮ ಹಾದಿಯನ್ನು ತೋರಿಸಬೇಕು ಎಂದು **ಗಾಂಧೀಜಿಯವರು** ಬಯಸಿ ದರು. ಈ ಕನಸು ನನಸಾಗಬೇಕಾದರೆ ಮಕ್ಕಳಲ್ಲಿ ಸಾಮಾಜಿಕ ದೃಷ್ಟಿ ವಿಕಸಿತವಾಗಬೇಕು; ಅದು ಪ್ರತ್ಯಕ್ಷ ಕಾರ್ಯದಲ್ಲಿ ಪರಿಣಮಿಸಬೇಕು. ಅಂತೆಯೇ ಭಾರತದ ಪುನರ್ರಚನೆಯ ವಿಧಾಯಕ ಕಾರ್ಯಕ್ರಮಗಳಲ್ಲಿ ಸಾಮಾಜಿಕ ಶಿಕ್ಷಣಕ್ಕೆ ಅಗ್ರಸ್ಥಾನವನ್ನು ಕೊಡಲಾಗಿದೆ. ಸರ್ವೋದಯ ಸಮಾಜದವರೂ ಈ ಕಾರ್ಯದಲ್ಲಿ ಮುಂದಡಿ ಇಟ್ಟುದು ಸ್ತುತ್ಯವು.

ಮಕ್ಕಳು ಕೈಕೊಳ್ಳಬಹುದಾದ ಕೆಲವು ಸಾಮಾಜಿಕ ಚಟುವಟಿಕೆಗಳನ್ನು ವಿವರಿಸಿದಂತಾಯಿತು. ಮಕ್ಕಳಲ್ಲಿ ಸಾಮಾಜಿಕ ದೃಷ್ಟಿ ಸ್ವಾಭಾವಿಕವಾಗಿ ಹುಟ್ಟಬೇಕಾದರೆ ಸಾಮಾಜಿಕ ಅಭ್ಯಾಸವು ಅಗತ್ಯ. ನಮ್ಮ ಗ್ರಾಮದ ಅಭ್ಯಾಸವನ್ನೇ ಮೊದಲು ಮಾಡಬೇಕು. ಗ್ರಾಮದ ಅಭ್ಯಾಸ (Village Survey) ವನ್ನು ಹೇಗೆ ಮಾಡಬೇಕೆಂಬುದರ ಬಗ್ಗೆ **ಶ್ರೀ. ಜೆ. ಸಿ. ಕುಮಾರಪ್ಪ** ಹಾಗು **ರೇ. ರಾಯಬರ್ನ** ಅವರು ಸೂಕ್ತ ಸೂಚನೆಗಳನ್ನು ಕೊಟ್ಟಿದ್ದಾರೆ. ಅವರ ವಿಚಾರಗಳನ್ನು ಸಂಗ್ರಹಿಸಿ ಗ್ರಾಮದ ಅಭ್ಯಾಸದ ಬಗ್ಗೆ ಕೆಳಗೆ ಕೊಡಲಾಗಿದೆ.

**ಗ್ರಾಮ ಪರಿಚಯ**:– ಗ್ರಾಮದ ಹೆಸರು — — ದಿನಾಂಕ — —

೧. ಜನವಸತಿ:—ಗಂಡಸರು, ಹೆಂಗಸರು ಹಾಗು ಮಕ್ಕಳು, ಸಾಕ್ಷರರು, ನಿರಕ್ಷರಿಗಳು, ಶಾಲೆಗೆ ಹೋಗುವ ಮಕ್ಕಳು, ಶಾಲೆಗೆ ಹೋಗದ ಮಕ್ಕಳು, ಉದ್ಯೋಗಿಗಳು, ಪರಾವಲಂಬಿ ಪ್ರೌಢರು ಇತ್ಯಾದಿ.

೨. ಮನೆಗಳು:—ಮಣ್ಣಿನವು, ಕಲ್ಲಿನವು (ಕಚ್ಚಾ ಅಥವಾ ಪಕ್ಕಾ), ಗುಡಿಸಲುಗಳು ಇತ್ಯಾದಿ.

೩. ಸಾಮಾಜಿಕ ಸಂಸ್ಥೆಗಳು:— ಗುಡಿ, ಮಸೀದೆ, **ಚರ್ಚ,** ಬಸದಿ, ಸಹಕಾರೀ ಸಂಘ, ಬ್ಯಾಂಕ, ದವಾಖಾನೆ, ಅಂಚೆಯ ಮನೆ, ವಾಚನಾಲಯ, ಸಮಾಜ ಸೇವಾಸಂಘ, ಸಾಲೆಗಳು, ಪ್ರೌಢರ ವರ್ಗ ಇತ್ಯಾದಿ.

೪. ಸಾಮಾಜಿಕ ನಿರೀಕ್ಷಣೆ:—ಹರಿಜನರಿಗೆ ನೀರಿನ ಪೂರೈಕೆ, ದೇವ ಮಂದಿರಗಳಲ್ಲಿ ಪ್ರವೇಶ, ಶಾಲೆಯಲ್ಲಿ ಭೇದ ನಿರ್ಮೂಲನ, ಬಯಲಾಟ, ಸಿನೇಮಾ, ನಾಟಕ ಹಾಗು ಇತರ ಮನರಂಜನೆಯ ಕಾರ್ಯಕ್ರಮಗಳು, ಉತ್ಸವಗಳು, ಬಾಲವಿವಾಹ, ಕೋರ್ಟ ಕಚೇರಿ ಹತ್ತುವ ಜನರು,(ಜಗಳಗಳು), ಮದ್ಯಪಾನ ಮಾಡುವ ಜನರು, ಬೀಡಿ ಸೇದುವ ಜನರು, ಚಹಾ ಕುಡಿಯುವ ಜನರು, ಕಳೆದ ವರುಷದಲ್ಲಿ ರೋಗದ ಪ್ರಸಾರ, ಕೈಕೊಂಡ ಉಪಾಯ, ಭಾವಿಗಳು, ಕೆರೆ, ಪಾಯಖಾನೆಗಳ, ಸ್ವಚ್ಛತೆ ಹಾಗು ಆರೋಗ್ಯದ ಉಪಾಯಗಳು ಇತ್ಯಾದಿ.

೫. ವ್ಯವಹಾರ:—ಹಳ್ಳಿಯಲ್ಲಿಯೇ ಬೆಳೆಯುವ, ತಯಾರಾಗುವ, ಹೊರಗಿನಿಂದ ಬರುವ ಜೀವನೋಪಯೋಗಿ ಪದಾರ್ಥಗಳು, ಅಂಗಡಿಗಳು ಗಿರಣಿಗಳು, ಸಂತೆ ಇತ್ಯಾದಿ.

೬. ಧಾರ್ಮಿಕ ಅಭ್ಯಾಸ:—ಮುಖ್ಯ ಧರ್ಮಗಳು, ಚಿಕ್ಕ ಪಂಗಡಗಳು, ಪರಸ್ಪರ ಬಳಿಕೆ, ಕಲಹಗಳು, ಜಾತ್ರೆ, ಉತ್ಸವಗಳು ಇತ್ಯಾದಿ.

೭. ಉದ್ಯೋಗಗಳು:– ಮುಖ್ಯ ಹಾಗು ಪೂರಕ ಉದ್ಯಮಗಳು, ದೊರೆಯುವ ಕಚ್ಚಾ ಮಾಲು, ಹೊರಗಿನಿಂದ ಬರುವ ಕಚ್ಚಾ ಮಾಲು, ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿದವರ ಸಖ್ಯೆ, ಇತ್ಯಾದಿ.

೮. ಇತಿಹಾಸ:—ಹಳ್ಳಿಯ ಚರಿತ್ರೆ, ಕೋಟೆ, ಕಟ್ಟಡ, ಗತಕಾಲದ ಅವಶೇಷಗಳು ಇತ್ಯಾದಿ.

೯. ಭೂಗೋಲ:— ಹೊಳೆ, ಹಳ್ಳ, ತಗ್ಗು, ದಿನ್ನೆ, ಇತ್ಯಾದಿ ಬೆಳೆಗಳು ಹಾಗು ಭೂಮಿಯ ಗುಣ. ಬೇಸಾಯದ ಹಾಗು ತೋಟಪಟ್ಟಿಯ ಅನುಕೂಲತೆಗಳು, ದನಕರುಗಳು, ಹೈನದ ಪೂರೈಕೆ, ಮಳೆ, ಉಷ್ಣತೆಯ ಪ್ರಮಾಣ, ಹವೆ, ಗಿಡಗಳು ಹಾಗು ಅವುಗಳ ಉಪಯೋಗ, ಕಾಡು ಪಶುಗಳು ಹಾಗು ಪಕ್ಷಿಗಳು ಇತ್ಯಾದಿ.

೧೦. ಹಳ್ಳಿಯ ಆಡಳಿತ:– ಗೌಡ, ಕುಲಕರ್ಣಿ, ಹಿರಿಯರು, ಪಂಚಾಯತಿ ಕಚೇರಿ, ಅದರ ಸದಸ್ಯರ ಆಯ್ಕೆ, ಅದರ ಕರ್ತವ್ಯಗಳು ಇತ್ಯಾದಿ.

**ಸೂಚನೆ:** ಮೇಲಿನ ವರ್ಗಗಳ ಬಾಲಕರಿಗೆ ಕೆಲಸ ಹಂಚಿ ಕೊಡಬೇಕು. ಇಬ್ಬಿಬ್ಬರು ಒಂದೊಂದು ಭಾಗ ಹಂಚಿಕೊಂಡು ವಿಷಯ ಸಂಗ್ರಹಿಸಬೇಕು. ರವಿವಾರ ಇಲ್ಲವೆ ಬಿಡುವಿನ ದಿನಗಳಲ್ಲಿ ಈ ಕೆಲಸ ಮಾಡಬೇಕು. ನಕ್ಷೆ, ಪಟ, ಗ್ರಾಫುಗಳನ್ನು ತಯಾರಿಸುವ ಚಟುವಟಿಕೆಗಳನ್ನು ಕೊಡಬೇಕು. ಗುರುಗಳು ಯೋಗ್ಯ ಸಲಹೆ ಕೊಡಬೇಕು. ಪ್ರತಿ ವರುಷ, ಪರಿಶೀಲಿಸಬೇಕು, ವಿಶೇಷ ಮಾಹಿತಿ ಸೇರಿಸಬಹುದು.

---

## ೫ ವಿದ್ಯಾರ್ಥಿಗಳ ಪ್ರಗತಿ ಪರಿಶೀಲನೆ

೭ ವರುಷಗಳ ವರೆಗಿನ ಮೂಲ ಶಿಕ್ಷಣವನ್ನು ಮುಗಿಸಿದ ಬಾಲಕರ ಶಿಕ್ಷಣ ಮಟ್ಟವನ್ನು ಹೇಗೆ ತಿಳಿಯಬೇಕೆಂಬುದು ಒಂದು ದೊಡ್ಡ ಸಮಸ್ಯೆ. ಇಂಗ್ಲಿಷ ವಿಷಯವನ್ನುಳಿದು ಹಿಂದುಸ್ತಾನಿ ವಿಷಯವನ್ನು ಸೇರಿಸಿ ಮ್ಯಾಟ್ರಿಕ್ ಪರೀಕ್ಷೆಗೆ ಅವಶ್ಯವಿದ್ದಷ್ಟು ಜ್ಞಾನವಾಗುವದೆಂದು ಒಮ್ಮೆ ಗಾಂಧೀಜಿಯವರು ಹೇಳಿದರು. ಅದರಿಂದ ಈ ಅಳತೆಗೋಲಿನಿಂದ ಮಕ್ಕಳ ಪ್ರಗತಿ ಪರೀಕ್ಷಿಸಬೇಕೆಂದು ಕೆಲವರು ಸೂಚಿಸಬಹುದು. ಮ್ಯಾಟ್ರಿಕ್ ಪರೀಕ್ಷೆಗೆ ಬೇಕಾದ ಅಭ್ಯಾಸ ವಿಷಯ ಪತ್ರಿಕೆಯನ್ನು ಇಲ್ಲಿ ಸೇರಿಸಿಲ್ಲ. ಪ್ರಾಥಮಿಕ ಶಿಕ್ಷಣದ ಅವಧಿಯ ಮಕ್ಕಳಿಗೆ ಉಚಿತವಾಗುವ ಪ್ರತ್ಯೇಕ ಅಭ್ಯಾಸ ಪತ್ರಿಕೆಯನ್ನು ತಯಾರಿಸಲಾಗಿದೆ. ಅದನ್ನು ಅನುಸರಿಸಲು ಪ್ರಯೋಗ ಮಾಡಿದೆ. ಈ ಅಭ್ಯಾಸ ಪತ್ರಿಕೆಯಂತೆಯಾದರೂ ಪರೀಕ್ಷಿಸ ಬೇಕಲ್ಲವೇ ಎಂದು ಕೇಳಬಹುದು; ಆದರೆ ಮೂಲ ಶಿಕ್ಷಣದ ಮೂಲ ಸಿದ್ಧಾಂತವನ್ನು ನೆನಪಿಗೆ ತಂದುಕೊಳ್ಳಬೇಕು. ಮೂಲ ಶಿಕ್ಷಣವು ಕ್ರಿಯಾ ತ್ಮಕವಾದುದು. ವಿಷಯ ಪ್ರಧಾನವಾದುದಲ್ಲ. ಈಗಿನ ಪರೀಕ್ಷಾ ಪದ್ಧ ತಿಯು ವಿಷಯ ಪ್ರಧಾನ ಶಿಕ್ಷಣದ ಮರಿ. ನಿರುಪಯುಕ್ತ ವಿಷಯ ಗಳನ್ನು ಹೇಗಾದರೂ ಪಾಠ ಮಾಡಿ, ವಿದ್ಯಾಭ್ಯಾಸ ಮುಗಿಸುವ ಹಟ ಯೋಗದ ಪ್ರಯೋಗವು ಅವಶ್ಯವಿಲ್ಲ. ಮೂಲ ಶಿಕ್ಷಣದ ಯೋಜನೆ ಯಲ್ಲಿ ಪರೀಕ್ಷೆಯ ದೃಷ್ಟಿಕೋನವೇ ಬೇರೆಯಾಗಿದೆ. ಮಕ್ಕಳ ಪ್ರತ್ಯಕ್ಷ ಕೃತಿಗಳನ್ನೂ, ಅವುಗಳ ಮುಖಾಂತರ ಅವರಿಗುಂಟಾದ ಜೀವನಾವಶ್ಯಕ ಜ್ಞಾನವನ್ನೂ ಯೋಗ್ಯ ಸನ್ನಿವೇಶಗಳ ಮುಖಾಂತರವೇ ನಿರೀಕ್ಷಿಸಬೇಕು. ಎಂದರೆ ಅವರ ನಿಜವಾದ ಪ್ರಗತಿ ಹೊರಹೊಮ್ಮುವದು. ಶಿಕ್ಷಣವು ಮಗು ವಿನ ಭಾಷೆ (ಪ್ರಾದೇಶಿಕ ಭಾಷೆ) ಯ ಮುಖಾಂತರ ಸಾಗುವದರಿಂದ ಮ್ಯಾಟ್ರಿಕ್ ವಿಷಯಗಳ ಜ್ಞಾನವನ್ನು ಮೂಲ ಶಿಕ್ಷಣದ ಅವಧಿಯಲ್ಲಿಯೇ ಅರಗಿಸಿಕೊಳ್ಳುವದು ಸಾಧ್ಯವಾಗುವದೆಂದೂ, ಮ್ಯಾಟ್ರಿಕ್ ವಿದ್ಯಾರ್ಥಿಗಳಿಗೆ

ಕೆಲ ವಿಷಯಗಳನ್ನು ಆಂಗ್ಲ (ಪರ) ಭಾಷೆಯ ಮುಖಾಂತರ ಕಲಿಸುವದರಿಂದ ಅವುಗಳನ್ನು ಜೀರ್ಣಿಸಿಕೊಳ್ಳಲು ಮಕ್ಕಳಿಗೆ ಜಡವಾಗುವದೆಂದೂ ಅದರಿಂದ ವಿದ್ಯಾಭ್ಯಾಸದ ಅವಧಿಯು ದೀರ್ಘವಾಗಿ, ಕಾಲಹರಣವಾಗುವದೆಂದೂ ಗಾಂಧೀಜಿಯವರ ಮತವಿತ್ತು. ಅವರ ಈ ಉದ್ದೇಶವನ್ನು ಅರಿಯಬೇಕು. ಕೃತಿ ಮೂಲ ಶಿಕ್ಷಣದಲ್ಲಿ ಸ್ಥಳಿಕ ಪರಿಸ್ಥಿತಿಗನುಸರಿಸಿ ಕೆಲವೊಂದು ವಿಷಯಗಳ ಜ್ಞಾನವು ಕೆಲವು ಶಾಲೆಗಳಲ್ಲಿ ಅಭ್ಯಾಸ ಪತ್ರಿಕೆಯಲ್ಲಿ ತೋರಿಸಿದ್ದಕ್ಕಿಂತ ಹೆಚ್ಚು ಆಗಬಹುದು, ಬೇರೆ ಕೆಲವು ಶಾಲೆಗಳಲ್ಲಿ ಕಡಿಮೆಯಾಗಬಹುದು. ಆದರೆ ಆ ವಿಷಯಗಳನ್ನು ಕಲಿತ ಉದ್ದಿಶ್ಯಗಳೂ, ಅವುಗಳಲ್ಲಿ ಅಡಕವಾದ ತತ್ವಗಳೂ ಮಕ್ಕಳಿಗೆ ಪರಿಚಿತವಾಗಿವೆಯೋ ಇಲ್ಲವೋ ಎಂಬುದನ್ನು ಮಾತ್ರ ಪರೀಕ್ಷಿಸಬೇಕು. ಎಲ್ಲೋ ಮೂಲೆಯ ಪ್ರಶ್ನೆಗಳನ್ನು ಕೇಳಿ ಮಕ್ಕಳನ್ನು ಪರೀಕ್ಷಾ ಜಾಲದಲ್ಲಿ ಕೆಡವಿ, ಜೀವನವನ್ನು ಹಾಳು ಮಾಡುವ ಗೊಡವೆಗೆ ಇನ್ನು ಸಾಗಬಾರದು.

೧೯೪೦-೪೨ನೆಯ ವರುಷವು ಶಿಕ್ಷಣ ಪ್ರಯೋಗದ ನಾಲ್ಕನೆಯ ವರುಷವು. ಆಗ ಹಿಂದುಸ್ತಾನೀ ತಾಲೀಮಿ ಸಂಘದವರು ಮೂಲ ಶಿಕ್ಷಣ ಶಾಲೆಗಳಲ್ಲಿಯ ಮಕ್ಕಳ ಪ್ರಗತಿಯನ್ನು ಪರಿಶೀಲಿಸುವ ಪ್ರಯತ್ನ ಮಾಡಿದರು. ಬಿಹಾರದ ಪ್ರಾಯೋಗಿಕ ಕ್ಷೇತ್ರವನ್ನು ಆರಿಸಿಕೊಂಡರು. ಅದರ ಪರಿಣಾಮವಾಗಿ ಅವರು ಕೆಳಗಿನ ಸಂಗತಿಗಳನ್ನು ಕಂಡು ಹಿಡಿದರು.

೧. ಮೂಲ ಉದ್ಯೋಗದಲ್ಲಿ ಮಕ್ಕಳ ಒಲವು ಹುಟ್ಟಿದೆ. ಹಸ್ತ ಕೌಶಲ್ಯ ಹೆಚ್ಚುತ್ತಿದೆ. ವಿವಿದ ಕ್ರಿಯೆಗಳನ್ನು ಶಾಸ್ತ್ರೀಯವಾಗಿ ಮತ್ತು ಬುದ್ಧಿಯನ್ನು ಬಳಸಿ ಕಲಿಯುತ್ತಿದ್ದಾರೆ. (೨) ಕೆಲಸದ ಮುಖಾಂತರ ಮಕ್ಕಳು ವಿದ್ಯಾಭ್ಯಾಸ ಪಡೆಯುತ್ತಿರುವುದರಿಂದ ಅವರಲ್ಲಿ ಸ್ವಶಿಸ್ತು ಉಂಟಾಗುತ್ತದೆ. ವರ್ಗದ ಕೋಣೆಯಲ್ಲಿಯೂ, ಆಟದ ಬಯಲಿನಲ್ಲಿಯೂ ಮಕ್ಕಳು ಕಲೆತಾಗ, ಗುದ್ದಾಡುವ-ಗೊಂದಲ ಮಾಡುವ ಪ್ರವೃತ್ತಿ ಕಡಿಮೆಯಾಗುತ್ತಿದೆ. ಅವರಲ್ಲಿ ಕಾರ್ಯ ನಿರ್ವಹಣೆಯ ಹೊಣೆ ಹೆಚ್ಚುತ್ತಿದೆ. (೩) ಹಿಂದುಳಿದ ಸಮಾಜದ ಮಕ್ಕಳ ಹಾಗು ಬುದ್ಧಿ ಮಾಂದ್ಯರ ಪ್ರಗತಿಯನ್ನು ನಿರೀಕ್ಷಿಸಲಾಯಿತು. ಈಗ ಪ್ರಶ್ನೆಗಳನ್ನು ತೀವ್ರ ತಿಳಿದುಕೊಳ್ಳುವ ಹಾಗು

ಯೋಗ್ಯ ಉತ್ತರಗಳನ್ನು ಕೊಡುವ ಸಾಮರ್ಥ್ಯವು ಅವರಲ್ಲಿ ಬೆಳೆಯು ತ್ತಿದೆ. (೪) ವೃತ್ತಿ ಮೂಲ ಶಿಕ್ಷಣದಿಂದ ಬುದ್ಧಿಯ ವಿಕಾಸ ಆಗಬೇಕು. ಆಗುತ್ತಿದೆ. ಮಕ್ಕಳು ಚಪಲರಾಗಿದ್ದಾರೆ. ಆಲಸಿಗಳಲ್ಲಿಯೂ ಉತ್ಸಾಹ ತುಂಬಿ ಬರುತಿದೆ; ಅವರಲ್ಲಿ ಉತ್ತಮ ಚಟಗಳು ನೆಲೆಗೊಳ್ಳುತ್ತವೆ. ಬುದ್ಧಿಯಿಂದಲೂ ಚುರುಕಾಗುತ್ತಿದ್ದಾರೆ. (೫) ಕೈಕೊಂಡ ಕೆಲಸವನ್ನು ಪೂರ್ತಿ ಮಾಡುವ ಹಾಗು ಶಿಸ್ತಿನಿಂದ ಮಾಡುವ ಚಟವು ಮಕ್ಕಳಲ್ಲಿ ಹುಟ್ಟಿ ಬೆಳೆಯಬೇಕು. ಅದು ಹುಟ್ಟಿದೆ, ಬೆಳೆಯಲು ಇನ್ನೂ ಅವಕಾಶ ಬೇಕು. (೬) ಉತ್ತಮ ಕೆಲಸದಲ್ಲಿ ಮಕ್ಕಳು ಅಭಿರುಚಿ ತೋರಿಸುವಂತಾಗಬೇಕು, ಆನಂದವನ್ನು ಪಡೆಯುವಂತಾಗಬೇಕು. ಇದು ಕೆಲ ಮಕ್ಕಳಲ್ಲಿ ಒಡ ಮೂಡಿದೆ; ಎಲ್ಲರಲ್ಲಿಯೂ ಪರಿಣಮಿಸಬೇಕಾದರೆ, ಇದು ಕಾಲ ಗತಿಸ ಬೇಕು. (೭) ಮಕ್ಕಳ ಕುತೂಹಲವನ್ನು ಕೆರಳಬೇಕು; ಶೋಧಕ ಪ್ರವೃ ತ್ತಿಯನ್ನು ಪ್ರಚೋದಿಸಬೇಕು. ಶಿಕ್ಷಕರು ಈ ದಿಸೆಯಲ್ಲಿ ಪ್ರಯತ್ನಿಸುತ್ತಿ ದ್ದಾರೆ. (೮) ಮಕ್ಕಳು ಸಾಮಾಜಿಕ ವಾತಾವರಣವನ್ನು ಅರಿಯು ತ್ತಿದ್ದಾರೆ. ನೈಸರ್ಗಿಕ ವಾತಾವರಣದಲ್ಲಿ ಅವರು ಬೆಳೆಯಲು ಸಾಕಷ್ಟು ಸೌಕರ್ಯಗಳಿಲ್ಲ. ಇದರಲ್ಲಿ ಮುನ್ನಡೆ ಬೇಕು. (೯) ಪರಸ್ಪರರ ಸಹಕಾರ ಹಾಗು ಸೇವಾ ಬುದ್ಧಿ ಇವು ಮಕ್ಕಳಲ್ಲಿ ಹುಟ್ಟಿ ಬೆಳೆಯುತ್ತಿವೆ. ಶಿಕ್ಷಣವು ಸಾಹಕಾರಿಕ ಸಾಹಸವೆಂಬುದರ ಅರಿವು ಅವರ ಹೃದಯದಲ್ಲಿ ಒಡಮೂಡು ವಂತಾಗಬೇಕು. (೧೦) ಮಕ್ಕಳಲ್ಲಿ ಸ್ವಚ್ಛತೆಯ ಕಲ್ಪನೆಯು ಬೆಳೆಯು ತ್ತಿದೆ. ಗ್ರಾಮ ಸ್ವಚ್ಛತೆಯ ಚಟುವಟಿಕೆಗಳಲ್ಲಿಯೂ ಉತ್ಸಾಹದಿಂದ ಭಾಗ ವಹಿಸುತ್ತಿರುವದು ಕಂಡು ಬಂದಿದೆ. (೧೧) ಸಾಮಾನುಗಳನ್ನೆಲ್ಲ ಅವ್ಯವಸ್ಥಿತವಾಗಿ ಒಗೆದ ಒಂದು ವರ್ಗದ ಕೋಣೆಯನ್ನು ಮಕ್ಕಳಿಗೆ ತೋರಿಸಿ, ಅಲ್ಲಿ ಏನು ಕೊರತೆಯಿದೆ ಎಂದು ಕೇಳಲಾಗಿ, ಅವರು ಅದನ್ನು ಕೂಡಲೇ ಕಂಡು ಹಿಡಿದು, ಸಾಮಾನುಗಳನ್ನು ಅಚ್ಚುಕಟ್ಟಾಗಿ ಹೊಂದಿಸಿ ಟ್ಟರು. ಮಕ್ಕಳಲ್ಲಿ ಅಚ್ಚುಕಟ್ಟುತನದ ಕಲ್ಪನೆಯಾಗುತ್ತಿದೆ. ಶಿಕ್ಷಕರೂ ಮೇಲ್ವಿಚಾರಕರೂ ಇತ್ತ ಗಮನ ಕೊಡುವದು ಅಗತ್ಯವಿದೆ (೧೨) ಮಕ್ಕ ಳಲ್ಲಿ ನಾಚುಬುರುಕತನ, ಅಂಜುಬುರುಕತನಗಳು ಮಾಯವಾಗುತ್ತಿವೆ ಧೈರ್ಯ ದಿಂದ ಮಾತಾಡುತ್ತಾರೆ. ವಿಚಾರ ಸರಣಿ ಸ್ಫುಟವಾಗುತ್ತಿದೆ. ಒಂದು

ಸಾಲೆಯಲ್ಲಿ ಒಂದು ಕಾರ್ಯಕ್ರಮವನ್ನು ಕೈಕೊಳ್ಳಲಾಯಿತು. ಬೇರೆ ಬೇರೆ ಸಾಲೆಗಳ ಮಕ್ಕಳೂ ಅಲ್ಲಿ ಭಾಗ ವಹಿಸಿದ್ದರು. ಅಂದು ಅವರು ತೋರಿಸಿದ ಅಭಿನಯ ಕಲೆಯು ಉತ್ತಮ ತರಗತಿಯದಿತ್ತು. ಮೂಲ ಶಿಕ್ಷಣ ಸಾಲೆಗಳಲ್ಲಿ ಮಕ್ಕಳ ವಿಚಾರಗಳ ಆವಿರ್ಭಾವಕ್ಕೆ ಸಾಕಷ್ಟು ಅವಕಾಶವಿದೆ. (೧೩) ಮಗುವಿನ ಇಡಿ ವ್ಯಕ್ತಿತ್ವವು ಸಮುಪಾಯವಾಗಿ ವಿಕಾಸವಾಗಬೇಕು. ಇದು ಶಿಕ್ಷಣದ ಒಟ್ಟು ಪರಿಣಾಮವು. ಈ ಪಥದಲ್ಲಿಯೂ ಮುಂದಡಿಯಿದೆ ಎಂದೇ ಹೇಳಬಹುದು.

ಈ ಪ್ರಯೋಗದ ಫಲವಾಗಿ ಎರಡು ಸಂಗತಿಗಳನ್ನು ಗಮನಿಸುವದು ಅಗತ್ಯವು. [೧] ಯಾವ ಯಾವ ಉದ್ದೇಶಗಳನ್ನು ಅನುಲಕ್ಷಿಸಿ ಮಕ್ಕಳ ಪ್ರಗತಿಯನ್ನು ನಿರೀಕ್ಷಿಸಬೇಕು? [೨] ಹೇಗೆ ನಿರೀಕ್ಷಿಸಬೇಕು?

ಇನ್ನು ಇನ್ನೊಂದು ಬಗೆಯ ಪರಿಶೀಲನೆಯನ್ನು ಇಲ್ಲಿ ನೋಡುವಾ. ಪಾಟ್ನಾ ಕಾಲೇಜದಲ್ಲಿ ಪ್ರಾಧ್ಯಾಪಕರಾದ **ಶ್ರೀ. ಯು. ಸಿ. ಚಟರ್ಜಿ** ಅವರು ಸಾಮಾನ್ಯ ಸಾಲೆಗಳಲ್ಲಿಯ ಹಾಗು ಮೂಲ ಶಿಕ್ಷಣ ಸಾಲೆಗಳಲ್ಲಿಯ ಮಕ್ಕಳ ಪ್ರಗತಿಯನ್ನು ತುಲನಾತ್ಮಕ ದೃಷ್ಟಿಯಿಂದ ಪರಿಶೀಲನೆ ಮಾಡಿದ್ದಾರೆ. ಎರಡೂ ತರದ ಸಾಲೆಗಳಲ್ಲಿಯ ನಾಲ್ಕು ವರುಷಗಳ ಶಿಕ್ಷಣ ಮಟ್ಟವನ್ನು ಅಳೆದಿದ್ದಾರೆ. ಎರಡೂ ತರದ ಸಾಲೆಗಳಲ್ಲಿ ಸಾಮಾನ್ಯವಾಗುವ ಅಭ್ಯಾಸ ವಿಷಯಗಳಲ್ಲಿ ಪ್ರಗತಿಯನ್ನು ನೋಡಲಾಯಿತು. ನೆರೆಯ ಸ್ಥಳಗಳಲ್ಲಿಯ ಸಾಲೆಯ ಮಕ್ಕಳ ಪ್ರಗತಿಯನ್ನು ಅಳೆಯಲಾಯಿತು; ಎಂದರೆ ಎರಡೂ ತರದ ಸಾಲೆಗಳು ಸಾಮಾನ್ಯವಾಗಿ ಒಂದೇ ತರದ ವಾತಾವರಣದಲ್ಲಿವೆ ಓದು, ಬರೆಹ, ಗಣಿತ, ಸಮಾಜ ವಿಜ್ಞಾನ, ಸಾಮಾನ್ಯ ವಿಜ್ಞಾನ ಮತ್ತು ಆರೋಗ್ಯ ಶಾಸ್ತ್ರ ಈ ವಿಷಯಗಳಲ್ಲಿ ಪರೀಕ್ಷಣಗಳನ್ನು ತಯಾರಿಸಿ, ಪ್ರಯೋಗ ಮಾಡಿದ್ದಾರೆ. ಒಟ್ಟು ಪ್ರಗತಿ ಚನ್ನಾಗಿದೆಯೆಂದೂ, ಓದು, ಸಾಮಾನ್ಯ ವಿಜ್ಞಾನ, ಆರೋಗ್ಯಶಾಸ್ತ್ರ ಮತ್ತು ಸಮಾಜ ವಿಜ್ಞಾನ ಇವುಗಳಲ್ಲಿ ಮೂಲ ಶಿಕ್ಷಣ ಸಾಲೆಗಳಲ್ಲಿಯ ಮಕ್ಕಳು ಹೆಚ್ಚಿನ ಪ್ರಗತಿಯನ್ನು ತೋರಿಸಿದಾರೆಂದೂ, ಉಳಿದ ವಿಷಯಗಳಲ್ಲಿ ಪ್ರಗತಿಯ ಮಟ್ಟವು ಅಷ್ಟು ಇಲ್ಲವೆಂದೂ ಅವರು ಅಭಿಪ್ರಾಯ ಪಟ್ಟಿದ್ದಾರೆ. ಇದು ಅವರ ನಿರೀಕ್ಷಣೆ.

ಇದೇ ರೀತಿಯಾಗಿ ಕರ್ನಾಟಕದಲ್ಲಿ **ಡಾ. ಕಾಮತ** ಅವರು ಕೆಲವು ಪರೀಕ್ಷಣಗಳನ್ನು ಕೊಟ್ಟು ಮಕ್ಕಳ ಪ್ರಗತಿಯನ್ನು ನಿರೀಕ್ಷಿಸಲು ಯತ್ನಿಸಿದ್ದಾರೆ. ಮೂಲ ಶಿಕ್ಷಣ ಸಾಲೆಗಳಲ್ಲಿಯ ಮಕ್ಕಳ ಪ್ರಗತಿಯು ಹೆಚ್ಚು ಸಮಾಧಾನಕರವಿದೆಯೆಂದು ಅವರೂ ಅಭಿಪ್ರಾಯ ಪಟ್ಟಿದ್ದಾರೆ.

**ಪ್ರಗತಿ ಮಟ್ಟ:**

ಮೂಲ ಶಿಕ್ಷಣವನ್ನು ಮುಗಿಸಿದ ಬಾಲಕರ ಮಟ್ಟವನ್ನು ಹೇಗೆ ಅಳೆಯಬೇಕೆಂಬುದನ್ನು ಇನ್ನು ವಿಚಾರಿಸುವಾ. ಮಗುವಿನ ಶಾರೀರಿಕ ಬೌದ್ಧಿಕ–ಆಧ್ಯಾತ್ಮಿಕ ಬೆಳವಣಿಗೆಯೇ ಮುಖ್ಯ ಅಳತೆಗೋಲೆಂದು **ಶ್ರೀ. ಆರ್ಯ ನಾಯಕಂ** ಅವರು ಹೇಳಿದ್ದಾರೆ. ಅವರು "ಮ್ಯಾಟ್ರಿಕ್ಯುಲೇಶನ್‌-ಇಂಗ್ಲೀಷ" ಎಂಬುದರ ಬಗೆಗೆ ಸ್ಪಷ್ಟೀಕರಿಸಿದ್ದಾರೆ. ಅವರ ಶಬ್ದಗಳನ್ನೇ ಇಲ್ಲಿ ಹೇಳುವದಾದರೆ, "ಮ್ಯಾಟ್ರಿಕ್ ಪರೀಕ್ಷೆಯವರಿಗೆ ಸಾಗುವ ಮಾಧ್ಯಮಿಕ ವಿದ್ಯಾಭ್ಯಾಸದ ಮುಖ್ಯ ಉದ್ದೇಶವು ಗೊತ್ತು ಪಡಿಸಿದ ವಿಷಯಗಳಲ್ಲಿ ನಿಶ್ಚಿತ ಪ್ರಮಾಣಗಳಂತೆ ಗುಣಗಳನ್ನು ಪಡೆಯುವದಕ್ಕೆ ವಿದ್ಯಾರ್ಥಿಯನ್ನು ತರಬೇತು ಮಾಡುವುದೂ ವಿಶ್ವ ವಿದ್ಯಾಲಯದ ಶಿಕ್ಷಣಕ್ಕೆ ಪ್ರವೇಶ ಕೊಡುವುದೂ ಆಗಿದೆ. ವರುಷಕ್ಕೊಮ್ಮೆ ನಡೆಯುವ ಒಂದು ಬರೆಹ ಪರೀಕ್ಷೆಯಲ್ಲಿ ಅವನು ಪಡೆದ ಗುಣಗಳ ಪ್ರಮಾಣದ ಮೇಲಿಂದ ಅವನು ಪಾಸು ಇಲ್ಲವೆ ನಪಾಸು ಎಂದು ನಿರ್ಣಯಿಸಲಾಗುವದು.

"ಮೂಲ ಶಿಕ್ಷಣದ ವಿಧಾನದಲ್ಲಿ ಉದ್ಯೋಗವು ಶಿಕ್ಷಣದ ಮಾಧ್ಯಮವು. ವಿವಿಧ ವಿಷಯಗಳ ಜ್ಞಾನವನ್ನು ಮೂಲ ಉದ್ಯೋಗಕ್ಕೆ ಪ್ರಾಸಂಗಿಕವಾಗಿ ಸಂಬಂಧೀಕರಿಸಿ ವಿದ್ಯಾರ್ಥಿಯು ಗಳಿಸುವನು. ಅಲ್ಲಿ ಅಭ್ಯಾಸ ಪತ್ರಿಕೆಯು ಮಾರ್ಗದರ್ಶಕವಾಗಿದೆ; ಆದರೆ ಅದನ್ನು ಶಬ್ದಶಃ ಅನುಸರಿಸಬೇಕೆಂದಿಲ್ಲ. ವಿದ್ಯಾರ್ಥಿಯು ನಿರೀಕ್ಷಣೆ ಮತ್ತು ಅನುಭವಗಳ ಮುಖಾಂತರ ಕಲಿಯುತ್ತಾನೆ. ಆದರೆ ಬಾಯಿ ಬೋಧೆಯಿಂದ ಮಾತ್ರ ಅವನು ಕಲಿಯುವದಿಲ್ಲ ತರಗತಿಯಿಂದ ತರಗತಿಗೆ ಮೇಲೆ ಹಾಕುವದಕ್ಕಾಗಿ ಗುರುಗಳು ಇಟ್ಟ ಬಾಲಕನ ಕೆಲಸದ ವರದಿ, ನಿತ್ಯದ ಕೆಲಸ. ನಿಯಮಿತ ಹಾಜರಿ ಮತ್ತು ಗುರುಗಳ ಅಭಿಪ್ರಾಯ ಇವುಗಳಿಂದ

ಮಕ್ಕಳನ್ನು ಮೇಲಿನ ವರ್ಗಕ್ಕೆ ಹಾಕುವ ನಿರ್ಣಯ ಮಾಡಬೇಕು."
ಇದುವೇ ಪರೀಕ್ಷೆಯ ಹೊಸದೃಷ್ಟಿ.

**ಮೂಲ ಶಿಕ್ಷಣವನ್ನು ಮುಗಿಸಿದ ಬಾಲಕನು ಏನೇನು ಮಾಡಬಲ್ಲನು?**

ಹಿಂದುಸ್ತಾನಿ ತಾಲೀಮಿನ ಸಂಘದವರು ನಯೀ ತಾಲೀಮಿನ ಎಂಟನೆಯ ವರುಷದ ವರದಿಯಲ್ಲಿ ಕೆಳಗಿನ ಸಂಗತಿಗಳನ್ನು ಗೊತ್ತುಪಡಿಸಿದ್ದಾರೆ.

(೧) ಸಮನ್ವಿತವಾಗಿ ಬೆಳೆದ ಶರೀರ, ಆರೋಗ್ಯ ಚಪಲತನ, ದಣಿಸುವ ಶಾರೀರಿಕ ಶ್ರಮವನ್ನು ಮಾಡುವ ಸಾಮರ್ಥ್ಯ. (೨) ಹೊಸ ಸಮಾಜದ ತತ್ವ ಹಾಗು ಗ್ರಾಮನಿಷ್ಠ ಅರ್ಥ ಶಾಸ್ತ್ರದಲ್ಲಿ ಚಿಕ್ಕ ಉದ್ಯೋಗಗಳ ಸ್ಥಾನ ಇವುಗಳ ಸ್ಪಷ್ಟ ತಿಳುವಳಿಕೆ. (೩) ತನಗೆ ಸಾಕಷ್ಟು ಸಮತೋಲ ಆಹಾರ ಹಾಗು ಬಟ್ಟೆಗಳನ್ನು ಮೂಲ ಉದ್ಯೋಗದ ಮುಖಾಂತರ ಅಗತ್ಯವೆನಿಸಿದಲ್ಲಿ ದೊರಕಿಸುವ ಸಾಮರ್ಥ್ಯ. (೪) ಹತ್ತಿಯಿಂದ ಬಟ್ಟೆ ತಯಾರಿಸುವ ಸಾಮರ್ಥ್ಯ. (೫) ಸ್ವಂತ ಉಪಯೋಗಕ್ಕಾಗಿ ಅವಶ್ಯವಿದ್ದಷ್ಟು ಪಲ್ಯೆಗಳನ್ನು ಬೆಳಿಸುವ ಸಾಮರ್ಥ್ಯ. (೬) ಅಡಿಗೆ ತಯಾರಿಸುವ, ಆಹಾರ ಸಾಮಗ್ರಿಗಳನ್ನು ಜತನ ಮಾಡುವ, ಒಂದು ಕುಟುಂಬ ಅಥವಾ ಸಮಾಜಕ್ಕೆ ಆಹಾರ ನೀಡುವ, ಅಡಿಗೆಯ ಮುಂಗಡ ವೆಚ್ಚ ತಯಾರಿಸುವ ಮತ್ತು ಲೆಕ್ಕಪತ್ರಗಳನ್ನು ಇಡುವ ಸಾಮರ್ಥ್ಯ. (೭) ಆಹಾರ ಹಾಗು ಆರೋಗ್ಯ ಇವುಗಳ ಮೂಲ ತತ್ತ್ವಗಳ ಪರಿಚಯ. (೮) ವೈಯಕ್ತಿಕ ಆರೋಗ್ಯ ಹಾಗು ಹಳ್ಳಿಯ ಸ್ವಚ್ಛತೆ ಇವುಗಳ ಮುಖ್ಯ ನಿಯಮಗಳ ಪರಿಚಯ. (೯) ಪ್ರಥಮ ಚಿಕಿತ್ಸೆ ಹಾಗು ಸಾಧಾರಣ ರೋಗಗಳ ಉಪಚಾರ ಇವುಗಳ ಜ್ಞಾನ. (೧೦) ಸಹಕಾರೀ ಸಂಘಗಳನ್ನು ನಡೆಯಿಸಲು ಸಹಾಯಕವಾಗುವ ಸಹಕಾರ ತತ್ತ್ವಗಳು ಹಾಗು ಅವುಗಳ ಲೆಕ್ಕ ಪತ್ರಗಳು ಇವುಗಳ ಪರಿಚಯ. (೧೧) ಸಾರ್ವಜನಿಕ ಸಭೆಗಳಲ್ಲಿ ಸುಸ್ಪಷ್ಟವಾಗಿ ಮತ್ತು ಸರಳವಾಗಿ ಮಾತಾಡುವ ಸಾಮರ್ಥ್ಯ. (೧೨) ವಿಚಾರಗಳನ್ನು ಸ್ಪಷ್ಟವಾಗಿ ಬರೆಹ ರೂಪದಲ್ಲಿ ವ್ಯಕ್ತ ಮಾಡುವ ಮತ್ತು ವರದಿಗಳನ್ನು ತಯಾರಿಸುವ ಸಾಮರ್ಥ್ಯ. (೧೩) ತಾಯಿನುಡಿಯ ಸಾಹಿತ್ಯ ಸೌಂದರ್ಯಾನುಭವ ಹಾಗು ವ್ಯಾವಹಾರಿಕ ಹಿಂದುಸ್ತಾನಿಯ

ಜ್ಞಾನ. (೧೪) ಸುಲಭ ಹಿಂದುಸ್ತಾನಿಯ ಓದು–ಬರೆಹ (ಎರಡೂ ಲಿಪಿಗಳಲ್ಲಿ--ದೇವನಾಗರಿ ಮತ್ತು ಉರ್ದು). (೧೫) ಭಕ್ತಿಪ್ರದ ಹಾಗು ರಾಷ್ಟ್ರೀಯ ಹಾಡುಗಳನ್ನು ಸಾಮೂಹಿಕವಾಗಿ ಅನ್ನುವದು. (೧೬) ಚಿತ್ರ ತೆಗೆಯುವ ಹಾಗು ಬಣ್ಣ ಬಳೆಯುವ, ಮತ್ತು ಅವುಗಳನ್ನು ಮೆಚ್ಚಿಸುವ ಸಾಮರ್ಥ್ಯ. (೧೭) ಕುದುರೆ ಮತ್ತು ಸಾಯಿಕಲ್ ಹತ್ತುವದು ಮತ್ತು ಚಕ್ಕಡಿ ಹೊಡೆಯುವದು. (೧೮) ಶಾಲೆ ಹಾಗು ಹಳ್ಳಿಯಲ್ಲಿ ಉತ್ಸವಗಳನ್ನು ಸಂಘಟಿಸಲು ಸಹಾಯ ಮಾಡುವ ಸಾಮರ್ಥ್ಯ. (೧೯) ಸುದ್ದಿ ಪತ್ರಿಕೆಗಳಿಂದ ಗೊತ್ತಾದ ಪ್ರಚಲಿತ ವಿಷಯಗಳ–ಜಗತ್ತಿನ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸಮಸ್ಯೆಗಳ ಸ್ಥೂಲ ಪರಿಚಯ. (೨೦) ಮೂಲ ಉದ್ಯೋಗದ ವಿವಿಧ ಕ್ರಿಯೆಗಳಲ್ಲಿ ಹಾಗು ಅವುಗಳ ಸಾಧನಗಳಲ್ಲಿ ಅಡಕವಾಗಿರುವ ಯಂತ್ರ ಶಾಸ್ತ್ರದ ತತ್ತ್ವಗಳ ಪರಿಚಯ. (೨೧) ಆಹಾರ ಹಾಗು ಹತ್ತಿ ಬೆಳೆಯುವ, ಅಡಿಗೆ ಹಾಗು ಅದಕ್ಕೆ ಸಂಬಂಧಿಸಿದ ಕ್ರಿಯೆಗಳನ್ನು ಮಾಡುವ ಮೂಲ ಉದ್ಯೋಗದ ಕ್ರಿಯೆಗಳನ್ನು ಮಾಡುವ, ಮತ್ತು ವೈಯಕ್ತಿಕ, ಸಾರ್ವಜನಿಕ ಮತ್ತು ಹಳ್ಳಿಯ ಆರೋಗ್ಯ ಕಾಯುವ ಶಾಸ್ತ್ರೀಯ ತತ್ತ್ವಗಳ ಪರಿಚಯ. (೨೨) ಆಹಾರ ಹಾಗು ಬಟ್ಟೆಗಳ ಮುಖಾಂತರ ಹಿಂದುಸ್ತಾನದ ಹಾಗು ಜಗತ್ತಿನ ಭೂಗೋಲ ಪರಿಚಯ. (೨೩) ಸುದ್ದಿ ಪತ್ರಿಕೆ ಹಾಗು ಮಾಸಿಕ ಪತ್ರಿಕೆಗಳನ್ನು ಬುದ್ಧಿ ಬಳಸಿ ಓದುವ ಸಾಮರ್ಥ್ಯ. (೨೪) ಹಿಂದುಸ್ತಾನದ ಸ್ವಾತಂತ್ರ್ಯ ಸಂಗ್ರಾಮದ ಹೋರಾಟದ ಜ್ಞಾನ. (೨೫)ಹಿಂದುಸ್ತಾನದ ವಿವಿಧ ಧರ್ಮಗಳಲ್ಲಿ ಆದರ ಮತ್ತು ಜಾತೀಯ ಐಕ್ಯತೆಯ ಅಪೇಕ್ಷೆ. (೨೬) ಜಾತೀಯತೆಯ ಲೋಪದೋಷಗಳಿಂದ–ಬಂಧನಗಳಿಂದ ವಿಮುಕ್ತತೆ. [೨೭] ತನ್ನ ಗ್ರಾಮದ ಪ್ರೇಮ. ಹಳ್ಳಿಯಲ್ಲಿ ನಿಂತು ಕೆಲಸ ಮಾಡುವ ಪ್ರವೃತ್ತಿ, ಗ್ರಾಮ ನಿಷ್ಠತೆ.

ಮೇಲಿನ ಎಲ್ಲ ಸಂಗತಿಗಳು ಮಕ್ಕಳನ್ನು ಮೂಲ ಶಿಕ್ಷಣದ ಆದರ್ಶದ ಕಡೆಗೆ–ಹೊಸ ಸಮಾಜ ರಚನೆಗೆ ಒಯ್ಯುವವೆಂದು ಸ್ಪಷ್ಟವಾಗದಿರದು.

---

# ಪರಿಶಿಷ್ಟ.

## ಸಮವಾಯ ಪಾಠ

ಸಮವಾಯ ಪಾಠದ ರೂಪುರೇಷೆ ಹಾಗು ಅದರ ತಾತ್ವಿಕ ಹಿನ್ನೆಲೆ ಮೊದಲಾದ ಸಂಗತಿಗಳನ್ನು ಇಲ್ಲಿ ವಿವರಿಸುವಾ.

**ಸಮವಾಯ ಪಾಠದ ರಚನೆ** (Lesson-Plan):

ಯಾವುದೊಂದು ಪಾಠವನ್ನು ಕಲಿಸುವಾಗ **ಹರ್ಬಾರ್ಟನು** ಯೋಜಿಸಿದ ಪಾಠದ ಮೆಟ್ಟುಗಳಿಗನುಸಾರವಾಗಿ ಶಿಕ್ಷಕರು ಪಾಠದ ಟಿಪ್ಪಣಿಯನ್ನು ಸಿದ್ಧಗೊಳಿಸಬಹುದು. ವಿಷಯ ಪದ್ಧತಿಯನ್ನು ಅನುಸರಿಸಿದಲ್ಲಿ ಆ ಮೆಟ್ಟುಗಳು ಸಮಂಜಸವಾಗುವವು. ಆದರೆ ಸಮವಾಯ ಪಾಠವು ಕೃತಿಮೂಲವಾದುದು. ಅದರಿಂದ ಹೊಸ ತತ್ತ್ವಕ್ಕನುಗುಣವಾಗಿ ಪಾಠದ ಮೆಟ್ಟುಗಳನ್ನು ಯೋಜಿಸುವದು ಅಗತ್ಯ. ಕೆಲಸದ ಮುಖಾಂತರ ಕಲಿಯುವುದು ಈ ಹೊಸ ಪದ್ಧತಿಯ ವೈಶಿಷ್ಟ್ಯವು. ಈ ಕ್ರಮಕ್ಕನುಸರಿಸಿ ಪಾಠವು ಸಾಗಬೇಕಾದರೆ, ಮೊದಲು ಮಾಡತಕ್ಕ ಕೆಲಸವನ್ನು ನಿಶ್ಚಿತಗೊಳಿಸಬೇಕಾಗುವದು, ಆ ಕೆಲಸವನ್ನು ಒಳ್ಳೇ ರೀತಿಯಿಂದ ಮಾಡಲು ಅಪೇಕ್ಷಿಸಿದಲ್ಲಿ ಮಕ್ಕಳು ಅಂದು ಆ ಕೆಲಸವನ್ನು ಯಾಕೆ ಕೈಕೊಳ್ಳಬೇಕೆಂಬುದನ್ನು ಮನಗಾಣಬೇಕು; ಎಂದರೆ ಮಕ್ಕಳು ಮಾಡಬೇಕಾದ ಕೆಲಸಕ್ಕೆ ಸಾಗುವ ಪ್ರೇರಣೆಯುಂಟಾಗುವಂತೆ ಶಿಕ್ಷಕರು ಯತ್ನಿಸಬೇಕು. ಕಾರ್ಯಪ್ರೇರಣೆ(Purposing) ಮೊದಲ ಹೆಜ್ಜೆ. ಮಾಡತಕ್ಕ ಕೆಲಸವು ನಿಶ್ಚಿತವಾಯಿತು. ಆ ಕೆಲಸವನ್ನು ಯಾಕೆ ಮಾಡಬೇಕೆಂಬುದೂ ಮಕ್ಕಳಿಗೆ ಮನವರಿಕೆಯಾಯಿತು. ಇನ್ನು ಆ ಕೆಲಸವನ್ನು ಹೇಗೆ ಮಾಡಿದರೆ, ಅದು ಫಲಪ್ರದವಾಗಿ ಸಾಗುವದು? ಇದು ಮುಂದಿನ ಪ್ರಶ್ನೆ. ಹಾಗಾದರೆ, ಕೆಲಸದ ಯೋಜನೆ(Planning)ಯನ್ನು ಸಿದ್ಧಗೊಳಿಸಬೇಕು. ಇದು ಎರಡನೆಯ ಹೆಜ್ಜೆ. ಕೆಲಸದ ವಿವರಗಳುಯಾವವು? ಕೆಲಸಕ್ಕೆ ಯಾವ ಸಾಮಾನುಗಳು ಬೇಕು? ಎಷ್ಟು ಬೇಕು? ಕೆಲಸಮಾಡುವ ಬಾಲಕರು ಎಷ್ಟು ? ಎಷ್ಟು ಹೊತ್ತು ಕೆಲಸ ಮಾಡಬೇಕಾಗಿದೆ? ಎಂದು

ಮುಂತಾಗಿ ಯೋಜಿಸಿ, ಕೆಲಸವನ್ನು ಆರಂಭಿಸುವ ಪೂರ್ವದಲ್ಲಿ ಅಗತ್ಯವಿದ್ದ ಸಿದ್ಧತೆ ಮಾಡಿಕೊಳ್ಳಬೇಕು. ನಂತರ ಕೆಲಸಕ್ಕೆ ತೊಡಗಬೇಕು. ಹೀಗೆ ಮಾಡದಿದ್ದರೆ, ಕೆಲಸವು ಶಿಸ್ತಿನಿಂದ ಸಾಗುವದಿಲ್ಲ. ವೇಳೆಯೂ ಹಾಳಾಗುವ ಪ್ರಸಂಗ ಬರಬಹುದು. ಕೆಲಸವು ಮಕ್ಕಳಿಗೆ ಅಪರಿಚಿತವಿದ್ದರೆ, ಶಿಕ್ಷಕನು ಅದನ್ನು ಶಾಸ್ತ್ರೀಯವಾಗಿ ಮಾಡಿ ತೋರಿಸಬೇಕು. ಮಕ್ಕಳು ಯಾವ ಯಾವ ಸಂಗತಿಗಳನ್ನು ಅನುಲಕ್ಷಿಸಿದರೆ ಕೆಲಸವು ಶಾಸ್ತ್ರಬದ್ಧವಾಗಿ ಸಾಗುವುದೆಂಬುದನ್ನು ಅವರ ಮನಸ್ಸಿನಲ್ಲಿ ಮೂಡಿಸಬೇಕು. ನಂತರ ಮಕ್ಕಳು ಕೆಲಸಕ್ಕೆ ತೊಡಗಬೇಕು. ಕಾರ್ಯ ನಿರ್ವಹಣವು (Execution) ಮೂರನೆಯ ಹೆಜ್ಜೆ. ಮಕ್ಕಳು ಕೆಲಸ ಮಾಡುವಾಗ ತಪ್ಪು ಮಾಡಬಹುದು; ಅವುಗಳನ್ನು ತಿದ್ದಬೇಕು. ಅವರು ಒಳ್ಳೇ ರೀತಿಯಿಂದ ಕೆಲಸಮಾಡುವಂತೆ ಪ್ರೇರಿಸಬೇಕು. ಈಗ ಮಕ್ಕಳ ಕೆಲಸವು ಮುಗಿಯಿತು. ಮುಂದೇನು? ಅವರು ಯಾವ ಕೆಲಸವನ್ನು ಮಾಡಬೇಕೆಂದು ನಿಶ್ಚಯಿಸಿದ್ದರು? ಹೇಗೆ ಮಾಡಬೇಕೆಂದು ನಿಶ್ಚಯಿಸಿದ್ದರು? ಎಷ್ಟು ಮಾಡಬೇಕೆಂದು ನಿಶ್ಚಯಿಸಿದ್ದರು? ಆದ ಕೆಲಸ ಎಷ್ಟು? ಎಂದು ನಿಶ್ಚಯಿಸಿದ ಯೋಜನೆಗೂ ಆದ ಕೆಲಸಕ್ಕೂ ತುಲನೆ ಮಾಡಬೇಕು. ಇದಕ್ಕೆ ಕೆಲಸದ ಪರಿಶೀಲನೆ(Verification) ಎಂದು ಕರೆಯಬಹುದು. ಕೆಲಸ ಮಾಡುತ್ತ ಮಕ್ಕಳಿಗೆ ಯಾವ ವಿಷಯಗಳ ಜ್ಞಾನ ದೊರೆಯಿತು? ಸಮವಾಯ ಜ್ಞಾನದ ಪುನರ್ವಿಮರ್ಶೆ ಮಾಡಬೇಕು. ಅಂದು ಕಲಿತ ಹೊಸ ಜ್ಞಾನವನ್ನು ಸ್ಪಷ್ಟೀಕರಿಸುವದಕ್ಕೆ ಇಲ್ಲವೇ ದೃಢೀಕರಿಸುವದಕ್ಕೆ ಶಿಕ್ಷಕನು ಯತ್ನಿಸಬೇಕಾಗುವದು. ಅದರಿಂದ ಸಮವಾಯ ಜ್ಞಾನದ ದೃಢೀಕರಣ ಮಾಡುವುದು ಮುಂದಿನ ಹೆಜ್ಜೆ. ಈ ವಿಚಾರ ಸರಣಿಗನುಗುಣವಾಗಿ ಪದವೀಧರರ ಜೀವನ ಶಿಕ್ಷಣ ಕೇಂದ್ರದ ಮುಖ್ಯಾಧ್ಯಾಪಕರಾದ **ಪ್ರೋ. ಕೆ. ಬಿ. ಶಿರಗಾಂವಕರ** ಅವರು ಸಮವಾಯ ಪದ್ಧತಿಯ ಪಾಠದ ಟಿಪ್ಪಣಿಯ ಮೆಟ್ಟಿಲುಗಳನ್ನು ನಿಶ್ಚಿತಗೊಳಿಸಿರುವರು. ಅವು (೧) ಪ್ರೇರಣೆ (೨) ಪೂರ್ವ ಸಿದ್ಧತೆ (೩) ಕಾರ್ಯಾರಂಭ (೪) ಕೆಲಸದ ಪರಿಶೀಲನೆ (೫) ಸಮವಾಯ ಜ್ಞಾನದ ದೃಢೀಕರಣ.

**ಸಮವಾಯ ಪಾಠದ ತಾತ್ತ್ವಿಕ ಹಿನ್ನೆಲೆ** (Philosophical Basis of Lesson Plan:)

**ಕಾರ್ಯ ಪ್ರೇರಣೆ:**— ಮನುಷ್ಯನು ಬುದ್ಧಿ ಜೀವಿ, ಭಾವ ಜೀವಿ. ತನ್ನ ಬುದ್ಧಿಯನ್ನು ಬಳಸಿ, ವಿವೇಕಿಯಾಗಿ ಬಾಳಿ ಸತ್ಕಾರ್ಯ ಮಾಡಬಲ್ಲ. ಇದು ಅವನ ಸಂಸ್ಕಾರದ ಫಲ. ಜೀವನದ ಉತ್ಕ್ರಾಂತಿಯ ಉನ್ನತ ಸ್ಥಾನ. ಕೃತಿಗೆ ವಿಚಾರವೇ ಮೂಲ. ಒಳ್ಳೆಯ ವಿಚಾರದ ಪ್ರೇರಣೆಯು ಒಳ್ಳೆಯ ಕೆಲಸಕ್ಕೆ ಹಚ್ಚುವದು. ಕಾರ್ಯದ ಫಲ ಕಾರ್ಯದ ಪ್ರೇರಣೆಯಲ್ಲಿದೆ. ಇದು ಜೀವನದ ಪಾಠವು. ಆದರಿಂದ ಜೀವನ ಶಿಕ್ಷಣ ಪಾಠದ ಮೊದಲ ಮೆಟ್ಟಿಲು ಇದೇ! ಏನು ಮಾಡಬೇಕಾಗಿದೆ? ಯಾಕೆ ಮಾಡಬೇಕಾಗಿದೆ? ಇವು ಮಹತ್ವದ ಪ್ರಶ್ನೆಗಳು. ಪ್ರೇರಣೆಯು ವಿಚಾರ ಪ್ರವಾಹದ ಸೆಲೆ.

**ಪೂರ್ವಸಿದ್ಧತೆ:**— ಯಾವುದೊಂದು ಕೆಲಸವನ್ನು ಪೂರ್ವಾಪರ ವಿಚಾರ ಮಾಡಿ ಆರಂಭಿಸಬೇಕು; ಇಲ್ಲವಾದರೆ, ಅನರ್ಥಕ್ಕೀಡಾಗಬಹುದು, ಅಡೆತಡೆಗಳು ಬರಬಹುದು, ಉತ್ಸಾಹ ಕುಗ್ಗಬಹುದು, ಒಂದು ಸಣ್ಣ ತಪ್ಪಿಗಾಗಿ ದೊಡ್ಡ ಹಾನಿ ತಟ್ಟಬಹುದು. ನಾವು ಮಾಡತಕ್ಕ ಕೆಲಸದ ವಿವರಗಳನ್ನು ಮೊದಲೇ ಆಲೋಚಿಸಬೇಕು, ಅಗತ್ಯವೆನಿಸಿದ ಸಾಧನಗಳನ್ನು ಸಂಗ್ರಹಿಸಬೇಕು, ಅವುಗಳನ್ನು ಸರಿಯಾಗಿ ಉಪಯೋಗಿಸಬೇಕು. ಕಾರ್ಯವು ಯಶಸ್ವಿಯಾಗಿ ಕೊನೆಗೊಳ್ಳುವಂತೆ ಯೋಜಿಸಬೇಕು. ಜೀವನದಲ್ಲಿ ಇದು ಅತ್ಯಂತ ಮಹತ್ವವಾದುದು. ಮುಂದೆ ಬರತಕ್ಕ ಅಡೆತಡೆಗಳನ್ನು ಮೊದಲೇ ತಿಳಿಯುವಂತೆ, ಬಂದ ಸಮಸ್ಯೆಗಳನ್ನು ಆತ್ಮ ವಿಶ್ವಾಸದಿಂದ ಬಿಡಿಸುವಂತೆ ಮಗುವನ್ನು ಜೀವನಕ್ಕೆ ಅಣಿಗೊಳಿಸುವುದೇ ನಿಜವಾದ ಶಿಕ್ಷಣ. ಜೀವನ ಶಿಕ್ಷಣ ಪಾಠದಲ್ಲಿಯೂ ಇದು ಮಹತ್ವದ್ದು.

**ಕಾರ್ಯಾರಂಭ:**— ಹೀಗೆ ಸಜ್ಜು ಮಾಡಿಕೊಂಡು ಕೆಲಸ ಮಾಡಿದಲ್ಲಿ ಅಡೆತಡೆಗಳು ಬರುವದಿಲ್ಲ. ಉತ್ಸಾಹ ಹಾಗು ಆತ್ಮವಿಶ್ವಾಸ ಹೆಚ್ಚುವವು. ಜ್ಞಾನದ ಬಾಗಿಲು ತೆರೆದು, ಹೊಸ ಅನುಭವಗಳುಂಟಾಗುವವು. ಬುದ್ಧಿಪೂರ್ವಕ ಪ್ರಯತ್ನದಿಂದ ಅನುಭವ ಗಳಿಸುತ್ತ ಹೋಗುವುದೇ ಶಿಕ್ಷಣ.

**ಪರಿಶೀಲನೆ:**— ಜಾಣ ಕೆಲಸಗಾರನು ಕೆಲಸ ಮಾಡಿ ಸುಮ್ಮನೆ ಕೂಡ್ರುವದಿಲ್ಲ. ತಾನು ಮಾಡಬೇಕೆಂದು ನಿಶ್ಚಯಿಸಿದ ಯೋಜನೆಗೂ ಪ್ರತ್ಯಕ್ಷ ಆದ ಕೆಲಸಕ್ಕೂ ತುಲನೆ ಮಾಡುವನು. ಹೀಗೆ ಪರಿಶೀಲನೆ

ಮಾಡಿ ಹೊಸ ಅನುಭವ ಗಳಿಸುವನು, ಇನ್ನೂ ಚೆನ್ನಾಗಿ ಮಾಡಲು ಹೊಸ ಹಾದಿ ಕಾಣುವನು.

**ದೃಢೀಕರಣ:—** ಹೀಗೆ ಸ್ವಾನುಭವದಿಂದ ಉಂಟಾದ ಜ್ಞಾನವು ಮೆದುಳಿನ ಸೊತ್ತಾಗಿ ಅಲ್ಲಿಯೇ ಕೊಳೆಯಬಾರದು. ಕೃಪಣನ ಹೊನ್ನು ಮಣ್ಣುಗೂಡಿದಂತಾಗುವದು. ಜೀವನದಲ್ಲಿ ಅದನ್ನು ಬಳಸಬೇಕು. ಬಳಸಿದಂತೆ ಜ್ಞಾನವು ಬಲಿಯುವದು ಹಾಗು ಸುಸ್ಪಷ್ಟವಾಗುವದು.

**ಪಾಠದ ವಿಮರ್ಶೆ:—** (Observation of a Lesson)

ಶಿಕ್ಷಕರು ಕೆಳಗಿನ ಸಂಗತಿಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಸಮವಾಯ ಪದ್ಧತಿಯ ಪಾಠಗಳನ್ನು ನಿರೀಕ್ಷಿಸಬೇಕು.

**ಯೋಜನೆ:—** ಮಕ್ಕಳನ್ನು ಹೊಸ ಕೆಲಸಕ್ಕೆ ಹಚ್ಚುವ ಸನ್ನಿವೇಶವು ಸ್ವಾಭಾವಿಕವಾಗಿ ಉಂಟಾಯಿತೋ ಇಲ್ಲವೋ? ಕೆಲಸದ ಅಗತ್ಯವು ಬಾಲಕರಿಗೆ ಸ್ಪಷ್ಟವಾಗಿ ತಿಳಿಯಿತೋ ಇಲ್ಲವೋ? ಕಾರ್ಯ ಪ್ರೇರಣೆಯು ಬಾಲಕರಲ್ಲಿ ಸಾಕಷ್ಟು ಉತ್ಸಾಹವನ್ನು ತುಂಬಿತೋ ಹೇಗೆ? ಈ ಹೊತ್ತು ಮಾಡತಕ್ಕ ಕೆಲಸದ ವಿವರಗಳು ಬಾಲಕರಿಗೆ ಸ್ಪಷ್ಟವಾಗಿ ತಿಳಿದವೋ?

**ಪೂರ್ವ ಸಿದ್ಧತೆ:—** ಕೆಲಸದ ವಿವರಗಳ ಬಗ್ಗೆ ಮಕ್ಕಳೊಡನೆ ಶಿಕ್ಷಕರು ಸಾಕಷ್ಟು ಚರ್ಚೆ ಮಾಡಿದರೋ ಇಲ್ಲವೋ? ಅಗತ್ಯವಿದ್ದ ಸಾಮಾನುಗಳು ಹಾಗು ಅವುಗಳ ಸರಿಯಾದ ಉಪಯೋಗದ ಬಗ್ಗೆ ಚರ್ಚೆ ನಡೆಯಿತೇ? ಕೆಲಸದ ವಿವರಗಳನ್ನು ಹಂಚಿಕೊಳ್ಳಲಿಕ್ಕೆ ತಕ್ಕ ಯೋಜನೆಯನ್ನು ಸಿದ್ಧಗೊಳಿಸಲಾಯಿತೇ? ಈ ಯೋಜನೆಯಲ್ಲಿ ಮಕ್ಕಳು ಸಹಕರಿಸಿದರೇ?

**ಕೃತಿ:—** ಶಿಕ್ಷಕನ ಕೃತಿಯು ಮಾದರಿಯದಾಗಿತ್ತೇ? ಕೆಲಸದ ಎಲ್ಲ ವಿವರಗಳು ಸ್ಪಷ್ಟವಾದುವೇ? ಕೆಲಸವು ಶಾಸ್ತ್ರೀಯವಾಗಬೇಕಾದರೆ ಬಾಲಕರು ಅವಶ್ಯವಾಗಿ ನೆನಪಿನಲ್ಲಿಡತಕ್ಕ ಸಂಗತಿಗಳನ್ನು ಸ್ಪಷ್ಟ ಮಾಡಲಾಯಿತೇ? ಬಾಲಕರು ಶಾಸ್ತ್ರೀಯವಾಗಿ ಕೆಲಸ ಮಾಡಿದರೋ ಇಲ್ಲವೋ? ಬಾಲಕರ ತಪ್ಪುಗಳನ್ನು ಶಿಕ್ಷಕರು ಕೂಡಲೇ ವೈಯಕ್ತಿವಾಗಿ ತಿದ್ದಿದರೋ ಹೇಗೆ?

**ಪರಿಶೀಲನೆ:—** ಮೊದಲು ಗೊತ್ತು ಪಡಿಸಿದ ಯೋಜನೆಗೂ ಪ್ರತ್ಯಕ್ಷವಾಗಿ ಆದ ಕೆಲಸಕ್ಕೂ ಏನಾದರೂ ಹೆಚ್ಚು ಕಡಿಮೆಗಳುಂಟಾದವೇ?

ಇದರ ಬಗ್ಗೆ ಚರ್ಚೆ ಮಾಡಲಾಯಿತೇ? ಮಕ್ಕಳು ಮಾಡಿದ ತಪ್ಪುಗಳನ್ನು ಆಯ್ದುಕೊಂಡು ಸಾಮೂಹಿಕವಾಗಿ ಚರ್ಚಿತಲಾಯಿತೇ? ನಿರ್ದಿಷ್ಟಪಡಿಸಿದ ವೇಳೆಯಲ್ಲಿ ಕೆಲಸ ಮುಗಿಯಿತೇ? ಇಲ್ಲವಾದರೆ ಅದರ ಕಾರಣಗಳನ್ನು ಬಾಲಕರೊಡನೆ ಚರ್ಚೆ ಮಾಡಲಾಯಿತೇ ?

**ದೃಢೀಕರಣ:**— ಕೆಲಸದ ಜೊತೆಗೆ ಅಗತ್ಯವಾಗಿ ಬಂದ ಸಾಮಾನ್ಯ ವಿಷಯಗಳ ಜ್ಞಾನವನ್ನು ಪ್ರಶ್ನೆ ರೂಪದಿಂದ ಇಲ್ಲವೇ ಇತರ ಉದಾಹರಣೆಗಳಿಂದ ಚನ್ನಾಗಿ ದೃಢೀಕರಣ ಮಾಡಲಾಯಿತೇ?

ಪಾಠದ ಮೆಟ್ಟುಗಳಿಗನುಗುಣವಾಗಿ ನಿರೀಕ್ಷಣೆ ಮಾಡುವ ಕ್ರಮವನ್ನು ವಿವರಿಸಿದಂತಾಯಿತು ಇನ್ನೂ ಕೆಲವು ಸಾಮಾನ್ಯ ಸಂಗತಿಗಳನ್ನು ಗಮನಿಸಬೇಕಾಗುವದು. ಅವುಗಳನ್ನು ಕೆಳಗೆ ಕೊಡಲಾಗಿದೆ:- (೧) ಪಾಠದ ವಿವಿಧ ಮೆಟ್ಟುಗಳಿಗೆ ವೇಳೆಯ ಹಂಚುವಿಕೆ, (೨) ಕೆಲಸದಲ್ಲಿ ಶಿಕ್ಷಕನ ಕೈವಾಡ, (೩) ವಿದ್ಯಾರ್ಥಿಗಳು ಕೆಲಸದಲ್ಲಿ ತೋರಿಸಿದ ಆಸ್ಥೆ, (೪) ವರ್ಗದ ವ್ಯವಸ್ಥೆ, ಕರೀ ಹಲಿಗೆಯ ಉಪಯೋಗ, ಪ್ರಶ್ನೋತ್ತರ ಕಲೆ, ಉಪಕರಣಗಳ ಉಪಯೋಗ, (೫) ಸಮನ್ವಿತ ಜ್ಞಾನದ ಸ್ವಾಭಾವಿಕತೆ, (೬) ಶೈಕ್ಷಣಿಕ ಸನ್ನಿವೇಶಗಳ ಉಪಯೋಗ, (೭) ಶಿಕಕ್ಷಕನ ವ್ಯಕ್ತಿತ್ವ.

ಈ ಎಲ್ಲ ಸಂಗತಿಗಳನ್ನು ಗಮನಿಸಿ, ಪಾಠದ ವಿಮರ್ಶೆ ಮಾಡಬೇಕು. ಹಾಗು ಪಾಠದ ಯೋಗ್ಯತೆಯನ್ನು ಅಳೆಯಬೇಕು.

# ಪಾಠದ ಟಿಪ್ಪಣಿಗಳು

ಶಿಕ್ಷಕರು ಪಾಠದ ರಚನೆಯ ತತ್ತ್ವಗಳನ್ನು ಚನ್ನಾಗಿ ತಿಳಿದುಕೊಳ್ಳಬೇಕು. ಪಾಠದ ಟಿಪ್ಪಣಿಗಳನ್ನು ಬರೆಯುವದಕ್ಕಿಂತ ಪ್ರತ್ಯಕ್ಷ ಪಾಠ ಸಾಗಿಸುವ ವಿಧಾನಕ್ಕೆ ಹೆಚ್ಚು ಗಮನ ಕೊಡಬೇಕಾದುದೇನೋ ನಿಜ. ಆದರೆ ಪಾಠದ ರಚನೆಯ ತತ್ತ್ವಗಳಿಗನುಗುಣವಾಗಿ ಪಾಠದ ಟಿಪ್ಪಣಿ ಬರೆಯುವುದೂ ರೂಢಿಯಾಗಬೇಕು. ಕಲಿಸುವ ವಿಧಾನ ಹಾಗು ಅವಶ್ಯಕ ಜ್ಞಾನ ಈ ಕೋಷ್ಟಕಗಳಲ್ಲಿ ಯಾವ ಯಾವ ಸಂಗತಿಗಳನ್ನು ಸೇರಿಸಬೇಕೆಂಬುದು ಆರಂಭದ ಶಿಕ್ಷಕರಿಗೆ ತೊಡಕಾಗಬಹುದು. ಯಾವ ಮೆಟ್ಟಿನಲ್ಲಿ ಎಷ್ಟು ಸಂಗತಿಗಳು ಅವಶ್ಯವಾಗಿ ಬೇಕೆಂಬುಡನ್ನೂ ತಿಳಿದುಕೊಳ್ಳಬೇಕಾಗುವದು. ಆರಂಭದಲ್ಲಿ ಪಾಠದ ಟಿಪ್ಪಣಿಗಳನ್ನು ವಿವರವಾಗಿ ಬರೆಯಲೇಬೇಕು. ಪ್ರತಿಯೊಂದು ಮೆಟ್ಟಿನಲ್ಲಿ ಸಾಗತಕ್ಕ ಕೆಲಸದ ನಿರ್ದಿಷ್ಟ ಕಲ್ಪನೆ ಒಡಮೂಡಬೇಕು. ಶಿಕ್ಷಕನು ಮಾಡತಕ್ಕ ಕೆಲಸ, ಮಕ್ಕಳಿಂದ ಆಗತಕ್ಕ ಕೆಲಸ ಎರಡೂ ಸ್ಪಷ್ಟವಾಗಬೇಕು. ಕಾರ್ಯ ಪ್ರೇರಣೆಯನ್ನು ಹೇಗೆ ಸ್ವಾಭಾವಿಕವಾಗಿ ಕಲ್ಪಿಸಿಕೊಳ್ಳುವನು? ಯೋಜನೆಯ ಸಿದ್ಧತೆಯನ್ನು ಹೇಗೆ ಮಾಡಿಕೊಳ್ಳುವನು? ಕಾರ್ಯವನ್ನು ಹೇಗೆ ಸಂಘಟಿಸುವನು? ನಿರ್ದಿಷ್ಟ ವೇಳೆಯಲ್ಲಿ ಪಾಠವು ಮುಗಿಯುವಂತೆ ಶಿಕ್ಷಕನು ಹೇಗೆ ಯತ್ನಿಸುವನು? ಸಮನ್ವಿತ ಜ್ಞಾನವನ್ನು ದೃಢೀಕರಿಸಲು ಶಿಕ್ಷಕನು ಯಾವ ಪ್ರಶ್ನೆಗಳನ್ನು ಕೇಳುವನು? ಇಲ್ಲವೆ ಯಾವ ಉದಾಹರಣೆಗಳನ್ನು ಕೊಡುವನು? ಇವುಗಳ ಬಗ್ಗೆ ಹೆಚ್ಚು ವಿವರಗಳನ್ನು ಕೊಡುವದು ಒಳಿತು. ಅಲ್ಲದೆ ಕರೀ ಹಲಿಗೆಯನ್ನು ಯಾವಾಗ ಉಪಯೋಗಿಸುವನು? ಇತರ ಉಪಕರಣಗಳನ್ನು ಯಾವ ಸಂದರ್ಭಗಳಲ್ಲಿ ಉಪಯೋಗಿಸುವನು? ಎಂಬ ಸಂಗತಿಗಳನ್ನು ಟಿಪ್ಪಣಿಯಲ್ಲಿ ಕಾಣಿಸಬೇಕು. ಅವಶ್ಯ ಕಂಡಲ್ಲಿ ಕರೀಹಲಿಗೆಯ ಸಾರಾಂಶ, ಉಪಕರಣಗಳ ಉಪಯೋಗ ಹಾಗು ಸಮನ್ವಿತ ಜ್ಞಾನ ಇವುಗಳನ್ನು ಪಾಠದ ಟಿಪ್ಪಣಿಯ ಕೆಳಗೆ ಪ್ರತ್ಯೇಕ ಕೋಷ್ಟಕಗಳನ್ನು ಮಾಡಿ ತೋರಿಸಬೇಕು. ಒಟ್ಟಿನಲ್ಲಿ ಪಾಠದ ಟಿಪ್ಪಣಿಯು ಪಾಠದ ನಿರ್ದಿಷ್ಟ ಸ್ವರೂಪವನ್ನು ಚಿತ್ರಿಸಬೇಕು.

## ಸಮವಾಯ ಪಾಠದ ಟಿಪ್ಪಣಿ

### ಚಟುವಟಿಕೆ:—ಶಾಲೆಯ ತೋಟದಲ್ಲಿಯ ಕ್ಯಾಬೀಜ ಸಸಿಗಳ ನಿಗಾ ಮಾಡುವದು.

ವರ್ಗ:—೪. ವಿದ್ಯಾರ್ಥಿಗಳ ಸಂಖ್ಯೆ:—೧೬. ಮಡಿಗಳು:—೪.

ಶಿಕ್ಷಕರು:—ಶಿ. ಮ. ಮೇಗೂರ, ಬಿ. ಎ., ಬಿ. ಟಿ. ದಿನಾಂಕ:—೧೦—೧—೪೯

| ಮೆಟ್ಟುಗಳು ಹಾಗೂ ಅವುಗಳ ವಿವರ | ಆವಶ್ಯಕ ಜ್ಞಾನ | ಕಲಿಸುವ ಕ್ರಮ |
|---|---|---|
| ೧. **ಯೋಜನೆ:—**<br>(ಅ) ಪ್ರೇರಣೆ | ಮಡಿಗಳಲ್ಲಿಯ ಬೆಳೆಗಳು ಭರದಿಂದ ಬೆಳೆಯಬೇಕಾದರೆ ಆಗಾಗ್ಗೆ ಅವುಗಳ ಬಗ್ಗೆ ಯೋಗ್ಯ ರಕ್ಷಣೆಯ ಹಾಗೂ ಬೆಳವಣಿಗೆಯ ಉಪಾಯಗಳನ್ನು ಕೈಕೊಳ್ಳಬೇಕು. ಇದಕ್ಕೆ ನಿಗಾ ಮಾಡುವದೆನ್ನುವರು.<br>ಈ ಕೆಲಸದಲ್ಲಿ ಕೆಳಗಿನವುಗಳು ಆವಶ್ಯಕವಾದ ವಿವರಗಳಿರುವವು. | ಒಕ್ಕಲಿಗನು ತನ್ನ ಹೊಲದಲ್ಲಿ ಹಾಗೂ ನೀರಾವರಿ ಇದ್ದಂಥ ಕಾಯಿಪಲ್ಲೆ ತೋಟದಲ್ಲಿ ಬಿತ್ತಿದ ನಂತರ ಬೆಳೆಗಳ ರಕ್ಷಣೆ ಹಾಗೂ ಬೆಳವಣಿಗೆಯ ಸಲುವಾಗಿ ನಿಗಾ ಮಾಡುವ ಅವಶ್ಯಕತೆಯನ್ನು ಶಿಕ್ಷಕನು ವಿದ್ಯಾರ್ಥಿಗಳ ಕಡೆಯಿಂದ ಹೊರಡಿಸುವನು ಹಾಗೂ ತಮ್ಮ ಮಡಿಗಳಲ್ಲಿ ಕೂಡ ಈಗ ಅದರ ಅವಶ್ಯಕತೆ ಇರುವದನ್ನು ಹೊರಡಿಸುವನು. |
| (ಬ) ಕೆಲಸದ ವಿವರ | (೧) ಕಳೆ ತೆಗೆಯುವದು:—ಕಳೆಗಳನ್ನು ತೆಗೆಯುವದರಿಂದ ಬೆಳೆಗಳಿಗೆ ಸಾಕಷ್ಟು ನೀರು, ಆಹಾರ, ಸ್ಥಳ, ಸೂರ್ಯಪ್ರಕಾಶ ಸಿಗುತ್ತವೆ.<br>(೨) ನೆಲ ಪೊಳ್ಳು ಮಾಡುವದು:— ನೆಲ ಪೊಳ್ಳುಮಾಡುವದರಿಂದ ಭೂಮಿಯಲ್ಲಿ ಹಸಿ, ಉಷ್ಣತೆ, ಹವೆ ಕಾಯ್ದಿಡಲ್ಪಡುವವು.<br>(೩) ಒಡ್ಡಿಗೆ ಮಣ್ಣು ಏರಿಸುವದು:— ಮಣ್ಣನ್ನು ಏರಿಸುವದರಿಂದ ಪೈರುಗಳಿಗೆ ಆಧಾರ ಸಿಕ್ಕು, ಅಪ್ರತ್ಯಕ್ಷ ರೀತಿಯಿಂದ ನೀರು ತಕ್ಕೊಳ್ಳಲಿಕ್ಕೆ, ಹೆಚ್ಚು ಬೇರು ಬಿಡಲಿಕ್ಕೆ ಅನುಕೂಲವಾಗುತ್ತದೆ.<br>(೪) ಕಳೆ ತುಂಬಿ ಗೊಬ್ಬರ ಕುಣಿಯಲ್ಲಿ ಹಾಕುವದು:—ಅಲ್ಲಿಯೇ ಹಾಕುವದರಿಂದ ಅದು ಯೋಗ್ಯ ಗೊಬ್ಬರವಾಗುವದು. | ಇದರಲ್ಲಿ ಅಡಕವಾದ ಕೆಲಸದ ವಿವರಗಳನ್ನು ಹೊರಡಿಸಿ, ಅವುಗಳ ಅಗತ್ಯದ ಬಗ್ಗೆ ಬಾಲಕರ ಕೂಡ ಚರ್ಚಿಸುವನು. ಕರೆ ಹಲಿಗೆಯ ಮೇಲೆ ಬರೆಯುವನು. |

| ೧ | ೨ | ೩ |
|---|---|---|
| | ಈ ಎಲ್ಲ ಕೆಲಸಗಳು ಒಂದೇ ಕಾಲಕ್ಕೆ ನಡೆದರೆ ವೇಳೆಯ ಅಪವ್ಯಯವಾಗುವದಿಲ್ಲ; ಶ್ರಮ ಕಡಿಮೆ ಹತ್ತುವದು. | |
| **೨. ಪೂರ್ವಸಿದ್ಧತೆ:—** **(ಅ) ಬೇಕಾದ ಸಾಧನಗಳ ಸಾಕಷ್ಟು ಸಂಗ್ರಹ, ಹಾಗೂ ಅವುಗಳ ಸರಿಯಾದ ಉಪಯೋಗ** | ಕಳೆ ತೆಗೆಯುವದು:— ಎರಡು ಪ್ರಕಾರದ ಕಳೆಗಳು. ಸದಾ ಇರುವ ಕಳೆಯ ಉದಾಹರಣೆ:—ಕರಿಕೆ, ಜೇಕು. ಹಂಗಾಮಿ ಇರುವ ಕಳೆಯ ಉದಾಹರಣೆ:—ಸಿಂಪಿಗನ ಕಸ, ಮುಳ್ಳ ಹರಿವೆ, ಗೊಳಗೊಳಿಕೆ. ಪ್ರತಿವರ್ಷ ಈ ಕಸಗಳು ಬೆಳೆಯುವ ಕಾರಣ:—ಗಾಳಿ, ನುಳೆ, ಗೊಬ್ಬರದೊಳಗಿಂದ ಈ ಕಸದ ಬೀಜಗಳು ಬಂದು ಕಸ ಬೆಳೆಯುತ್ತದೆ. ತೆಗೆಯಲು ಸಾಧನ:—ಹದನವಾದ ಕುರ್ಚಿಗೆ. ಪೊಳ್ಳು ಮಾಡುವದು:-ಸಸಿಯು ಬೇರುಗಳನ್ನು ಅವಲಂಬಿಸಿರುವದು. ಬೇರುಗಳು ಆಳವಾಗಿ | ಪ್ರತಿಯೊಂದು ಚಟುವಟಿಕೆಯ ತಾತ್ತ್ವಿಕ ಜ್ಞಾನ, ಹಾಗೂ ಅವುಗಳಿಗೆ ಬೇಕಾಗುವ ಸಾಧನಗಳ ಬಗ್ಗೆ ಶಿಕ್ಷಕನು ವಿದ್ಯಾರ್ಥಿಗಳ ಕೂಡ ಚರ್ಚಿಸುವನು. |



| ೧ | ೨ | ೩ |
|---|---|---|
| | ಹೋಗಿದ್ದರೆ ಹೆಚ್ಚಾಗಿ ಗುದ್ದಲಿಯಿಂದ ಪೊಳ್ಳು ಮಾಡಬೇಕಾಗುತ್ತದೆ. ಬೇರುಗಳು ಮೇಲೆಯೇ ಇದ್ದರೆ ಹೆಚ್ಚು ಅಗಿಯುವ ಅವಶ್ಯಕತೆ ಇಲ್ಲ. ಇದಕ್ಕನುಸರಿಸಿ ಉಪಕರಣಗಳು ಬೇಕು. | |
| | ಸಾಧನ:—ಸಸಿಗಳು ಸಣ್ಣವಿದ್ದಾಗ ಕುರ್ಚಿಗೆ, ದೊಡ್ಡವಿದ್ದಾಗ ಬಾಯಿಗುದ್ದಲಿ. ಈಗ ಕ್ಯಾಬೀಜ ಮಡಿಗಳಿಗೆ ಬಾಯಿಗುದ್ದಲಿ ಬೇಕು. | |
| | ಬೊಡ್ಡಿಗೆ ಮಣ್ಣು ಏರಿಸುವದು:—ಕ್ಯಾಬೀಜದ ಎಲೆಗಳು ಮುಚ್ಚದಂತೆ ಮಣ್ಣು ಏರಿಸಬೇಕು. ಕುರ್ಚಿಗೆಯಿಂದ ಇಲ್ಲವೆ ಕೈಯಿಂದ ಮಣ್ಣು ಏರಿಸಬಹುದು. | |
| | ಕಳೆಗಳನ್ನು ತುಂಬಿ ಗೊಬ್ಬರದ ಕುಣಿಯಲ್ಲಿ ಹಾಕುವದು:—ಹೂ ಬಿಡದೆ ಇದ್ದಂಥ ಕಸಗಳನ್ನು ಗೊಬ್ಬರ ಕುಣಿಯಲ್ಲಿ ಹಾಕಬೇಕು. ಹೂ ಬಿಟ್ಟಂಥ ಕಸಗಳನ್ನು ಸುಟ್ಟು | |

| ೧ | ೨ | ೩ |
|---|---|---|
| (ಬ) ಸಂಘಟನೆ. | ಬಿಡಬೇಕು. ಅಂದರೆ ತಿರುಗಿ ಕಸ ಬೆಳೆಯುವ ಅಂಜಿಕೆಯೇ ಇಲ್ಲದಂತಾಗುವದು.<br>ಸಾಧನ:—ಬುಟ್ಟಿಗಳು.<br>ಪ್ರತಿಯೊಂದು ಮಡಿಗಳಿಗೆ ನಾಲ್ಕು ಹುಡುಗರು. ಪ್ರತಿಯೊಬ್ಬನಿಗೆ ಒಂದು ಕುರ್ಚಿಗೆ. ಎರಡು ಮಡಿಗಳ ನಡುವೆ ಒಂದು ಬಾಯಿಗುದ್ದಲಿ. ಸಾಮಾನುಗಳನ್ನು ಕರಲಿಕ್ಕೆ ಹಾಗೂ ತಿರುಗಿ ತೆಗೆದಿಡಲಿಕ್ಕೆ ಒಬ್ಬನನ್ನು ನೇಮಿಸಬೇಕು. ಬೇಕಾದ ಸಾಧನಗಳ ವಿವರ ಹಾಗೂ ಸಂಖ್ಯೆ:—<br>**ಸಾಧನ** — **ಸಂಖ್ಯೆ**<br>ಕುರ್ಚಿಗೆ — ೧೬<br>ಬಾಯಿಗುದ್ದಲಿ — ೨<br>ಬುಟ್ಟಿ — ೨ | ಕೆಲಸದ ವಿವರಗಳನ್ನು ನೆನಪಿಗೆ ತಂದು ಕೊಟ್ಟು ಪ್ರತಿಯೊಂದು ಚಟುವಟಿಕೆಯನ್ನು ಪ್ರತಿಯೊಬ್ಬನು ಮಾಡಬೇಕಾದುದನ್ನು ತಿಳಿಸಿ ನಾಲ್ಕು ಮಡಿಗಳ ಸಲುವಾಗಿ ೧೬ ಹುಡುಗರಲ್ಲಿ ನಾಲ್ಕು ಗುಂಪುಗಳನ್ನು ಶಿಕ್ಷಕನು ವಿದ್ಯಾರ್ಥಿಗಳ ಸಹಾಯದಿಂದ ಮಾಡುವನು. ಹಾಗೂ ಬೇಕಾದ ಸಾಧನಗಳ ವಿವರಗಳನ್ನೂ ಸಂಖ್ಯೆಯನ್ನೂ ಬಾಲಕರಿಂದ ಹೊರಡಿಸಿ ಕರೇ ಹಲಿಗೆಯ ಮೇಲೆ ಬರೆಯುವನು. |

| ೧ | ೨ | ೩ |
|---|---|---|
| (ಕ) ಕೆಲಸ ಮಾಡಬಹುದಾದ ಕಾಲ, ಹಾಗೂ ತಗಲಬಹುದಾದ ವೇಳೆ. | ಈ ಕೆಲಸವನ್ನು ಮುಂಜಾನೆ ಅಥವಾ ಸಾಯಂಕಾಲ ಮಾಡಬೇಕು. ಹಾಗೆ ಮಾಡುವದರಿಂದ ಕಸವನ್ನು ಬೇರು ಸಹಿತ ಕಿತ್ತು ತೆಗೆಯಲು ಅನುಕೂಲವಾಗುವದು. ಗುರುತಿಸಲು ಬರುವಷ್ಟು ದೊಡ್ಡದಾದ ಮೇಲೆ ಕಳೆ ತೆಗೆಯಬೇಕು. ಬೆಳೆಯು ಇರುವ ಒಂದೊಂದು ಮಡಿಯಲ್ಲಿ ನಾಲ್ಕು ಹುಡುಗರು ಕೆಲಸ ಮಾಡಿದರೆ ಒಂದು ತಾಸು ಹತ್ತಬಹುದು. | ಕಳೆ ತೆಗೆಯಲು ಅನುಕೂಲ ವೇಳೆ ಯಾಗುವುದೆಂಬುದನ್ನು ವಿದ್ಯಾರ್ಥಿಗಳ ಕೂಡ ಚರ್ಚಿಸುವನು. ಹಿಂದಿನ ಕೆಲಸಕ್ಕೆ ಹತ್ತಿದ ವೇಳೆಯ ಅನುಭವದ ಮೇಲಿಂದ ಈ ಕೆಲಸಕ್ಕೆ ಹತ್ತಬಹುದಾದ ವೇಳೆಯನ್ನು ಶಿಕ್ಷಕನು ವಿದ್ಯಾರ್ಥಿಗಳ ಕೂಡ ಚರ್ಚಿಸಿ ಗೊತ್ತು ಪಡಿಸುವದು. |
| ೩. ಕಾರ್ಯಾರಂಭ:— | | |
| (ಅ) ಶಿಕ್ಷಕನ ಮಾದರಿಯ ಕೃತಿ. | | ಶಿಕ್ಷಕರು ಒಂದು ಮಡಿಯಲ್ಲಿ ಪ್ರತ್ಯಕ್ಷವಾಗಿ ಕೆಲಸ ಮಾಡಿ ತೋರಿಸಿ, ಕೆಲಸದ ವಿವರಗಳ ಕ್ರಮವನ್ನು ಬಾಲಕರಿಂದ ಹೊರಡಿಸುವನು ಹಾಗೂ ಅವರ ಕೂಡ ಚರ್ಚಿಸಿ, ಅವುಗಳಲ್ಲಿ ನೆನಪಿನಲ್ಲಿಡತಕ್ಕ ಸಂಗತಿಗಳನ್ನು ಬರೆದಿಟ್ಟುಕೊಳ್ಳಲು ಹೇಳುವನು. |
| (ಆ) ಕಾರ್ಯದ ಕ್ರಮ | **ಕಾರ್ಯದ ಕ್ರಮ:**— (೧) ಕಳೆಗಳನ್ನು ಕುರ್ಚಿಗೆಯಿಂದ ಬೇರು ಸಹಿತ ಕೀಳಬೇಕು. (೨) ನೆಲವನ್ನು ಅಗಿದು ಪೊಳ್ಳು ಮಾಡ | |

| ೧ | ೨ | ೩ |
|---|---|---|
| (ಇ) ನೆನಪಿನಲ್ಲಿಡತಕ್ಕ ಸಂಗತಿಗಳು | ಬೇಕು. (೩) ಬೊಡ್ಡಿಗೆ ಮಣ್ಣು ಏರಿಸಬೇಕು. (೪) ಕಸವನ್ನು ತುಂಬಿ ಗೊಬ್ಬರ ಕುಣಿಯಲ್ಲಿ ಒಗೆಯಬೇಕು. ನೆನಪಿನಲ್ಲಿಡತಕ್ಕ ಸಂಗತಿಗಳು:—(ಅ) ಕಳೆಗಳನ್ನು ಬೇರು ಸಹಿತ ಕೀಳಬೇಕು. (ಬ) ಬೆಳೆದ ಬೆಳೆಗಳಿಗೆ ಧಕ್ಕೆ ಹತ್ತಬಾರದು. (ಕ) ಸುಮಾರು ೪" ಆಳವಾಗಿ ಅಗಿಯಬೇಕು. (ಡ) ಕುರ್ಚಿಗೆ ಹಿಡಿಯುವ ಪದ್ಧತಿ. (ಇ) ಗುದ್ದಲಿ ಹಿಡಿಯುವ ಪದ್ಧತಿ. | |
| (ಈ) ವಿದ್ಯಾರ್ಥಿಗಳ ಪ್ರತ್ಯಕ್ಷ ಕೃತಿ. | | ವಿದ್ಯಾರ್ಥಿಗಳು ಕೆಲಸದಲ್ಲಿ ತೊಡಗಿದಾಗ ಶಿಕ್ಷಕನು ಅವರ ತಪ್ಪುಗಳನ್ನು ತಿದ್ದುವನು. ಅವರಿಗೆ ಸಹಾಯ ನೀಡುವನು. |
| ೫. ಪರಿಶೀಲನೆ:— (ಅ) ಯೋಜನೆ | | (ಅ) ಎಷ್ಟು ಮಡಿಗಳಲ್ಲಿ ಕೆಲಸ ಪೂರ್ತಿಯಾಯಿತು? ಯಾವ ಯಾವ ಕೆಲಸಗಳು |



| ೧ | ೨ | ೩ |
|---|---|---|
| ಮತ್ತು ಪ್ರತ್ಯಕ್ಷ ಕಾರ್ಯಗಳಲ್ಲಿಯ ಹೆಚ್ಚು ಕಡಿಮೆ | | ಉಳಿದವು? ಎಷ್ಟು ವೇಳೆಯನ್ನು ಕೊಡಬೇಕೆಂದು ಮಾಡಿದ್ದಿರಿ? ಎಷ್ಟು ವೇಳೆ ಕೆಲಸ ಮಾಡಿದಿರಿ? ಕೆಲಸಗಳು ಇನ್ನೂ ಯಾಕೆ ಉಳಿದವು? ಹೆಚ್ಚು ವೇಳೆ ಅಥವಾ ಕಡಿಮೆ ವೇಳೆ ಏಕೆ ತೆಗೆದುಕೊಂಡಿರಿ? |
| (ಆ) ಕಾರ್ಯ ನಿರ್ವಹಣೆಯಲ್ಲಾದ ತಪ್ಪುಗಳು | | (ಬ) ಎಷ್ಟು ಆಳ ಅಗಿದಿರಿ? ಎಷ್ಟು ಕ್ಯಾಬೀಜ ಗಿಡಗಳಿಗೆ ಧಕ್ಕೆ ಹಚ್ಚಿದಿರಿ? ಕುರ್ಚಿಗೆ ಗುದ್ದಲಿಗಳನ್ನು ಹಿಡಿದ ಪದ್ಧತಿಗಳ ಬಗ್ಗೆ ಹಾಗೂ ಇನ್ನಿತರ ಕಾರ್ಯ ಮಾಡುವಾಗ ಕಂಡು ಬಂದ ತಪ್ಪುಗಳ ಬಗ್ಗೆ ಶಿಕ್ಷಕನು ಚರ್ಚಿಸುವನು. |
| (ಇ) ಆಕಸ್ಮಿಕ ಘಟನೆಗಳು ಹಾಗೂ ವಿದ್ಯಾರ್ಥಿಗಳು ಅವುಗಳನ್ನು ಎದುರಿಸಿದ ರೀತಿ | | (ಕ) ಏನಾದರೂ ಆಕಸ್ಮಿಕ ಪ್ರಸಂಗ ಒದಗಿದ್ದರೆ, ಅದನ್ನು ಬಾಲಕರು ಎದುರಿಸಿದ್ದರ ಬಗ್ಗೆ ಅವರ ಕೂಡ ಚರ್ಚಿಸುವದು. |
| ೬. ಕ್ರೋಢೀಕರಣ:— | (೧) ನಿಗಾ ಮಾಡುವುದರ ಅವಶ್ಯಕತೆ. | ನಿಗಾ ಮಾಡುವುದರ ಅಗತ್ಯವನ್ನು |

| ೧ | ೨ | ೩ |
|---|---|---|
| | (೨) ಬಾಲಕರು ತಾವು ಮಾಡಿದ ಕೆಲಸ ವಿವರಗಳ ಬರೆಹ. | ವಿದ್ಯಾರ್ಥಿಗಳ ಬಾಯಿಂದ ಉತ್ತರ ರೂಪವಾಗಿ ಹೊರಡಿಸಿಕೊಳ್ಳುವನು. ವಿದ್ಯಾರ್ಥಿಗಳು ತಾವು ಈ ಹೊತ್ತು ಮಾಡಿದ ಕೆಲಸಗಳನ್ನು ಬರೆದಿಡಲು ಹೇಳುವನು. |



**ಅಗತ್ಯವಾಗಿ ಬಂದ ವಿಷಯಗಳು (ಸಮವಾಯ ಜ್ಞಾನ)**

| ಚಟುವಟಿಕೆ | ಭಾಷೆ | ಗಣಿತ | ಸಾಮಾನ್ಯ ವಿಜ್ಞಾನ | ಸಮಾಜ ವಿಜ್ಞಾನ | ಡ್ರಾಯಿಂಗ |
|---|---|---|---|---|---|
| ನಿಗಾ ಮಾಡುವದು | ಬರೆಹ | — | ಕಳೆ, ಅದರ ಪ್ರಕಾರಗಳು, ಹುಟ್ಟುವ ಕಾರಣಗಳು. ಪೊಳ್ಳು ಮಾಡುವದರಿಂದ ಬೊಡ್ಡಿಗೆ ಮಣ್ಣು ಏರಿಸುವದರಿಂದ ಆಗುವ ಲಾಭಗಳು. | ಸಂಘಟನೆ—ಕೂಡಿಕೊಂಡು ಕೆಲಸ ಮಾಡುವದರ ಉಪಯುಕ್ತತೆ. | — |

**ಸಮವಾಯ ಪದ್ಧತಿಯ ಪಾಠ**

ಶಿಕ್ಷಕರು: ಶ್ರೀ. ವೀರೇಶ ಹಿರೇಮಠ, ಬಿ. ಎ., ಬಿ. ಟಿ. ವರ್ಗ: ೨. ಬಾಲಕರ ಸಂಖ್ಯೆ: ೧೩.

ಚಟುವಟಿಕೆ: **ತೋಟದಲ್ಲಿ ವನಭೋಜನ ಕಾರ್ಯಕ್ರಮ.** ದಿನಾಂಕ: ೧೮—೧೧—೪೮.

ಸಾಮಾನ್ಯ ವಿಜ್ಞಾನ: **ಚವಳಿ, ಬದನೆ, ಚಪ್ಪರ ಬದನೆ, ಮೆಣಸಿನಕಾಯಿ ಮುಂತಾದ ಬೆಳೆಗಳ ನಿರೀಕ್ಷಣೆ.**

ಭಾಷಾ: **ವಾಚಾ ನಿಬಂಧ.**



| ಮೆಟ್ಟುಗಳು ಹಾಗೂ ಅವುಗಳ ವಿವರ | ಅವಶ್ಯಕ ಜ್ಞಾನ | ಕಲಿಸುವ ಕ್ರಮ |
|---|---|---|
| ೧. ಯೋಜನೆ:—<br>(ಅ) ಪ್ರೇರಣೆ | ವನಭೋಜನದಿಂದ ಬಾಲಕರಿಗೆ ಸ್ವಾಭಾವಿಕ ಆನಂದವಾಗುವದಲ್ಲದೆ, ಸಾಂಘಿಕ ಹಾಗೂ ಸಹಕಾರೀ ಜೀವನವನ್ನು ಸಾಗಿಸಲು ವಿಶೇಷ ಅನುಕೂಲವಾಗುವದು. ತೋಟದಲ್ಲಿ ಸಕಲ ಬಾಲಕರು ಸಹ-ಭೋಜನ ಮಾಡುವದಕ್ಕೆ ವನ-ಭೋಜನವೆಂದು ಹೆಸರು. | ನಿತ್ಯ ಮನೆಯಲ್ಲಿ ಊಟ ಮಾಡುವದರಿಂದ ಬೇಸರವುಂಟಾಗುವದೆಂದೂ, ವೈವಿಧ್ಯವು ಜೀವನದ ಕುರುಹು ಎಂದೂ ಎಲ್ಲರೂ ಕೂಡಿ ಊಟ ಮಾಡುವದರಿಂದ ಊಟಕ್ಕೆ ಒಂದು ವಿಶೇಷ ರುಚಿ ಬರಬಹುದೆಂದೂ ಹಾಗೂ ವನಭೋಜನದ ಅವಶ್ಯಕತೆಯನ್ನು ಶಿಕ್ಷಕರು ಪ್ರಶ್ನೆಗಳ ಮುಖಾಂತರ ಬಾಲಕರಿಂದ ಹೊರಡಿಸುವದು. |

| ೧ | ೨ | ೩ |
|---|---|---|
| (ಬ) ಕೆಲಸದ ವಿವರ | ಈ ಚಟುವಟಿಕೆಯಲ್ಲಿ ಕೆಳಗಿನವು ಅವಶ್ಯವಾದ ಕೆಲವು ವಿವರಗಳು:<br>೧] ಬಾಲಕರನ್ನು ಶಿಸ್ತಿನಿಂದ ಸಾಲಿನಲ್ಲಿ ಸಮೀಪದ ತೋಟಕ್ಕೆ ಕರೆದುಕೊಂಡು ಹೋಗುವದು. ೨] ತೋಟಕ್ಕೆ ಹೋಗುವ ದಾರಿಯಲ್ಲಿ ತಗಲುವ ಕಟ್ಟಡ, ಗುಡಿ–ಗೋಪುರ ಹಾಗೂ ದಿಕ್ಕುಗಳನ್ನು ನಿರೀಕ್ಷಿಸುವದು. ೩] ತೋಟಕ್ಕೆ ಬಂದು ನಿರ್ದಿಷ್ಟಗೊಳಿಸಿದ ಸ್ಥಳದಲ್ಲಿ ಸಕಲ-ಸಾಮಗ್ರಿಗಳನ್ನು ಸಜ್ಜು ಮಾಡಿ ಇಡುವದು. ೪] ತೋಟದಲ್ಲಿಯ ಬೆಳೆಗಳ ಸರ್ವ ಸಾಮಾನ್ಯ ನಿರೀಕ್ಷಣೆ ಮಾಡುವದು. ೫] ಊಟಕ್ಕೆ ಕೂಡ್ರುವ ಸ್ಥಳವನ್ನು ನಿರ್ದಿಷ್ಟಗೊಳಿಸುವದು, ಸ್ವಚ್ಛ ಮಾಡುವದು. ೬] ಕೈ-ಕಾಲು-ಮುಖ ತೊಳೆದುಕೊಳ್ಳುವದು. | |

| | | |
|---|---|---|
| | ೭] ಕುಡಿಯುವ ನೀರಿನ ವ್ಯವಸ್ಥೆ ಮಾಡುವದು. ೮] ಶಿಸ್ತಿನಿಂದ ಕೂತು ದೇವರ ಭಜನೆಯನ್ನು ಇಲ್ಲವೆ ಶಾಂತಿ ಮಂತ್ರವನ್ನು ಸಾಮೂಹಿಕವಾಗಿ ಅನ್ನುವದು. ೯] ಕೆಲವು ಬಾಲಕರಿಂದ ಆಹಾರ-ವಿತರಣವನ್ನು ಸರಿಯಾಗಿ ಮಾಡುವದು. ೧೦] ಊಟ ಮಾಡುವದು. ೧೧] ಕೈ–ಬಾಯಿ ತೊಳೆದುಕೊಳ್ಳುವದು. ೧] ಊಟಮಾಡಿದ ಸ್ಥಳವನ್ನು ಸ್ವಚ್ಛ ಮಾಡುವದು. | |
| **೨. ಪೂರ್ವಸಿದ್ಧತೆ:—**<br>(ಅ) ಸಾಧನ ಸಾಮಗ್ರಿಗಳು | ೧) ಬುತ್ತಿಯ ಗಂಟುಗಳು.<br>೨) ನಾಲ್ಕು ಕಸಬರಿಗೆಗಳು.<br>೩) ಒಂದು ಬಕೀಟು.<br>೪) ನಾಲ್ಕು ತಂಬಿಗೆಗಳು. ಹಾಗೂ ೫. ಬಟ್ಟಲಗಳು<br>೫) ಎರಡು ಕೊಡಗಳು. | ಪ್ರತಿಯೊಂದು ಚಟುವಟಿಕೆಯ ತಾತ್ತ್ವಿಕ ಹಿನ್ನೆಲೆ ಹಾಗೂ ಜ್ಞಾನ ಮತ್ತು ಅವಶ್ಯಕತೆಗಳ ಬಗ್ಗೆ ಶಿಕ್ಷಕರು ಬಾಲಕರ ಕೂಡ ಚರ್ಚಿಸಿ ಸಂಗ್ರಹಿಸಿದ ಸಾಧನ-ಸಾಮಗ್ರಿಗಳ ಸದುಪಯೋಗ ಮಾಡಿಕೊಳ್ಳಲು ತಿಳಿಸುವದು. ಸ್ವಚ್ಛತೆಯ ಅವಶ್ಯಕತೆ ತೋರಿಸಿ. ಬೆಳೆಗಳ ಶಾಸ್ತ್ರೀಯ ನಿರೀಕ್ಷಣೆ, ಸಹಕಾರ-ಸಂಘಟನೆಗಳ ಲಾಭ ಮೊದಲಾದ ವಿವರಣಾತ್ಮಕ ವಿವೇಚನೆಯನ್ನು ಮಾಡುವದು. |

| ೧ | ೨ | ೩ |
| --- | --- | --- |
| (ಬ) ಸಂಘಟನೆ | ವಿದ್ಯಾರ್ಥಿಗಳು<br>೧] ಊಟ ಮಾಡಿದ ಸ್ಥಳವನ್ನು ಸ್ವಚ್ಛ ಮಾಡುವದು. ೪.<br>೨] ಕೈ-ಕಾಲು ತೊಳೆದುಕೊಳ್ಳಲು ನೀರು ತರಿಸುವದು. ೪.<br>೩] ನೀರು ತರಿಸುವದು (ಕುಡಿಯುವ ನೀರನ್ನು) ೪.<br>೪] ಆಹಾರವನ್ನು ಎಲ್ಲ ಬಾಲಕರಿಗೆ ಶಿಸ್ತಿನಿಂದ ಹಾಗೂ ಸಮನಾಗಿ ಹಂಚುವದು. ೪. | |
| ೩. ಕಾರ್ಯ ನಿರ್ವಹಣ:—<br>(ಅ) ಶಿಕ್ಷಕರು ಮಾದರಿಗಾಗಿ ಬೆಳೆಗಳ ನಿರೀಕ್ಷಣೆ ಮಾಡುವದು | ತೋಟದಲ್ಲಿಯ ಎಲ್ಲ ಮಡಿಗಳಿಗೆ ಬಾಲಕರನ್ನು ಕರೆದುಕೊಂಡು ಹೋಗಿ ಅವುಗಳ ಶಾಸ್ತ್ರೀಯ ಪರಿಚಯ ಮಾಡಿ ಕೊಡುವದು. | ಶಿಕ್ಷಕರು ಎಲ್ಲ ಮಡಿಗಳಲ್ಲಿಯ ವಿವಿಧ ಬೆಳೆಗಳನ್ನು ಪ್ರತ್ಯಕ್ಷ ನಿರೀಕ್ಷಣೆಯ ವಿವರಗಳ ಕ್ರಮವನ್ನು ಬಾಲಕರಿಂದ ಹೊರಡಿಸುವದು ಹಾಗೂ ಅವರ ಕೂಡ ಚರ್ಚಿಸಿ ವಿವರ |



| ೧ | ೨ | ೩ |
| --- | --- | --- |
| | | ಗಳನ್ನು ಬರೆದಿಟ್ಟುಕೊಳ್ಳಲು ಹೇಳುವದು.<br>[೧] ಬಣ್ಣ [೨] ಆಕಾರ [೩] ತೂಕ [೪] ಗಾತ್ರ ಹಾಗೂ ಆವಶ್ಯಕತೆ ಮತ್ತು ಉಪಯೋಗಗಳ-ಚರ್ಚೆ. |
| (ಬ) ಕಾರ್ಯದ ಕ್ರಮ<br>(ಕ) ನೆನಪಿನಲ್ಲಿಡತಕ್ಕ ಸಂಗತಿಗಳು | ೧] ಭೂಮಿಯಲ್ಲಿಯ ಬೆಳೆಗಳನ್ನು ಸಿಕ್ಕ ಸಿಕ್ಕ ಹಾಗೆ ತುಳಿದಾಡಬಾರದು.<br>೨] ಮುಳ್ಳುಗಳನ್ನು ತುಳಿಯಬಾರದು, ಹೂವು, ಕಾಯಿ-ಹಣ್ಣು-ಹಂಪಲಗಳನ್ನು ಹರಿಯಬಾರದು.<br>೩] ಗೊಂದಲ ಮಾಡಬಾರದು.<br>೪] ಊಟದ ಸ್ಥಳವನ್ನು ಸ್ವಚ್ಛ ಮಾಡಿ ಊಟ ಮಾಡಬೇಕು.<br>೫] ಊಟ ಮಾಡಿದ ಸ್ಥಳವನ್ನು ಸ್ವಚ್ಛ ಮಾಡುವದು. | |
| (ಡ) ವಿದ್ಯಾರ್ಥಿಗಳ ಪ್ರತ್ಯಕ್ಷ ಕಾರ್ಯ | | ವಿದ್ಯಾರ್ಥಿಗಳು ಕೆಲಸದಲ್ಲಿ ತೊಡಗಿದಾಗ ಶಿಕ್ಷಕರು ಅವರ ತಪ್ಪುಗಳನ್ನು ಸಹಾನುಭೂತಿಯಿಂದ ತಿದ್ದುವದು. ಹಾಗೂ ಅವಶ್ಯವೆನಿಸಿದ ಸಹಾಯ ನೀಡುವದು. |

| ೧ | ೨ | ೩ |
|---|---|---|
| ೪. ಪರಿಶೀಲನೆ:— | | |
| (ಅ) ಯೋಜನೆ ಮತ್ತು ಪ್ರತ್ಯಕ್ಷ ಕಾರ್ಯಗಳಲ್ಲಿಯ ಹೆಚ್ಚು ಕಡಿಮೆಗಳು. | | ಅ] ಎಷ್ಟು ಕೆಲಸವು ಪೂರ್ತಿಯಾಯಿತು? ಯಾವ ಯಾವ ಕೆಲಸಗಳು ಉಳಿದವು? ಉಳಿದಿದ್ದರೆ ಯಾಕೆ ಉಳಿದವು? ಯೋಜನೆಯಲ್ಲಿ ಇಲ್ಲದ ಕೆಲಸಗಳು ಆದವೋ? ಅವುಗಳ ಕಾರಣಗಳೇನು? |
| (ಬ) ಕಾರ್ಯ ನಿರ್ವಹಣದಲ್ಲಿ ಆದ ಕಾರ್ಮಿಕ ತಪ್ಪುಗಳು. | | ಬ] ಬೆಳೆಗಳನ್ನು ನಿರೀಕ್ಷಿಸುವಾಗ ಯಾವ ಬೆಳೆಗಾದರೂ ಧಕ್ಕೆ ತಗಲಿತೇ? ಯಾರಾದರೂ ಮುಳ್ಳು ತುಳಿದಿರೋ? ಯಾರಾದರೂ ಕಿಡಿಗೇಡಿತನದಿಂದ ಹೂ-ಕಾಯಿಗಳನ್ನು ಹರಿದರೋ? |
| (ಕ) ಆಕಸ್ಮಿಕ ಘಟನೆಗಳು ಮತ್ತು ವಿದ್ಯಾರ್ಥಿಗಳು ಅವುಗಳನ್ನು ಎದುರಿಸಿದ ರೀತಿ. | | ಕ] ಏನಾದರೂ ಆಕಸ್ಮಿಕ ಪ್ರಸಂಗ ಒದಗಿದ್ದರೆ ಅದನ್ನು ಬಾಲಕರು ಎದುರಿಸಿದ ಬಗ್ಗೆ ಶಿಕ್ಷಕರು ಅವರಗೂಡ ಚರ್ಚಿಸುವದು. |
| ೫. ದೃಢೀಕರಣ:— | ವನ-ಭೋಜನದ ವಿವರಗಳು. | ಬಾಲಕರ ಬಾಯಿಂದ ಶುದ್ಧ ಹಾಗು ತಿಳಿಯಾದ ಭಾಷೆಯಲ್ಲಿ ಪ್ರಶ್ನೆಗಳ ಮುಖಾಂತರ ಹೊರಡಿಸಿಕೊಳ್ಳುವದು. |
| ೬. ಮನೆಗೆಲಸ:— | | ತೋಟದ ಊಟದ ಬಗ್ಗೆ ನಾಲ್ಕು ಮಾತುಗಳನ್ನು ಬರೆಯಿರಿ. |

## ಸಮವಾಯ ಪದ್ಧತಿಯ ಪಾಠ

**ಶಿಕ್ಷಕರು: ಜಾ. ಫ. ಲಿಂಗನಗೌಡ್ರ.** ತರಗತಿ: ೩. ವೇಳೆ; ೨ ತಾಸು. ಪರಿಸ್ಥಿತಿ: **ಆರ್ಥಿಕ**

**ಚಟುವಟಿಕೆ: ಹತ್ತೀ ಸ್ವಚ್ಛ ಮಾಡುವದು.** ಸಮವಾಯ ಜ್ಞಾನ: **ಹತ್ತೀ ಸ್ವಚ್ಛಮಾಡುವ ಪದ್ಧತಿ.**

(೧) **ಇಳಿಕೆಯ ರೂಪಾಂತರ.** (೨) **ಸಾಮಾನ್ಯ ವಿಜ್ಞಾನ.** ಉಪಕರಣ: **ಹತ್ತಿ, ರಟ್ಟು, ಹಾಳಿ ಮುಂ.**

| ಮೆಟ್ಟುಗಳು ಹಾಗೂ ಅವುಗಳ ವಿವರ | ಆವಶ್ಯಕ ಜ್ಞಾನ | ಕಲಿಸುವ ಕ್ರಮ |
|---|---|---|
| ೧. **ಕೆಲಸ:—** | | |
| ಅ] **ಪ್ರೇರಣೆ.** | ಹತ್ತಿ ಸ್ವಚ್ಛ ಮಾಡುವದರ ಅಗತ್ಯ. | ೧) ಹಂಜಿ ಶಿಲ್ಕು ಇಲ್ಲದ್ದರಿಂದ ಕಸರು ಹತ್ತಿ ಮಾತ್ರ ಇರುವದರಿಂದ, ಮೂಲ ಉದ್ಯೋಗದ ಯಾವ ಕ್ರಿಯೆ ಮಾಡಬೇಕೆಂಬದನ್ನು ಮಕ್ಕಳೊಡನೆ ಚರ್ಚಿಸಿ ನಿರ್ಣಯ ಮಾಡುವದು. |
| ಬ] ಕೆಲಸದ ನಿರ್ಣಯ | ಕಸರು ನೂಲು ಮತ್ತು ಸ್ವಚ್ಛ ನೂಲು ಇವುಗಳ ನಿರೀಕ್ಷಣೆ | ೨) ಸ್ವಚ್ಛ ಹತ್ತಿಯಿಂದ ಉತ್ತಮ ನೂಲು ಹೊರಡುವದೆಂಬದನ್ನು ತಿಳಿಸುವದು. |



| | | |
|---|---|---|
| ೨. **ಕೆಲಸದ ಸಿದ್ಧತೆ:—** | **ಸಾಧನಗಳ ಪರಿಚಯ** | ೩) ಇಂದು ಯಾವ ಪದ್ಧತಿಯಿಂದ ಹತ್ತಿ ಸ್ವಚ್ಛ ಮಾಡಬೇಕೆಂಬದನ್ನು ಗೊತ್ತು ಪಡಿಸುವದು. ಹತ್ತೀ ಸ್ವಚ್ಛ ಮಾಡುವಾಗ ಬೇಕಾಗುವ ಸಾಮಾನುಗಳ ಬಗ್ಗೆ ಚರ್ಚಿಸುವದು. |
| ಅ] ಸಾಧನಗಳ ಸಂಗ್ರಹ | ಹತ್ತಿ, ರಟ್ಟು, ಹಾಳಿ, ಬೂದಿ, ತಕ್ಕಡಿ. | |
| ಬ] ಕಾರ್ಯ ಸಂಘಟನೆ | ನಾಲ್ಕು ಗುಂಪುಗಳನ್ನು ಮಾಡುವದು. | ನಾಲ್ಕು ಗುಂಪುಗಳನ್ನು ಮಾಡುವದು. ಗುಂಪುಗಳಿಗೆ ಹೆಸರು ಕೊಡುವದು. |
| ೩. **ಕೆಲಸದ ಆರಂಭ:—** | ೧) ಹತ್ತಿ ಜಾಡಿಸಿ ಮಣ್ಣು ತೆಗೆಯುವದು. | |
| ಅ] ಶಿಕ್ಷಕನ ಕೃತಿ | ೨) ಒಂದೊಂದೇ ತೊಳೆಯನ್ನು ಎಡಗೈಯಲ್ಲಿ ಹಿಡಿದುಕೊಂಡು, ಬಲಗೈಯಿಂದ ಸಾವಕಾಶವಾಗಿ ಎಲೆಗಸರು, ಆಟ್ಟೆ ಕಡ್ಡಿ ಇವುಗಳನ್ನು ತೆಗೆಯುವದು. (ತೋರು ಬೆರಳು ಹಾಗೂ ಹೆಬ್ಬೆರಳುಗಳ ಉಪಯೋಗ.<br>೩) ತಂತುಗಳು ಕಸರಿನ ಕೂಡ ಹೋಗದಂತೆ ಎಚ್ಚರ ಪಡುವದು.<br>೪) ಹಳದಿ ಬಣ್ಣದ ತೊಳೆ ತೆಗೆಯುವದು | ಶಿಕ್ಷಕನು ಮಾದರಿಗಾಗಿ ಒಂದೊಂದೇ ತೊಳೆಯನ್ನು ತೆಗೆದುಕೊಂಡು, ಮಣ್ಣು, ಕಸರು ಅಶಕ್ತ ತಂತುಗಳು ಇವುಗಳನ್ನು ತೆಗೆಯುವದು. ಕೃತಿ ಮಾಡಿ ತೋರಿಸುವದು.<br>ಹತ್ತಿ ಸ್ವಚ್ಛ ಮಾಡುವಾಗ ಮಕ್ಕಳು ನೆನಪಿಡತಕ್ಕ ಸಂಗತಿಗಳನ್ನು ಶಿಕ್ಷಕನು ಅವರ ಗಮನಕ್ಕೆ ತಂದು ಕೊಡುವದು. |

| ೧ | ೨ | ೩ |
|---|---|---|
| ಬ] ಮಕ್ಕಳ ಕೃತಿ | ಶಿಸ್ತಿನಿಂದ ಸಾಮಾನುಗಳ ಹಂಚುವಿಕೆ<br><br>**ವೇಳೆ: ಅರ್ಧ ಗಂಟೆ**<br><br>ಗುಂಪಿನ ನಾಯಕರಿಂದ ಸಾಮಾನುಗಳನ್ನು ಕೊಡಿಸುವದು. ಹತ್ತೀ ತೂಕ ಮಾಡುವದು. | ಮುಖ್ಯ ಮಂತ್ರಿ ಹಾಗೂ ಉಪಮಂತ್ರಿ ಇವರಿಂದ ವರ್ಗದ ಎಲ್ಲ ಮಕ್ಕಳಿಗೆ ಶಿಸ್ತಿನಿಂದ ಸಾಮಾನುಗಳನ್ನು ಹಂಚಿಸುವದು.<br><br>ಅರ್ಧ ಗಂಟೆಯ ವರೆಗೆ ಕ್ರಿಯೆ ಮಾಡಬೇಕೆಂಬದನ್ನು ತಿಳಿಸುವದು.<br><br>ಶಿಕ್ಷಕನು ವರ್ಗದಲ್ಲಿ ಅಡ್ಡಾಡುತ್ತ ವೈಯಕ್ತಿಕವಾಗಿ ಮಕ್ಕಳ ತಪ್ಪು ತಿದ್ದುವದು.<br><br>ವೇಳೆ ಮುಗಿದ ಮೇಲೆ ಗುಂಪಿನ ನಾಯಕರಿಂದ ಸ್ವಚ್ಛ ಹತ್ತಿ, ಕಸರು, ರಟ್ಟು ಇವುಗಳನ್ನು ಒತ್ತಟ್ಟಿಗೆ ಕೂಡಿಸುವದು.<br><br>ಸ್ವಚ್ಛ ಹತ್ತಿಯನ್ನು ಅವರಿಂದ ತೂಕ ಮಾಡಿಸುವದು. |

**೪. ಕೆಲಸದ ಪರಿಶೀಲನೆ:-**

| ಗುಂಪು | ಪೌಂ. | ಶೇರು | ತೊಲೆ |
|---|---|---|---|
| ೧ನೆಯ ಗು. | | | ೬ |
| ೨ ,, ,, | | | ೬ |
| ೩ ,, ,, | | | ೫ |
| ೪ ,, ,, | | | ೫ |
| ಒಟ್ಟು | | ೧ | ೩ |

ಬೇರೆ ಬೇರೆ ಗುಂಪಿನವರು ಮಾಡಿದ ಕೆಲಸ ಕೇಳಿಕೊಳ್ಳುವದು. ಕರೀ ಹಲಿಗೆಯ ಮೇಲೆ ಅವರ ಕೆಲಸದ ವಿವರವನ್ನು ಬರೆಯುವದು.

**೫. ಸಂಬಂಧೀಕರಣ:—**

ಅ] ಸಮವಾಯ ಜ್ಞಾನ

**ಗಣಿತ**

(೧) ೧ ಶೇರು ೩ ತೊಲೆಗಳಿಗೆ ಆಣೆಗಳು ಎಷ್ಟು? ಒಟ್ಟು ೨೩ ತೊಲೆಗಳು. ೨೩×೧೬=೩೬೮ ಆಣೆಗಳು.

(೨) ೧ ಶೇರು ೧೫ ತೊಲೆಗಳಿಗೆ ಎಷ್ಟು ಆಣೆಗಳಾಗುವವು? ೪೫×೧೬=೭೨೦ ಆಣೆಗಳು.

(೩) ೧ಪೌಂ, ೧ಶೇರು, ೧೨ತೊಲೆಗಳಿಗೆ ತೊಲೆಗಳು ಎಷ್ಟು?

ನಾಲ್ಕೂ ಗುಂಪಿನವರು ಸ್ವಚ್ಛ ಮಾಡಿದ ಹತ್ತಿಯ ತೂಕವನ್ನು ಕೇಳಿಕೊಳ್ಳುವದು. ಸ್ವಚ್ಛ ಮಾಡಿದ ಹತ್ತಿಯ ತೂಕ ತೊಲೆ ಮತ್ತು ಆಣೆಗಳಲ್ಲಿ ಹೊರಡಿಸಿಕೊಳ್ಳುವದು.

ಇಂಥ ಬೇರೆ ಉದಾಹರಣೆಗಳನ್ನು ಕೇಳುವದು.

ಬ] ದೃಢೀಕರಣ

ಮಕ್ಕಳ ಸಹಾಯದಿಂದ ಪದ್ಧತಿಗೆ ಸರಿಯಾಗಿ ಕರೀ ಹಲಿಗೆಯ ಮೇಲೆ ಈ ಲೆಖ್ಖವನ್ನು ಬಿಡಿಸುವುದು. ಮಕ್ಕಳಿಗೆ ಪಾಟಿಯ ಮೇಲೆ ಈ ಲೆಖ್ಖವನ್ನು ಬಿಡಿಸಲಿಕ್ಕೆ ಹೇಳುವದು.

| ೧ | ೨ | ೩ |
| --- | --- | --- |
| | **ಸಾಮಾನ್ಯ ವಿಜ್ಞಾನ**<br>(೧) ಹತ್ತಿಯನ್ನು ಬಿಡಿಸುವ ವೇಳೆ. (೨) ಹತ್ತಿಯಲ್ಲಿಯ ಕಸರು ಹತ್ತೀ ಸ್ವಚ್ಛ ಮಾಡುವಾಗ ನೆನಪಿಡತಕ್ಕ ಸಂಗತಿಗಳನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ. (೩)ಹತ್ತಿ ಬೆಳೆಯುವ ಭೂಮಿ. (೪) ಅಶಕ್ತ ತೊಳೆ. (೫) ತಂತುಗಳ ಉದ್ದಳತೆ. (೬) ಹತ್ತಿಯ ಪ್ರಕಾರಗಳು. (೭) ಬೂದಿಯ ಉಪಯೋಗ. (೮) ಹತ್ತಿಯ ಬೆಳೆ ಸರಿಯಾಗಿ ಬರಬೇಕಾದರೆ ಗೊಬ್ಬರದ ಉಪಯೋಗ. | ಆವಶ್ಯಕ ಜ್ಞಾನದ ಕೋಷ್ಟಕದಲ್ಲಿ ಬರೆದ ಮಾತುಗಳಿಗೆ ಮಕ್ಕಳಿಂದ ಸರಿಯಾದ ಉತ್ತರಗಳನ್ನು ಹೊರಡಿಸಿಕೊಳ್ಳುವದು. |
| **೬. ಮನೆಗೆಲಸ:—** | | ಹತ್ತೀ ಸ್ವಚ್ಛ ಮಾಡುವಾಗ ನೆನಪಿಡತಕ್ಕ ಸಂಗತಿಗಳನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ. |

# ಪರಿಶಿಷ್ಟ:

**ಧಾರ್ಮಿಕ ಹಬ್ಬ:— ಗಜಾನನೋತ್ಸವ**

**೧ನೇ ವರ್ಗ:**— ಚಟುವಟಿಕೆ:— ಗಣಪತಿಯನ್ನು ಮಾಡಲಿಕ್ಕೆ ಮಣ್ಣು ತರುವದು. ವಿಷಯ:— (೧) ದಿಕ್ಕುಗಳ ಕಲ್ಪನೆ (೨) ಮಣ್ಣಿನ ಪ್ರಕಾರಗಳು.

**೨ ನೇ ವರ್ಗ:**— ಚಟುವಟಿಕೆ:— ಮಣ್ಣು ಹದಗೊಳಿಸುವದು. ವಿಷಯ:— (೧) ಕುಂಬಾರ ಇಲ್ಲವೆ ಜೀನಗಾರ ಇವರ ಮನೆಯ ನಿರೀಕ್ಷಣೆ ಹಾಗು ಅವರ ಕೆಲಸಗಳ ಪರಿಚಯ (೨) ವಾಚಾ ನಿಬಂಧ

**೩ ನೇ ವರ್ಗ:**—ಚಟುವಟಿಕೆ:— ಹದಗೊಳಿಸಿದ ಮಣ್ಣಿನಿಂದ ಗಣಪತಿ ಮಾಡುವದು. ವಿಷಯ:— (೧) ಗಣಪತಿಯ ಕತೆ (೨) ಬರೆಹ.

**೪ ನೇ ವರ್ಗ**— ಚಟುವಟಿಕೆ:— ಗಣಪತಿಗೆ ಬಣ್ಣ ಕೊಡುವದು. ವಿಷಯ:— (೧) ಜಮಾಖರ್ಚು— ಬಣ್ಣಗಳ ಖರ್ಚಿನ ಯಾದಿ. (೨) ಬರೆಹ— ಬಣ್ಣ ತರುವದಕ್ಕಾಗಿ ಬೇಕಾಗುವ ಹಣದ ಸಲುವಾಗಿ ಮುಖ್ಯಾಧ್ಯಾಪಕರಿಗೆ ಬರೆದ ಪತ್ರ.

**೫ ನೇ ವರ್ಗ**—ಚಟುವಟಿಕೆ:— ಮಂಟಪದ ಸಿದ್ಧತೆ. ವಿಷಯ:— (೧) ಕ್ಷೇತ್ರ ಫಲ, ಸುಣ್ಣ–ಬಣ್ಣಗಳ ಬೆಲೆ. (೨) ತಯಾರಿಸಿದ ಮಂಟಪದ ವರ್ಣನೆ.

**೬ ನೇ ವರ್ಗ**—ಚಟುವಟಿಕೆ:—ಪೂಜೆಯ ಸಾಮಾನುಗಳನ್ನು ಸಜ್ಜುಗೊಳಿಸುವದು. ವಿಷಯ:— (೧) ಜಮಾಖರ್ಚು–ಕಿರ್ದಿ ಬರೆಯುವದು. (೨) ಚವತಿ ಚಂದ್ರ (ಏಕಾಂಕ ಇಲ್ಲವೆ ಸಂಭಾಷಣೆ).

**೭ ನೇ ವರ್ಗ**—ಚಟುವಟಿಕೆ:— ಸಭೆಯ ಏರ್ಪಾಡು. ವಿಷಯ:— (೧) ಅಥಿತಿ ಸತ್ಕಾರ. ಸಭೆಯ ಕಾರ್ಯ ಜರುಗಿಸುವದು. (ಭಾಷಣ, ವಿನೋದಾವಳಿಗಳು ಇತ್ಯಾದಿ).

**ರಾಷ್ಟ್ರೀಯ ಹಬ್ಬ:— ಗಾಂಧೀ ಜಯಂತಿ**

**೧ ನೇ ವರ್ಗ**—ಚಟುವಟಿಕೆ:— ರಾಷ್ಟ್ರ ಧ್ವಜ ತಯಾರಿಸುವದು. ವಿಷಯ:—(೧) ಬಣ್ಣಗಳ ಕಲ್ಪನೆ (೨) ವಾಚಾ ನಿಬಂಧ ಅಥವಾ ಹಾಡು.

**೨ ನೇಯ ವರ್ಗ**—ಚಟುವಟಿಕೆ;— ಕಾಗದದ ತಳಿರು ತಯಾರು ಮಾಡುವದು. ವಿಷಯ:— (೧) ತ್ರಿಕೋನ, ಚೌಕೋನಗಳ ಕಲ್ಪನೆ (೨) ಚಿತ್ರ ತೆಗೆಯುವದು.

**೩ ನೇ ವರ್ಗ**—ಚಟುವಟಿಕೆ:— ಮಂಟಪವನ್ನು ಅಲಂಕರಿಸುವದು. ವಿಷಯ:— (೧) ಸ್ಥಳದ ಉದ್ದ-ಅಗಲಗಳ ಅಳತೆ (೨) ಖರ್ಚಿನ ಯಾದಿ ತಯಾರಿಸುವದು (೩) ನಿಬಂಧ.

**೪ ನೇ ವರ್ಗ**— ಚಟುವಟಿಕೆ:— ಪೂಜೆಯ ಸಾಮಾನು ಕೂಡಿಸುವದು. ವಿಷಯ:— (೧) ಜಮಾಖರ್ಚು (೨) ಹಾಡು.

**೫ ನೇ ವರ್ಗ**— ಚಟುವಟಿಕೆ:- ಆಮಂತ್ರಣ ಪತ್ರಿಕೆಗಾಗಿ ಪಾಕೀಟು ತಯಾರಿಸುವದು. ವಿಷಯ:— (೧) ಬರೆಹ: ಆಮಂತ್ರಣ ಪತ್ರಿಕೆಯ ಲೇಖನ (೨) ಚಿತ್ರಕಲೆ:— ಆಮಂತ್ರಣ ಪತ್ರಿಕೆಯನ್ನು ಅಲಂಕರಿಸುವದು.

**೬ ನೇ ವರ್ಗ**— ಚಟುವಟಿಕೆ:— ಧ್ವಜವಂದನೆಯ ಸ್ಥಳ ತಯಾರಿಸವದು. (೧) ಕ್ಷೇತ್ರಫಲ, (೨)ಬೇರೆ ಬೇರೆ ದೇಶಗಳ ನಿಶಾನೆಗಳು.

**೭ ನೇ ವರ್ಗ**— ಚಟುವಟಿಕೆ:— ಸಭೆ ಹಾಗು ಮೆರವಣಿಗೆಗಳಲ್ಲಿ ಸ್ವಯಂ ಸೇವಕರ ಕೆಲಸ, (೧) ಕಾರ್ಯ ನಿರ್ವಹಣೆಯ ಹೊಣೆಗಾರಿಕೆ (೨) ಮಹಾತ್ಮರ ಬಗ್ಗೆ ಭಾಷಣಗಳು.

**ಸೂಚನೆ**:— ಈ ಪ್ರಸಂಗದಲ್ಲಿ ಮಹಾತ್ಮಾಜಿಯವರ ಜೀವನ ಚರಿತ್ರೆ ಹಾಗು ಅವರ ತತ್ವಗಳ ಬಗ್ಗೆ ಆಯಾ ವರ್ಗಗಳಿಗೆ ಅನುಗುಣವಾಗುವಂತೆ ಶಿಕ್ಷಕರು ಮಕ್ಕಳಿಗೆ ತಿಳಿಸಿ ಕೊಡಬೇಕು. ಗಾಂಧೀ ಜಯಂತಿಯ ನಿಮಿತ್ತವೇ ಇಲ್ಲಿ ಅನುಬಂಧದ ಆಧಾರ. ಸಾಮೂಹಿಕ ಪ್ರಾರ್ಥನೆ ಮತ್ತು ಸಾಮೂಹಿಕ ನೂಲುವದು ಈ ಚಟುವಟಿಕೆಗಳನ್ನೂ ಕೈ ಕೊಳ್ಳಬೇಕು. ಮಕ್ಕಳ ನೈತಿಕ ಜೀವನಕ್ಕೆ ಪೋಷಕವಾಗುವಂತೆ ಸನ್ನಿವೇಶಗಳನ್ನು ಬಳಸಬೇಕು.

**ಒಕ್ಕಲಿಗರ ಹಬ್ಬ:— ಶೀಗೆ ಹುಣ್ಣಿವೆ,**

ಶಾಲೆಯ ಎಲ್ಲ ಮಕ್ಕಳು ಕೂಡಿ ಶೀಗೆ ಹುಣ್ಣಿವೆಯ ದಿನ ಊರ ಸಮೀಪದ ಹೊಲದಲ್ಲಿ ಊಟಕ್ಕೆ ಹೋಗುವದನ್ನು ನಿರ್ಣಯಿಸುವದು ಮತ್ತು ವರ್ಗವಾರ ಕೆಲಸ ಹಂಚುವದು. ಶಾಲೆಯ ಮುಖ್ಯ ಮಂತ್ರಿ ಎಲ್ಲ ವರ್ಗಗಳ ಬಾಲಕರಿಗೆ ತಮ್ಮ ಬುತ್ತಿಯನ್ನು ಕಟ್ಟಿಕೊಂಡು ಗೊತ್ತುಪಡಿಸಿದ ವೇಳೆಗೆ

ಶಾಲೆಗೆ ಬರಲಿಕ್ಕೆ ತಿಳಿಸುವದು. ಶಾಲೆಯಲ್ಲಿ ಎಲ್ಲ ಬಾಲಕರು ನೆರೆದ ಕೂಡಲೆ ಆಯಾ ವರ್ಗಗಳ ಮಂತ್ರಿಗಳು ಅವರನ್ನು ಶಿಸ್ತಿನಿಂದ ಹೊಲಕ್ಕೆ ಕರೆದುಕೊಂಡು ಹೋಗುವದು. ನಂತರ ಆಯಾ ವರ್ಗಗಳಿಗೆ ಹಂಚಿಕೊಟ್ಟ ಪ್ರಕಾರ ಕೆಲಸ ಮಾಡುವದು. ಶಿಕ್ಷಕರು ಯೋಗ್ಯ ಮಾರ್ಗದರ್ಶನ ಮಾಡ ಬೇಕು. ಕೆಲಸ ಮುಗಿದ ಮೇಲೆ ಶಿಸ್ತಿನಿಂದ ಬರುವದು. ಕೆಳಗೆ ತೋರಿಸಿ ದಂತೆ ಕೆಲಸವನ್ನು ಆಯಾ ವರ್ಗಗಳಿಗೆ ಹಂಚಿಕೊಡಬಹುದು. ೧ನೆ, ೨ನೆ, ಇ. ಸ್ಥಳದ ಸ್ವಚ್ಛತೆ, ೩ನೇ ಇ. ಎಲ್ಲರ ಬುತ್ತಿ ಒಂದು ಕಡೆ ಇಡಿಸುವದು. ೪ನೇ ಇ. ಬಾಳೆಯ ಎಲೆಗಗನ್ನು ಹಂಚುವದು, ೫ನೇ ಇ. ಕುಡಿಯುವ ನೀರಿನ ವ್ಯವಸ್ಥೆ, ೬ನೇ ಇ. ಬುತ್ತಿ ನೀಡುವದು, ೭ನೇ ಇ. ಸ್ಥಳ ಸ್ವಚ್ಛ ಮಾಡುವದು.

**ಸೂಚನೆ:—** ಊಟಮುಗಿದ ನಂತರ ಆಯಾ ವರ್ಗಗಳಿಗನುಸರಿಸಿ, ಗುರುಗಳು ಬಾಲಕರಿಗೆ ಬೆಳೆಗಳ ನಿರೀಕ್ಷಣೆ ಹಾಗು ಅವುಗಳ ಮಾಹಿತಿ ಮಾಡಿಸಬೇಕು. ವಿವಿಧ ವಿನೋದಾವಳಿಗಳನ್ನು ಏರ್ಪಡಿಸಬಹುದು. ಮರು ದಿನ ಶಾಲೆಯಲ್ಲಿ ಅಂದು ನಿರೀಕ್ಷಿಸಿದ ಸಂಗತಿಗಳ ಬಗ್ಗೆ ಚರ್ಚಿಸಬೇಕು ಇಲ್ಲವೆ ಬರೆಯಿಸಬೇಕು. ಇದೇ ರೀತಿಯಾಗಿ ಶರತ್‌ಪೌರ್ಣಿಮಾ ಸಮಯ ದಲ್ಲಿ ಬೆಳದಿಂಗಳ ಊಟ, ಆಟ–ನೋಟಗಳನ್ನು ಸಾಮೂಹಿಕವಾಗಿ ಏರ್ಪಡಿ ಸಬಹುದು. ಸ್ಥಳಿಕ ಪರಿಸ್ಥಿತಿಗೆ ಅನುಕೂಲವಾಗುವಂತೆ ಒಕ್ಕಲಿಗರ ಹಬ್ಬ ಗಳನ್ನು ಶಾಲೆಯ ಮಕ್ಕಳು ಆಚರಿಸಬೇಕು.

**ಸಾಂಸ್ಕೃತಿಕ ಹಬ್ಬಗಳು:**

ಈ ವಿಭಾಗದಲ್ಲಿ ಪ್ರಸಿದ್ಧ ಕವಿ, ಶಾಸ್ತ್ರಜ್ಞ, ಕಲಾವಂತ ಇವರ ದಿನಾ ಚರಣೆ, ಅಥವಾ ಶಾಲೆಯ ಹುಟ್ಟು ಹಬ್ಬ, ಶಾರೀರಿಕ ಶಿಕ್ಷಣ ದಿನಾಚರಣೆ, ಬಾಲಕರ ದಿನಾಚರಣೆ ಮೊದಲಾದ ಸಾಂಘಿಕ ಚಟುವಟಿಕೆಗಳು ಸೇರುವವು. ವ್ಯಕ್ತಿಯ ದಿನಾಚರಣೆಯನ್ನು ಮಾಡುವಾಗ ಮೇಲೆ ತೋರಿಸಿದ ಗಾಂಧೀ ಜಯಂತಿಯನ್ನು ಆಚರಿಸುವ ಕಾರ್ಯಕ್ರಮದಂತೆ ಏರ್ಪಡಿಸಿಕೊಳ್ಳಬಹುದು. ಸಾಂಘಿಕ ಚಟುವಟಿಕೆಗಳನ್ನು ಏರ್ಪಡಿಸುವಾಗ ಮೇಲೆ ಉದಾಹರಿಸಿದ ಗಜಾ ನನೋತ್ಸವದ ಕಾರ್ಯಕ್ರಮದಂತೆ ಸಂಘಟಿಸಬಹುದು. ಅವಶ್ಯಕಂಡ ಮಾರ್ಪಾಡು ಮಾಡಿಕೊಳ್ಳಬಹುದು.

---

## *BIBLIOGRAPHY*

## ಸಹಾಯಕ ಸಾಹಿತ್ಯ

BOOKS PUBLISHED BY HINDUSTANI TALIMI SANGH


1 Educational Reconstruction
2 Basic National Education
3 One step forward
4 Two years of work
5 Seven years of work
6 The Latest Fad by J. B. Kriplani
7 समग्र नई तालीम

OTHER BOOKS :

8 The Wardha Scheme of Education by C. J. Varkey
9 An Intelligent man's guide to wardha Scheme of Education by B. Gupta
10 Why the Village Movement ? by J. C. Kumarappa
11 The Gandhian Plan of Economic Development for India by Prin. S. N. AGarwal
12 Adolph Ferriere—The Activity School, edited by K. G. Sayidain
13 The message of New Education by Prof. K. G. Sayidain Education Tomorrow Series, Book-let No. 7
14 The Activity Programme in Indian Eduction by Rajanayagam
15 Practical and Artistic Activities in the Schools by U. M. Edmonds and E. A. Waterfall

16 Creative Education by W. M. Ryburn
17 Progressive School by W. M. Ryburrn
18 The Schools of Tomorrow by John Dewy
19 Education by Swami Vivekanand
20 Education in Modern India by Anathnath Basu M. A. (Lond)
21 Our Present Day Education by Hanuman-Prasad Poddar
22 Post-War Educational Development in India Report by the central Advisory Board of Education, 1944
23 A Symposium on Post-War Education in India edited by T. K. N. Menon
24 National Education (Issue 1938)
25 Report on Vocational Education in India by Abbott and Wood
26 Basic Psychology by Ross
27 ರಾಷ್ಟ್ರೀಯ ಶಿಕ್ಷಣ ಶ್ರೀ. ರಂ. ದಿವಾಕರ
28 ಶಿಕ್ಷಕರ ಕೈಪಿಡಿ; ಸಂಗ್ರಾಹಕರು, ನಾಯಕ ಜಯಂತರಾಯರು ೧೯೪೧
29 ವಿನೋಬಾ ವಿಚಾರ ಲಹರಿ, ಎ. ವಿ. ಶ್ರೀನಿವಾಸ ಮೂರ್ತಿ
30 ಭಾರತೀಯ ಸಂಸ್ಕೃತಿ; ಸಾನೆ ಗುರೂಜಿ, ಅನುವಾದಕ, ಭಾ. ಗೋ. ಗೋಖಲೆ
31 ಶಿಕ್ಷಣ ತತ್ವಪ್ರದರ್ಶನ; ಡಾ. ಎಂ. ಸಿದ್ಧಲಿಂಗಯ್ಯ ಮತ್ತು ಎನ್. ಎಸ್. ವೀರಪ್ಪ
32 ಶೈಕ್ಷಣಿಕ ಮನಶ್ಶಾಸ್ತ್ರ; ಡಾ. ವ್ಹಿ. ಕೆ. ಜವಳಿ

# ನಮ್ಮ ಇತರ ಪುಸ್ತಕಗಳು

೧. ಶಿಕ್ಷಣವೂ ಕಲಿಸುವ ಕ್ರಮವೂ

೨. ಐವರು ಶಿಕ್ಷಣ ಸುಧಾರಕರು


ಸಂಪಾದಕರು :

**ಬಿ. ಎಸ್. ಹಂಚಿನಾಳ, ಬಿ. ಎ., ಬಿ., ಟಿ.**

ಲೇಖಕರು

**ಆಯ್. ಸಿ. ತಂಬದ, ಬಿ. ಎ., ಬಿ. ಟಿ.**

**ಎಂ. ಜಿ. ಹಂದ್ರಾಳ, ಬಿ. ಎ. (ಆನರ್ಸ), ಬಿ. ಟಿ., ಡಿ. ಸಿ. ಇ.**

**ಡಿ. ಎಸ್. ಕರ್ಕಿ, ಎಂ. ಎ., ಬಿ. ಟಿ.**




ಇವೆರಡೂ ಪುಸ್ತಕಗಳು
ಟ್ರೇನಿಂಗ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿರುವ ನೆಯ ವರ ದ
ವರ್ಗದ ಶಿಕ್ಷಕ-ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿವೆ.


ಮೃತ್ಯುಂಜಯ ಮುದ್ರಕರು, ಕಿಲ್ಲೆ, ಧಾರವಾಡ